

ಕರ್ನಾಟಕ ಸರಕಾರ

ಕಾದಂಬರಿ



# ಶಾಪ

ವಿ.ಎಂ.ಇನಾಂದಾರ್

ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ

# ಶಾಪ

ವಿ. ಎಂ. ಇನಾಂದಾರ್






ವಿಶ್ವ ಕನ್ನಡ ಸಮ್ಮೇಳನ
14-3ಎ, ನೃಪತುಂಗ ರಸ್ತೆ, ಬೆಂಗಳೂರು-560 002

*Sāpa* - A Novel By Professor V. M. Inamdar,
Published by K. Jayacharya, K.A.S., Additional Director,
Directorate of Kannada and Culture (Viswa Kannada
Sammelana) 14/3-A, Nrupathunga Road,
Bangalore-560 002
Pages 274 + iv - 1983-5000 Copies



 

Edition 5th - 1983



ಬೆಲೆ : ರೂ. 2-50



ಮುದ್ರಕರು :
ಕೀರ್ತಿ ಪ್ರಿಂಟರ್ಸ್,
78/117, ಸರ್ವೆಯರ್ ಸ್ಟ್ರೀಟ್, ಬಸವನಗುಡಿ
ಬೆಂಗಳೂರು-560 004.

ಆರ್. ಗುಂಡೂರಾವ್
ಮುಖ್ಯ ಮಂತ್ರಿ



ವಿಧಾನ ಸೌಧ
ಬೆಂಗಳೂರು

ದಿನಾಂಕ ೧೮-೯-೧೯೮೨

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ ಬೆಲೆಗೆ

ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದು ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆಮಾಡುವಲ್ಲಿ ಸಾಹಿತ್ಯ ಸಮಿತಿ ಪರಿಚಿತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ, ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯ ಮಂತ್ರಿಗಳು

# 1

ಎಂಟುಹತ್ತು ದಿನಗಳಿಂದ ಮಾಧವ ಯಾವುದೋ ಒಂದು ಅಸ್ಪಷ್ಟವಾದ ವಿಚಾರದ ಸುಳಿಯಲ್ಲಿ ಸಿಕ್ಕು ಒದ್ದಾಡುತ್ತಿದ್ದ. ಏನೆಂದು ಕೇಳಿದರೆ ಹೇಳುವಂಥ ದೇನೂ ಇರಲಿಲ್ಲವಾದರೂ ಮನಸ್ಸು ಹಿಡಿತದಲ್ಲಿರದೆ ನೂರಾರು ಯೋಚನೆ ಗಳಿಗೆ ಈಡಾಗುತ್ತಿತ್ತು. ಈಗ ಮೂರುನಾಲ್ಕು ದಿನಗಳಿಂದಂತೂ ವಿಮನಸ್ಕತೆ ಆತನ ಮುಖದಲ್ಲಿ ಮನೆಮಾಡಿಕೊಂಡಿತ್ತು. ಆತ ಸರಿಯಾಗಿ ಊಟವನ್ನೂ ಮಾಡದಿದ್ದುದನ್ನು ಆತನ ತಾಯಿ ರಾಧಕ್ಕ ನೋಡಿ ನೊಂದುಕೊಂಡು, ಒಂದೆರಡು ಸಲ ಆತನನ್ನು ವಿಚಾರಿಸಿಯೂ ಇದ್ದರು. ಪರೀಕ್ಷೆ ಸಮೀಪ ಬಂದುದರಿಂದ ಓದು ಹೆಚ್ಚಾಗಿರಬೇಕೆಂದು ಅವರು ಸಮಾಧಾನ ತಂದು ಕೊಂಡಿದ್ದರು. ಆದರೆ ಪರೀಕ್ಷೆ ಸಮೀಪ ಬಂದ ಹಾಗೆ ಮಾಧವನಿಗೆ ಓದಿನ ಕಡೆಗೆ ಗಮನ ಹರಿಯುವುದೇ ಕಡಿಮೆಯಾಗಿತ್ತು. ಇತ್ತೀಚಿನ ವಾರದಲ್ಲಿ ಯಂತೂ ಪುಸ್ತಕವನ್ನು ಕೈಯಲ್ಲಿಯೂ ಹಿಡಿದಿರಲಿಲ್ಲ. ಹೀಗೆಯೇ ನಡೆದರೆ, ಪರೀಕ್ಷೆಯ ಗತಿಯೇನು ಎಂದು ಒಮ್ಮೊಮ್ಮೆ ಹೆದರಿಕೆಯೂ ತಲೆದೋರಿ, ಮನ ಸ್ಸಿನ ದುಗುಡವನ್ನು ಇಮ್ಮಡಿಸುತ್ತಿತ್ತು. ಅಳುಕಿನ ಸ್ವಭಾವದವನಾದ್ದರಿಂದ ಮನೆಯಲ್ಲಿಯ ಸಣ್ಣಪುಟ್ಟ ಮಾತುಗಳೂ ಆತನ ಅಂತರಂಗವನ್ನು ಭೇದಿಸಿ, ಸಾವಿರ ಯೋಚನೆಗಳಿಗೆ ಆತನನ್ನು ಗುರಿಮಾಡುತ್ತಿದ್ದವು.

ತನ್ನ ಮನಸ್ಸನ್ನೇ ಬಿಚ್ಚಿ ನೋಡಿ. ವಿವರಗಳನ್ನೆಲ್ಲವನ್ನೂ ತಿಳಿದುಕೊಳ್ಳಲು ಮಾಧವ ಶಕ್ತನಾಗಿದ್ದರೆ ಆತ ತನ್ನ ವಿಮನಸ್ಕತೆಯ ಕಾರಣವನ್ನು ಗುರುತಿಸ ಬಹುದಾಗಿತ್ತು. ಆದರೆ ಸ್ವಭಾವತಃ ಆ ಶಕ್ತಿಯನ್ನು ಪಡೆಯದೆ ಒಂದು ಯೋಚನೆಯಿಂದ ನೂರು ಬಗೆಯ ಯೋಚನೆಗಳನ್ನು ಕಟ್ಟಿಕೊಂಡು, ಸಾವಿರ ರೀತಿಯಲ್ಲಿ ಸಂಕಟಪಡುವುದೇ ಮಾಧವನ ಪಾಲಿಗೆ ಕಟ್ಟಿಟ್ಟಂತಿತ್ತು. ಮನೆ ಯಲ್ಲಿಯ ವಾತಾವರಣವಾದರೂ ಆತನನ್ನು ನೆಮ್ಮದಿಯಲ್ಲಿ ಇರಗೊಡುವಂತಹ ದಾಗಿರಲಿಲ್ಲ. ಎಷ್ಟೋ ಸಲ 'ನಾನು ಈ ಮನೆತನದಲ್ಲಿ ಹುಟ್ಟಲೇಬಾರ ದಾಗಿತ್ತು. ಯಾವ ಶಾಪಕ್ಕೆ ಇದು ಪ್ರಾಯಶ್ಚಿತ್ತವೊ?' ಎಂದು ಮಾಧವ ನೊಂದುಕೊಂಡು ಅಂದದ್ದೂ ಉಂಟು. ಹಾಗೆ ನೋಡಿದರೆ, ದುಡ್ಡಿಗೆ ಕೊರತೆ ಇರಲಿಲ್ಲ. ಹತ್ತು ವರ್ಷಗಳ ಹಿಂದೆ ತಂದೆ ತೀರಿಹೋಗಿದ್ದರೂ ಮನೆತನವನ್ನು ನಡೆಸಿಕೊಂಡು ಹೋಗುತ್ತಿದ್ದ ಕಕ್ಕ ಬಹಿರಂಗವಾಗಿಯಾದರೂ ಮಾಧವನಿಗೆ

ಯಾವ ಬಗೆಯಲ್ಲಿಯೂ ಕೊರತೆಯೆನಿಸದ ಹಾಗೆ ನೋಡಿಕೊಂಡು ಹೋಗುತ್ತಿದ್ದರು. ತಾಯಿ ರಾಧಕ್ಕನಿಗೂ ಕಕ್ಕಿ ಸೀತಾಬಾಯಿಗೂ ಎಷ್ಟೋ ಸಲ ಮನಸ್ತಾಪ ನಡೆಯುತ್ತಿದ್ದರೂ ಕಕ್ಕನ ತೋರಿಕೆಯ ಪ್ರೇಮಾವಿಷ್ಕಾರದ ಮೂಲಕ ಎಲ್ಲವೂ ಕೆಲಪಟ್ಟಿಗಾದರೂ ಸುಸೂತ್ರವಾಗಿ ನಡೆಯುತ್ತಿತ್ತೆಂದೇ ಹೇಳಬೇಕು. ಆದರೆ ಮನೆತನದಲ್ಲಿಯ ಆಗುಹೋಗುಗಳೆಲ್ಲವೂ ತೋರಿಕೆಯ ಎದುರು ಸುಗಮವಾಗಿ ನಡೆಯುತ್ತಿದ್ದರೂ ತೆರೆಯ ಮರೆಯಲ್ಲಿಯ ಸತ್ಯ ಆಗೀಗ ಕಣಕಿಸುತ್ತಿರುವಂತೆ ಇಣಿಕಿ ನೋಡಿ ನಗುತ್ತಿತ್ತು. ಆ ತೆರೆಯ ಮರೆಯಲ್ಲಿಯ ಸತ್ಯದ ಸ್ವರೂಪದರ್ಶನವೇ ಮಾಧವನನ್ನು ವಿಪರೀತ ತಲ್ಲಣಗೊಳಿಸುತ್ತಿತ್ತು. 'ಈ ಮನೆಯಲ್ಲಿರಬಾರದು. ದುಡ್ಡಿನಿಂದ ಎಷ್ಟು ಅನುಕೂಲ ಪರಿಸ್ಥಿತಿ ಇರಬಹುದಾದರೂ ಅದನ್ನು ತೊರೆದು ದೂರವಾಗಿಯೇ ಇರಬೇಕು' ಎಂಬ ಯೋಚನೆಯನ್ನು ಬಲಪಡಿಸುತ್ತಿತ್ತು.

ಮಾಧವನ ಈ ಸ್ವತಂತ್ರವೃತ್ತಿ ಮನೆಯಲ್ಲಿ ಯಾರಿಗೂ ಸರಿಬೀಳುತ್ತಿರಲಿಲ್ಲ. ಅನುಕೂಲವಾಗಿದ್ದುಕೊಂಡು ಮಗ ಒಂದು ದಾರಿಗೆ ತಲುಪಬೇಕೆಂದು ಕೊಳ್ಳುತ್ತಿದ್ದ ರಾಧಕ್ಕನಿಗೆ ಮಾಧವನ ನಡೆನುಡಿಗಳ ಅರ್ಥವೇ ಆಗುತ್ತಿರಲಿಲ್ಲ. ಈ ಸ್ವತಂತ್ರವೃತ್ತಿಯೇ ಒಂದಿಲ್ಲೊಂದು ದಿನ ಮಾಧವನ ತಂದೆಯ ಆಸ್ತಿಯ ಬಗೆಯಲ್ಲಿ ತೊಂದರೆ ಉಂಟುಮಾಡುವುದು ಖಂಡಿತವೆಂದು ತಿಳಿದಿದ್ದ ಕಕ್ಕ ರಾಮರಾಯರು ಮಾತಿನಿಂದ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸದಿದ್ದರೂ ಗತಿಸಿಹೋದ ಅಣ್ಣನ ಆಸ್ತಿಯನ್ನು ತಮ್ಮೊಟ್ಟಿಗೆ ಭದ್ರಪಡಿಸಿಕೊಳ್ಳುವ ಕೆಲಸದಲ್ಲಿ ಒಳ್ಳೆ ಜಾಗರೂಕರಾಗಿರುತ್ತಿದ್ದರು. ಮಾಧವನ ಬಗೆಯಲ್ಲಿ ಅವರಿಗೆ ಇರಬೇಕಾದ ವಾತ್ಸಲ್ಯ ಇರದಿದ್ದ ಮೂಲಕವೇ ಆತ ತನಗೆ ಸಲ್ಲಬೇಕಾದುದನ್ನು ಕೂಡಲೇ ಬೇಡಿಯಾನೆಂದು ಆತನನ್ನು ಅಸಂತೋಷಗೊಳಿಸುತ್ತಿರಲಿಲ್ಲ. ಆದರೆ ಯಾವುದೂ ಬೇಕಿರದ ಮಾಧವ ಕಕ್ಕನ ಈ ತೋರಿಕೆಯ ವಾತ್ಸಲ್ಯದಿಂದ ಹೆಚ್ಚಾಗಿ ನೊಂದುಕೊಳ್ಳುತ್ತಿದ್ದನಲ್ಲದೆ ಸಮಾಧಾನವನ್ನು ಹೊಂದುತ್ತಿರಲಿಲ್ಲ. ಈ ತೆರದ ಕಪಟದ ಮೂಲಕ ಮಾಧವನಿಗೆ ಆ ಮನೆ, ಆ ಮನೆತನ, ಆ ಆಸ್ತಿ, ಆ ಎಲ್ಲದರ ಸಂಬಂಧವೇ ಬೇಡವೆನಿಸುತ್ತಿತ್ತು. ಇದೆಲ್ಲವೂ ಬೇಡವೆನಿಸಲು ಆತನ ದೃಷ್ಟಿಯಲ್ಲಿ ಮುಖ್ಯವಾದ ಕಾರಣವೆಂದರೆ ಕಪಟನಾಟಕಕ್ಕಿಂತಲೂ ಹೆಚ್ಚಾಗಿ ಆ ಮನೆತನದ ಊರ್ಜಿತಾವಸ್ಥೆಯ ಹಿಂದೆ ಹುದುಗಿಕೊಂಡ: ನಿಂತ ಪಾಪ ! ಹತ್ತಾರು ಮನೆತನಗಳನ್ನೇ ಮುರಿದು ಮೂಲೆಗುಂಪುಮಾಡಿ ದುಡ್ಡು ಗಳಿಸಿದ ತನ್ನ ತಂದೆ ಮನೆತನಕ್ಕೆ ಅನುಕೂಲವನ್ನು ಒದಗಿಸಿಕೊಟ್ಟಿದ್ದರೂ

ಮಾಧವನಿಗೆ ಈ ಪ್ರಪಂಚದ ಅರಿವು ಬರತೊಡಗಿದ ಹಾಗೆ ಆ ಅನುಕೂಲ ಪರಿಸ್ಥಿತಿಯೇ ಆತನ ಮನಸ್ಸನ್ನು ಕೊರೆಯುತ್ತಿತ್ತು ; ಮನಶ್ಶಾಂತಿಯನ್ನು ಹಾಳುಮಾಡುತ್ತಿತ್ತು. ಎಂದಿಗೊಮ್ಮೆ ಈ ಮನೆಯನ್ನು ಬಿಟ್ಟುಕೊಟ್ಟು ಹೋಗಲು ಸಾಧ್ಯವಾದೀತೆಂದು ದಾರಿಕಾಯುವಂತೆ ಮಾಡುತ್ತಿತ್ತು.

ಕಾಲೇಜು ವಿಧ್ಯಾಭ್ಯಾಸದ ಕೊನೆಯ ಮೆಟ್ಟಲಲ್ಲಿದ್ದನಾದ್ದರಿಂದ ಪರೀಕ್ಷೆ ಯಾದೊಡನೆಯೇ ಮುಂಬಯಿಯನ್ನು ಸೇರಿ, ಕೆಲಸ ಹಿಡಿಯತಕ್ಕದ್ದೆಂಬ ಯೋಚನೆಯೇ ಆತನಿಗೆ ಕತ್ತಲಲ್ಲಿ ಕೈದೀಪದಂತೆ ಹುರುಪು ಕೊಡುತ್ತಿತ್ತು. ಆದರೆ ಓದು ಸಾಗದಿದ್ದುದನ್ನು ನೆನೆದಾಗ ಎದೆ ನಡುಗುತ್ತಿತ್ತು. ತನ್ನ ತೊಂದರೆಯೇ ಸಾಲದ್ದಕ್ಕೆ ಕಾಲೇಜಿನಲ್ಲಿಯ ಸಾಹಿತ್ಯ ಸಂಘದ ಕಾರ್ಯ ದರ್ಶಿತ್ವವೊಂದು ಕೊರಳಿಗೆ ಬಿದ್ದು, ಎಷ್ಟೋ ಸಲ ಮಾಧವನ ಮನಸ್ಸನ್ನು ಬೇರೆಡೆಯಲ್ಲಿ ಹರಿಯಿಸಿ ನೆಮ್ಮದಿಯನ್ನು ಕೊಡುವಂಥದಾಗಿದ್ದುದರಿಂದಲೇ ಅದರ ಭಾರವನ್ನು ಕೊನೆಯ ವರ್ಷದಲ್ಲಿಯೂ ಹೊತ್ತುಕೊಂಡಿದ್ದ. ಪರೀಕ್ಷೆ ಸಮೀಪಿಸಿದ ಹಾಗೆ ಕಾಲೇಜಿನಲ್ಲಿ ವಾರ್ಷಿಕೋತ್ಸವಗಳ ಉತ್ಸವ. ಮರುದಿನ ಸಾಹಿತ್ಯ ಸಂಘದ ಕಾರ್ಯಕ್ರಮ. ನೂರು ಏರ್ಪಾಡುಗಳನ್ನು ಮಾಡಬೇಕು. ಆದರೆ ಯಾವುದಕ್ಕೂ ಮನಸ್ಸಿಲ್ಲದೆ ತೀರ ದಣಿದವನಂತೆ ಕಾಲೇಜಿನ ಕಾಫೆಯ ಬೆಂಚಿನಲ್ಲಿ ಮಾಧವ ಕುಳಿತಿದ್ದಾನೆ. ಸುತ್ತಲೂ ಹತ್ತಾರು ವಿದ್ಯಾರ್ಥಿಗಳು ಒಳ್ಳೇ ಉಲ್ಲಾಸದಲ್ಲಿ ಉಪಾಹಾರ ನಡೆಸಿದ್ದಾರೆ. ಅವರ ನಿಶ್ಚಿಂತವಾದ ರೀತಿ ಮಾಧವನಲ್ಲಿ ಅಸೂಯೆಯನ್ನು ಕೆರಳಿಸುತ್ತಿದೆ.

"ಪರೀಕ್ಷೆ ಸಮೀಪ ಬಂದ ಹಾಗೆ ಒಳ್ಳೊಳ್ಳೆಯ ಪಿಕ್ಚರುಗಳನ್ನು ತರಿಸತಾ ಇದ್ದಾನೆ, ಆ ಮಹಾನುಭಾವ ! ಈ ವಾರ ಪುಸ್ತಕಕ್ಕೂ ನನಗೂ ದರ್ಶನವೇ ಇಲ್ಲ !" ಎಂದು ಒಬ್ಬ.

"ಅಂಥ ಯಾವ ಪಿಕ್ಚರ್ ಬಂದಿದೆಯೊ ?" ಎಂದು ಮೂರನೆಯವ ಬಾಯಿ ಹಾಕಿದ.

"ನಿನಗೇನು ಮಾಡುವುದಿದೆ ಪಿಕ್ಚರ್ ಸಮಾಚಾರ ! ನಿನಗೆ ಸಿನೇಮಾ ಸಮಾಚಾರ ಹೇಳುವುದೆಂದರೆ, ಅದೇನೋ ಹೇಳುತ್ತಾರಲ್ಲಪ್ಪಾ, ಯಾರ ಮುಂದೆಯೋ ಕಿನ್ನರಿ...."

"ಅವನನ್ನೇನು ಮಾಡುತ್ತೀ ? ಆತ ಸಿನೇಮಾಕ್ಕೆ ಹೋದರೆ ಅಂದು ಪ್ರಪಂಚದಲ್ಲಿ ಎಲ್ಲಿಯಾದರೂ ಭೂಕಂಪವಾದರೂ ಆಗಬೇಕು, ಯಾವ ಅರಸ ನಾದರೂ ಸಾಯಬೇಕು ! ಅದಿರಲಿ, ಯಾವ ಚಿತ್ರ ಅದು, ಈಗ ನೀನು

ಹೇಳುವುದು ?" ಎಂದು ಎರಡನೆಯುವ.

"ಯಾವ ಚಿತ್ರವೇ ? 'ನರ್ತಕಿ' ಬಂದು ನಾಲ್ಕು ದಿವಸವಾಯಿತು. ನಾಲ್ಕೂ ದಿನ ಹೋಗಿ ಬಂದರೂ ನನಗೆ ತೃಪ್ತಿಯಿಲ್ಲ. ಮತ್ತೆ ಇವತ್ತು ಹೋದರೂ ಸರಿಯೆ !"

"ಅಷ್ಟು ಚೆನ್ನಾಗಿದೆಯೆ ?"

"ಚೆನ್ನಾಗಿದೆಯೆಂದು ಕೇಳುತ್ತೀಯ ? ಈ ಸಲ ಪರೀಕ್ಷೆ ಗೋತಾ ಹೊಡೆದರೂ ಪರಿವೆಯಿಲ್ಲ; ಈ ಊರಲ್ಲಿ ಆ ಚಿತ್ರ ಇದ್ದಷ್ಟು ದಿನವೂ ನಾನು ಹೋಗತಕ್ಕವನೇ. ಬರುವ ಹಾಗಿದ್ದರೆ ಹೇಳು. ಮೊದಲ ಆಟಕ್ಕೆಯೇ ಹೊಗುವ."

"ಇಂದು ? ಮೊದಲ ಆಟಕ್ಕೆಯೆ ?" ಎಂದು ಎರಡನೆಯುವನು ಅನುಮಾನಿಸುತ್ತಿರುವಾಗಲೇ ಮೂರನೆಯುವ ತನ್ನ ವಿಚಾರವನ್ನು ಮಂಡಿಸಿದ :

"ಅಲ್ಲಪ್ಪಾ, ನನಗಂತೂ ಚಿತ್ರಪಟಗಳ ಸಮಾಚಾರ ಅಷ್ಟೊಂದು ತಿಳಿಯುವುದಿಲ್ಲವೆನ್ನು ; ಆದರೂ ಈ ಪರಿ ಹುಚ್ಚು ಹಿಡಿದವರಂತೆ ನೋಡಿದ್ದನ್ನೇ ನೋಡುವುದೆಂದರೆ...."

"ನೋಡಿದ್ದನ್ನೇ ನೋಡುವುದು, ಹಾಡಿದ್ದನ್ನೇ ಹಾಡುವುದು ! ನಿನಗೇನು ? ನೀನು ಇನ್ನೂ ಅದನ್ನು ನೋಡಲಿಲ್ಲ ಇದು ನಮ್ಮ ಪುಣ್ಯ ! ನೊಡಿದೆಯೆಂದರೆ ಸಿನೇಮಾ ಬಿಟ್ಟು ಕೋಣೆಗೆ ಬಂದರೆ ಆಣೆ ! ಆ ಸ್ಟಾರ್, ಓಹ್ ! ಆಕೆ ಎಲ್ಲಿದ್ದರೂ ಆ ಊರಿನ ಹಾದಿಯನ್ನು ಹಿಡಿದೀಯು !"

"ಆಯಿತು. ನಿನ್ನ ವಿಚಾರವನ್ನೇ ಹೇಳುತ್ತೀಯಂತೆ ಕಾಣುತ್ತದೆ!"

"ಅದು ಹೋಗಲಿ. ನೀನು ಬರುವವನೋ ಇಲ್ಲವೋ "?

"ಇಂದೇ ಸಾಯಂಕಾಲ ಅಂದರೆ ಸಾಧ್ಯವಿಲ್ಲ !"

"ಯಾಕೆ ?"

"ಯಾಕೇನು ? ಹೀಗೆಯೇ ಮೊದಲಿನ ಒಂದು ಎಂಗೇಜ್‌ಮೆಂಟ್ !"

"ಓಹೊ !" ಎಂದು ಮರ್ಮ ತಿಳಿದವನಂತೆ ಮೊದಲಿನವ ತನ್ನ ಕಣ್ಣು ಚಿವುಟಿ ನಕ್ಕ.

"ಹಾಗೇನು ಇಲ್ಲಪ್ಪ !"

"ಇರಲಿ ಬಿಡೊ, ಯಾಕೆ ಈ ಮಾತು ? ಎಷ್ಟಾದರೂ ಸಿನೇಮಾ ನೋಡಿ ಆನಂದಪಡುವವರು ನಾವು ಸಿನೇಮಾ ಮಾಡಿ ಆನಂದಪಡುವವ ನೀನು !" ಎಂದು ಮೊದಲಿನವ.

"ಏನೋ, ಏನಿದು ಸಮಾಚಾರ ?" ಎಂದು ಎರಡನೆಯುವನ ಕುತೂಹಲ.

"ಕಾಲೇಜಿಗೆ ಯಾತಕ್ಕೆ ಮಣ್ಣು ಹುಯ್ದುಕೊಳ್ಳಲಿಕ್ಕೆ ಬಂದೆಯೋ, ಮಹಾರಾಯ ? ಕಣ್ಣಿದ್ದ ಕುರುಡ ನೋಡು ನೀನು !...."

ತನ್ನ ಸಹಪಾಠಿಯೊಬ್ಬಳ ಗುಟ್ಟು ರಟ್ಟಾದೀತೆಂಬ ಹೆದರಿಕೆಯಿಂದ ಮೂರನೆಯವ ಮಾತು ಬದಲಾಯಿಸಲೆಂದು ನಡುವೆಯೇ ಬಾಯಿಹಾಕಿ ಹೇಳಿದ.

"ನಾಳೆ ಸಾಯಂಕಾಲವಾದರೆ ಬರುವೆ."

"ನಾಳೆ ಸಾಯಂಕಾಲವಂತೆ, ನಿನ್ನ ತಲೆ !"

"ಯಾಕೊ ?"

"ನಿನಗೆ ತಲೆಯಿಲ್ಲ ಎನ್ನುವುದು ಇದಕ್ಕಾಗಿಯೇ !"

"ಏನಾಯಿತೀಗ ?"

"ಆಗುವುದೇನು ? ನಾಳೆ ಸಾಯಂಕಾಲ ಸಿನೇಮಾ ಸಾಧ್ಯವೇ ಇಲ್ಲ!"

"ಯಾಕೆ?"

"ನಾಳೆ ಸಾಯಂಕಾಲ ಸಾಹಿತ್ಯ ಸಂಘದ ವಾರ್ಷಿಕೋತ್ಸವ !"

"ಇದ್ದರೆ ನಮಗೇನಂತೆ ?"

"ಅದಕ್ಕೇ ನಾನು ಹೇಳುವುದು— ನಿನಗೆ ತಲೆ ಇಲ್ಲ ಎಂದು."

"ನೀನು ಸಿನೇಮಾ ಭಕ್ತ ಎಂಬುದು ಗೊತ್ತು. ಆದರೆ ಸಾಹಿತ್ಯ ಭಕ್ತ ಅನ್ನುವುದು ಗೊತ್ತಾಗಲಿಲ್ಲ !"

"ತಲೆ ಇಲ್ಲ ಎಂದು ಹೇಳಿದೆನಲ್ಲ !"

"ಯಾಕೆ ಏನು ವಿಶೇಷ ?"

"ಕಾರ್ಯಕ್ರಮ ನೋಡಿಲ್ಲವೇ ?"

"ಏನಿದೆ ಕಾರ್ಯಕ್ರಮ ?".

"ಕಾರ್ಯಕ್ರಮ ಬೇಕಾದಷ್ಟಿದೆ. ಆದರೆ ನನಗೆ ಇಂಟರೆಸ್ಟ್ ಒಂದರಲ್ಲಿಯೆ !"

"ಭಾರೀ ಆಯ್ತಪ್ಪಾ ನಿನ್ನದೂ ! ಏನಿದೆ ಹೇಳಬಾರದೆ ?"

"ಮಿಸ್ ಸರೋಜಿನಿಯ ನೃತ್ಯ ಮತ್ತು ಗಾಯನ !"

"ಆಂ ?"

"ಹುಂ ! ಮಿಸ್ ಸರೋಜಿನಿಯ ನೃತ್ಯ ಮತ್ತು ಗಾಯನ. ಎಲ್ಲಿದ್ದೀಯಾ ಮಂಕೇ ?"

"ಏನು ನಾಳೆಯೆ ?"

"ಹುಂ....ಹುಂ....ನಾಳೆ....ನಾಳೆ...."

ಮೂವರ ಮುಖದಲ್ಲಿಯೂ ಕುತೂಹಲ. ಆನಂದ, ಅವರ ನಿಶ್ಚಿತವಾದ

ಬಗೆಯನ್ನು ನೋಡಿ ಅಸೂಯೆಪಡುತ್ತಿದ್ದ ಮಾಧವನ ಮನಸ್ಸಿನಲ್ಲಿ ಅವರ ಉಚ್ಛೃಂಖಲವೃತ್ತಿಯ ಬಗೆಯಲ್ಲಿ ಜುಗುಪ್ಸೆ ಹುಟ್ಟಿಕೊಂಡಿತು. ಹೊಸ ದಾಗಿ ಕಾಲೇಜು ಸೇರಿದವರು! ಬೇಡಿದಂತೆ ದುಡ್ಡು ಸುರಿದು ವಿದ್ಯಾಭ್ಯಾಸ ಕ್ಕೆಂದು ಇವರ ಮನೆಯವರು ಇವರನ್ನು ಕಾಲೇಜು ಸೇರಿಸಿದರು. ಇವರು ಇಲ್ಲಿ ಮಾಡುತ್ತಿದ್ದುದೇನು? ಎಂಬೆಲ್ಲ ವಿಚಾರಗಳು ಮೂಡುತ್ತಿರುವಾಗಲೇ ಕಾಲೇಜಿನ ಗಂಟೆಯಾಯಿತು. ಯಾವ ಹೊಣೆಗಾರಿಕೆಯ ಅರಿವನ್ನೂ ಬೆಳೆಯಿಸಿಕೊಳ್ಳದೆ ಮುಂದೆ ಸಾಗುತ್ತಿದ್ದ ವಿದ್ಯಾರ್ಥಿವೃಂದದ ಪ್ರತೀಕಗಳಾ ದಂತಿದ್ದ ಆ ಮೂವರಂಥವರೇ ನಾಳಿನ ಬದುಕಿಗೆ ಆಧಾರ! ಹೀಗಿರುವ ಮುಂದಿನ ಬಗೆಯಲ್ಲಿ ಯಾವ ಆಸೆಯನ್ನಿಟ್ಟುಕೊಳ್ಳಬಹುದು? ಎಂದು ಕೇಳಿ ಕೊಳ್ಳುತ್ತಲೇ ತನ್ನ ಸ್ಥಳದಿಂದೆದ್ದ. ಆ ಮೂವರಿಗೆ ಮಾತ್ರ ಗಂಟೆಯಾದುದರ ಪರಿವೆಯಿದ್ದಂತೆ ಕಾಣಲಿಲ್ಲ. ಸರೋಜಿನಿಯ ನೃತ್ಯದ ಕನಸನ್ನು ಕಾಣುತ್ತಿದ್ದ ಅವರ ಮನಸ್ಸುಗಳು ಇನ್ನೆಲ್ಲಿಯೋ ಇದ್ದವು. ಅವರಲ್ಲಿಯ ಮೂರನೆಯವನ ಕಿವಿಯನ್ನು ಮಾತ್ರ ಗಂಟೆಯ ಸದ್ದು ಸೇರಿತ್ತೆಂದು ಕಾಣುತ್ತದೆ. ಅವನಂದ:

"ಗಂಟೆಯಾಯಿತ್ರೊ. ಈಗ ಪ್ಯಾರಾಡಾಯಿಜ್ ಲಾಸ್ಟ್!"

"ಹಾಳಾಯಿತು ನಿನ್ನ ಪ್ಯಾರಾಡಾಯಿಜ್ ಲಾಸ್ಟ್! ನಿನಗೆ ಬೇಕಾದರೆ ಹೋಗು; ನಮಗೆ ಬೇಕಾದದ್ದು ಪ್ಯಾರಾಡಾಯಿಜ್ ಗೇನ್ಡ್! ಅದು ದೊರಕು ವುದು ನಾಳೆ ಸಾಯಂಕಾಲವೇ...."

ಮಾಧವನಿಗೆ ಅವನನ್ನು ಚೆನ್ನಾಗಿ ಮಾತನಾಡಿಸಿ ಬುದ್ಧಿ ಹೇಳಬೇಕು ಎಂದೆನಿಸಿತು. ಆದರೆ ಅವನನ್ನು ಏನೆಂದು ಮಾತನಾಡಿಸುವುದು? ಆತನು ಮಾತನಾಡುತ್ತಿದ್ದ ರೀತಿ, ಆತನ ಭಾವಭಂಗಿಗಳ ಮೇಲಿಂದ ಸರೋಜಿನಿಯ ಬಗೆಯಲ್ಲಿ ಆತ ಅನುಚಿತವಾದ ಭಾವನೆಯನ್ನೇ ತಳೆದಿದ್ದನೆಂಬುದು ಸ್ಪಷ್ಟ ವಾಗಿಯೇ ಇದ್ದರೂ ಆತನನ್ನು ಕೆಣಕಲು ತನಗೇನಧಿಕಾರ ಎಂದುಕೊಂಡು ಸುಮ್ಮನಾದ. ಹಾಗೆ ನೋಡಿದರೆ, ನೂರಾರು ಹೃದಯಗಳನ್ನೇ ತನ್ನ ನೃತ್ಯದ ಮೂಲಕ ಸೆಳೆದುಕೊಂಡ ಸರೋಜಿನಿ ತನಗಾದರೂ ಏನು? ಅವರಂತೆ ತಾನೂ ಒಬ್ಬ ವಿದ್ಯಾರ್ಥಿ, ಆಕೆಯ ಬಗೆಯಲ್ಲಿ ಯಾಕೆ ಈ ಪಕ್ಷಪಾತ ಎಂದು ಕೇಳಿ ಕೊಂಡ. ಆದರೂ ಆಕೆಯನ್ನು ಕುರಿತು ಈ ಹುಡುಗರು ಹೀಗೆ ಯೋಚಿಸು ತ್ತಿರುವುದು ಸರಿಯಲ್ಲವಲ್ಲ—ಎಂದುಕೊಂಡು ಹೊರಬಿದ್ದ. ಈ ಮೂವರು ಗೆಳೆಯರ ಮಾತು ನಡೆದೇ ಇತ್ತು.

ಲಗುಬಗೆಯಿಂದ ಕ್ಲಾಸಿನ ಕಡೆಗೆ ನಡೆದ. ಹ್ಯಾಮ್ಲೆಟ್ ನಾಟಕದ ಬಗ್ಗೆ

ಸಮಾರೋಪ ಭಾಷಣವನ್ನು ಪ್ರಾಧ್ಯಾಪಕರು ಮಾಡುವವರಿದ್ದರು. ಕ್ಲಾಸನ್ನು ಸೇರುವವರೆಗೂ ಒಂದೇ ಒಂದು ಯೋಚನೆ ಮಾಧವನನ್ನು ಬೆನ್ನಟ್ಟಿತ್ತು. ಸರೋಜಿನಿಯ ವಿಷಯ ಬಂದಾಗಲೆಲ್ಲ ಅದೇಕೆ ಯಾವುದೋ ಒಂದು ತೆರದ ಪಕ್ಷಪಾತ ತನ್ನನ್ನು ಆಕೆಯ ಎಡೆಗೆ ಮನಸ್ಸನ್ನು ಕರೆಯುತ್ತಿದೆ ಎಂಬುದೇ ಆ ಯೋಚನೆ. ಹಾಗೆ ನೋಡಿದರೆ ಸರೋಜಿನಿ ಕಾಲೇಜನ್ನು ಅದೇ ಮೊದಲು ವರ್ಷ ಸೇರಿದವಳು. ತಾನು ಕೊನೆಯ ವರ್ಷದಲ್ಲಿಯುವ. ಆದರೆ ಆಕೆ ಕಾಲೇಜು ಸೇರಿ ನಾಲ್ಕಾರು ತಿಂಗಳುಗಳಲ್ಲಿಯೇ ತನ್ನ ಅಭ್ಯಾಸವೃತ್ತಿಯ ಮೂಲಕ ಮತ್ತು ಕಲೆಗಾರಿಕೆಯ ಮೂಲಕ ಒಬ್ಬ ಗಣ್ಯ ವಿದ್ಯಾರ್ಥಿನಿಯೆಂದು ಹೆಸರು ಗಳಿಸಿದ್ದಳು. ಮೊದಲ ವರ್ಗದ ಪ್ರತಿನಿಧಿಯೆಂದು ಸಾಹಿತ್ಯಸಂಘದ ಕಾರ್ಯವಾಹಕ ಸಮಿತಿಯ ಸದಸ್ಯಳಾಗಿದ್ದರಿಂದಲೇ ಕಾರ್ಯದರ್ಶಿಯಾದ ಮಾಧವನಿಗೆ ಪರಿಚಿತಳಾಗಿದ್ದಳು. ಕಳೆದ ನಾಲ್ಕೈದು ತಿಂಗಳಲ್ಲಿ ಎರಡುಮೂರು ಸಲ ಸಂಘದಲ್ಲಿ ತನ್ನ ಕಾರ್ಯಕ್ರಮವನ್ನು ನಡೆಯಿಸಿ, ಎಲ್ಲರಂತೆ ಮಾಧವನ ಹೃದಯವನ್ನೂ ಸೆಳೆದಿದ್ದಳು. ತನ್ನ ಯೋಚನೆಗಳ ಭಾರವನ್ನೇ ತಾಳಲಾರದ ಮಾಧವ ಆಕೆಯನ್ನು ಕುರಿತು ಹೆಚ್ಚಾಗಿ ಯೋಚಿಸುತ್ತಿರಲಿಲ್ಲ. ಆದರೆ ಯಾರಾದರೂ ಆಕೆಯನ್ನು ಕುರಿತು ಸಲ್ಲದ ರೀತಿಯಲ್ಲಿ ಮಾತನಾಡಿದ್ದನ್ನು ಮಾತ್ರ ಇತ್ತೀಚೆಗೆ ಆತನಿಗೆ ಸಹಿಸಲಾಗುತ್ತಿರಲಿಲ್ಲ. ಈ ಅಸಹನೆಯ ಮೂಲಕ ಎಷ್ಟೋ ಸಲ ಕೆಲವು ಗೆಳೆಯರ ಚೇಷ್ಟೆಗೂ ಗುರಿಯಾಗಬೇಕಾಗಿತ್ತು. "ಈ ಸಲದ ಸಾಹಿತ್ಯ ಸಂಘದ ಕಾರ್ಯದರ್ಶಿ ಕೆಲವು ಸದಸ್ಯರ ಪಾಲಕನೂ ಆದಂತಿದೆ. ಅದರಲ್ಲಿಯೂ ಹೊಸದಾಗಿ ಬಂದ ಸ್ತ್ರೀ ಸದಸ್ಯೆ...." ಇತ್ಯಾದಿ....

ಪ್ರಾಧ್ಯಾಪಕರ ವಾಕ್‌ಪ್ರವಾಹ ಹರಿಯುತ್ತಲೇ ಇತ್ತು. ಅವರು ಒಳ್ಳೆಯ ವಾಗ್ಮಿಗಳಲ್ಲದೆ ಪಂಡಿತರು. ಹ್ಯಾಮ್ಲೆಟ್‌ನ ಜೀವನದೊಡನೆ ಸಮರಸರಾಗಿ ಅದರ ಅಂತಃಸ್ಫೂರ್ತಿಯನ್ನು ಗುರುತಿಸಿದ ಆತ್ಮವಿಶ್ವಾಸದಿಂದ ಮಾತನಾಡುತ್ತಿದ್ದರು. ಅವರು ಪರೀಕ್ಷಕರಿರಬಹುದೆಂಬ ಎಣಿಕೆಯೂ ಇದ್ದುದರಿಂದ ವರ್ಗವೆಲ್ಲವೂ ಕಿವಿಯಾಗಿ ಅವರ ಮಾತನ್ನು ಕೇಳುತ್ತಿತ್ತು. "ಹ್ಯಾಮ್ಲೆಟ್ ತತ್ವಜೀವಿ. ತತ್ವದ ಮೂಲಕವೇ ಕಾರ್ಯವಿಮುಖನಾಗುತ್ತಾನೆ. ಅಪಾರವಾದ ಬುದ್ಧಿಸಾಮರ್ಥ್ಯ, ಅನುಭವ ಸಾಮರ್ಥ್ಯ ಆತನದು. ಅನುಭವವನ್ನು ಅರ್ಥಮಾಡಿಕೊಂಡು ಸರಿಯಾದುದನ್ನೇ ಮಾಡಬೇಕೆಂದು ಬಯಸಿ ಹಂಬಲಿಸುತ್ತಾನೆ. ಅನುಭವದ ವಿಸ್ತಾರ, ವೈವಿಧ್ಯ ಆತನನ್ನು ಬೆರಗುಗೊಳಿಸುತ್ತದೆ. ಸರಿ ಯಾವುದು, ಅಲ್ಲದ್ದು ಯಾವುದು ಎಂಬುದನ್ನು ನಿರ್ಣಯಿಸುವುದು

ಸಾಧ್ಯವೆ? ಎಂದು ಹೇಳುವಂತಿದೆ ಆತನ ವ್ಯಕ್ತಿತ್ವ. ಜಾಗೃತವಾದ ವಿವೇಕ ನಮ್ಮನ್ನು ಹೇಡಿಗಳನ್ನಾಗಿ ಮಾಡಬಹುದು ಎನ್ನುತ್ತಾನೆ —ಆತನನ್ನು ಬಾಧಿ ಸುತ್ತಿದ್ದುದು ಭೂತಕಾಲ, ಆತನ ಬದುಕಿನಲ್ಲಿ ಅದೊಂದು ನಿರ್ಣಾಯಕವಾದ ಶಕ್ತಿಯಾಗಿ ಪರಿಣಮಿಸುತ್ತದೆ...." ಇತ್ಯಾದಿ.

ಮಾಧವ ಕೇಳುತ್ತಲೇ ಇದ್ದ, ತನಗೆ ತಿಳಿಯದಲೇ ಒಂದೊಂದು ಮಾತನ್ನೂ ತನ್ನ ಅನುಭವಕ್ಕೆ ಅನ್ವಯಿಸಿಕೊಂಡು ನೋಡುತ್ತಿದ್ದ. ಹೌದು. ಮನುಷ್ಯನ ಬದುಕಿನಲ್ಲಿ ಗತಕಾಲವೂ ಒಂದು ಪ್ರೇರಕವಾದ—ಶಕ್ತಿಯುತ ವಾದ ಅಂಶವಾಗಬಹುದು ಎಂದುಕೊಂಡ. ಹ್ಯಾಮ್ಲೆಟ್‌ನ ತಂದೆಯನ್ನು ಕಕ್ಕ ಕೊಲೆಮಾಡಿದ. ತನ್ನ ತಂದೆ? ತನ್ನನ್ನು ತಾನೇ ಕೊಲೆಮಾಡಿಕೊಂಡ ನಲ್ಲವೇ? ಯಾವ ಸಾಮ್ಯವಿರದಿದ್ದರೂ ತನ್ನ ತಂದೆ ಬ್ಯಾಂಕಿನಲ್ಲಿಯ ಕಾರ್ಯಚಾಲಕನಾಗಿ ಎತ್ತಿಹಾಕಿದ ಒಂದೂವರೆಲಕ್ಷ ರೂಪಾಯಿಗಳ ಮೋಸ ಹೊರಬೀಳುವಂತಾದಾಗ ತಂದೆ ಅಕಸ್ಮಾತ್ತಾಗಿ ತೀರಿಹೋದರು. ಎದೆ ನೋವೆಂದು ರಾತ್ರಿ ಮಲಗಿದವರು ಬೆಳಗಾದಾಗ ಏಳಲೇ ಇಲ್ಲ. ಅಣ್ಣ ತೀರಿದ ಎಂಬ ದುಃಖಕ್ಕಿಂತ ಅಣ್ಣ ತೀರಿದನೆಂಬುದೇ ತನ್ನ ಕಕ್ಕನಿಗೆ ಸಮಾ ಧಾನದ ವಿಷಯವಾದಂತಿತ್ತು! ಅನಾಯಾಸವಾಗಿ ಎತ್ತಿಹಾಕಿದ ಹಣದಲ್ಲಿ ಅರ್ಧಕ್ಕಿಂತಲೂ ಹೆಚ್ಚಾಗಿ ತನ್ನ ಕೈಸೇರಿತ್ತು ಎಂದು ಒಳಗೊಳಗಿನಿಂದಲೇ ಸಂತೋಷಪಟ್ಟಿದ್ದ. ಆದರೆ ಹ್ಯಾಮ್ಲೆಟ್‌ನ ಬಗೆಯಲ್ಲಿ ಆತನ ಕಕ್ಕ ಮಾಡಿದ ಅನ್ಯಾಯವನ್ನು ತನ್ನ ಕಕ್ಕ ಮಾಡಿದ್ದನೆಂದು ಹೇಳುವಂತಿರಲಿಲ್ಲವೆಂದು ಆ ಯೋಚನೆಯನ್ನು ತಳ್ಳಿಹಾಕಿದ. ಆದರೆ ವಿವೇಕದ ವಿಚಾರವನ್ನು ಪ್ರಾಧ್ಯಾ ಪಕರು ವಿವರವಾಗಿ ಹೇಳುತ್ತಿದ್ದಾಗ ಯೋಚನೆ ಮತ್ತೆ ತಲೆದೋರಿತು. ತಾನು ಎಂಥ ವಿವೇಕಶಾಲಿಯಾದರೂ ತನ್ನ ತಂದೆಯ ಮಗನೇ ಅಲ್ಲವೆ? ಎಂದು ಕೇಳಿಕೊಳ್ಳುವಾಗ ಮನಸ್ಸು ತೀರ ನೊಂದುಕೊಂಡಿತ್ತು. ಯಾವುದೇ ಸಂದರ್ಭ ದಲ್ಲಿ ತಾನು ಇಂಥವರ ಮಗನೆಂಬ ಮಾತು ಬಂದಾಗ ಮಾಧವನಿಗೆ ತಡೆಯ ಲಾರದ ಅವಮಾನವೆನಿಸುತ್ತಿತ್ತು. 'ನಾನು ನನ್ನ ತಂದೆಯ ಮಗನಾದರೂ, ನಾನು ನಾನೇ' ಎಂಬುದನ್ನು ಜಗತ್ತಿಗೆ ತಿಳಿಯಹೇಳುವುದು ಸಾಧ್ಯವೇ? ಎಂದು ನಿರಾಶೆಗೊಳ್ಳುತ್ತಿದ್ದ. ಪ್ರಾಧ್ಯಾಪಕರು ಮಾತನಾಡುತ್ತಲೇ ಇದ್ದರು. ಗಂಟೆ ಬಾರಿಸಿದಾಗಲೇ ಮಾಧವನಿಗೆ ಎಚ್ಚರ. ಅವರು ಹೇಳಿದ್ದನ್ನು ಕೇಳು ವುದಕ್ಕಿಂತ ಹೆಚ್ಚಾಗಿ ತನ್ನ ಬಗೆಯಲ್ಲಿ ಯೋಚಿಸುವುದರಲ್ಲಿಯೇ ಮಾಧವನ ವೇಳೆಯೆಲ್ಲವೂ ವೆಚ್ಚವಾಗಿತ್ತು—ಎಂದಿನಂತೆಯೆ!

ಕ್ಲಾಸು ಮುಗಿದೊಡನೆಯೇ ಮಾಧವ ಹೊರಬಿದ್ದ. ಬಾಗಿಲಲ್ಲಿಯೇ ಸರೋಜಿನಿ ಕಾಯ್ದಿದ್ದಳು. ಆಕೆಯನ್ನು ನೋಡಿದಾಕ್ಷಣ ಮನಸ್ಸಿನಲ್ಲಿ ತುಮುಲ ವನ್ನೆಬ್ಬಿಸಿದ ಯೋಚನೆಗಳೆಲ್ಲವೂ ಮಾಯವಾಗಿ, ಮುಖದ ಮೇಲೆ ನಸುನಗು ಕಾಣಿಸಿಕೊಂಡಿತು. ಮಾಧವನಿಗೆ ಎಂದಿನಂತೆ ವಿಚಿತ್ರವೆನಿಸಿತು. ಮನಸ್ಸಿನ ಎಂಥ ದುಃಸ್ಥಿತಿಯಲ್ಲಿಯೂ ದುಗುಡವನ್ನು ದೂರಮಾಡಿ ಉಲ್ಲಾಸವನ್ನು ಬೀರುವ ಸಾಮರ್ಥ್ಯ ಸರೋಜಿನಿಯೊಬ್ಬಳಲ್ಲಿಯೇ ಇದ್ದಂತಿದೆಯಲ್ಲಾ ಎಂದು. ನಿಜವಾಗಿಯೂ ಆಕೆಯನ್ನು ಕಂಡಾಗಲೆಲ್ಲ ಮಾಧವ ಎಲ್ಲವನ್ನೂ ಮರೆಯು ತ್ತಿದ್ದ. ಆಕೆ ತನಗಾಗಿ ಕಾಯುತ್ತಿರಬೇಕೆಂಬುದು ಮರುದಿನದ ಕಾರ್ಯಕ್ರಮದ ಮೂಲಕ ಸ್ಪಷ್ಟವಾಗಿದ್ದರಿಂದ ಆಕೆ ನಿಂತೆಡೆಗೆ ಬಂದು ನಸುನಕ್ಕು ಕೇಳಿದ :

" ಈ ಕಡೆ ಬಂದಿರಿ ?"

" ನಿಮ್ಮ ಕಡೆಗೇ ಬಂದಿದ್ದೆ."

" ಅದೇನು ?"

" ನಾಳಿನ ಕಾರ್ಯಕ್ರಮ...." ಎಂದು ಅರ್ಧಕ್ಕೆಯೇ ತಡೆದಳು, ಅವಳು ತಡೆದುದಕ್ಕೆ ಕಾರಣವೆಂದರೆ ಸುತ್ತಮುತ್ತಲೂ ನಿಂತಿದ್ದ ಉಳಿದ ವಿದ್ಯಾರ್ಥಿ ಗಳು. ಇವರಿಬ್ಬರ ಮಾತುಗಳನ್ನು ಕೇಳಬೇಕೆಂಬ ಕುತೂಹಲ ಅವರಾರಿಗೂ ಇದ್ದಿರದಿದ್ದರೂ ಸರೋಜಿನಿಯ ಹತ್ತಿರದಲ್ಲಿಯಾದರೂ ಸುಳಿಯಬೇಕೆಂಬ ಬಯಕೆ ಮೂರುನಾಲ್ವರಿಗಾದರೂ ಇದ್ದಂತಿತ್ತು. ಒಂದು ಗಂಟೆಯ ಹಿಂದೆ ಹೋಟೆಲಿನಲ್ಲಿ ಹರಟೆ ಹೊಡೆಯುತ್ತಿದ್ದ ಮೂವರು ಮಹಾನುಭಾವರೂ ಸಮೀಪದಲ್ಲಿಯೇ ಇದ್ದರು. ಇದನ್ನು ತಿಳಿದೇ ಇಬ್ಬರೂ ಅಲ್ಲಿಂದ ಹೊರಟರು. ಪಾವಟಿಗೆಗಳನ್ನು ಇಳಿಯುತ್ತಿರುವಾಗ ಸರೋಜಿನಿ ಹೇಳಿದಳು :

" ನಾಳಿನ ನನ್ನ ಕಾರ್ಯಕ್ರಮ ಆಗುವುದಿಲ್ಲವೆಂದು ಕಾಣುತ್ತದೆ !"

ಮಾಧವನಲ್ಲಿಯ ಕಾರ್ಯದರ್ಶಿಗೆ ಸಿಡಿಲೆರಗಿದಂತಾಯಿತು. ಆಕೆಯ ಕಾರ್ಯಕ್ರಮವಿಲ್ಲದಿದ್ದರೆ ಮುಂದೇನು ಎಂಬ ಯೋಚನೆಗಿಂತಲೂ ಹೀಗೆ ಆಯತ್ತ ವೇಳೆಯಲ್ಲಿ ಎಲ್ಲವನ್ನೂ ತೂಕ ತಪ್ಪಿಸಿ ಹದಗೆಡಿಸುವುದೆಂದರೆ ? ಎಂದು ಕೊಂಚ ಸಿಟ್ಟೂ ಬಂದಿತು. ಆದರೆ ಕಾರ್ಯದರ್ಶಿಯಾದವನಿಗೆ ಬಂದ ಸಿಟ್ಟನ್ನು ಮಾಧವ ತಳ್ಳಿಹಾಕಿ ಆಕೆ ಹಾಗೆ ಹೇಳುತ್ತಿರುವುದಕ್ಕೆ ಏನಾದರೂ ಯೋಗ್ಯ ಕಾರಣವಿರಬೇಕೆಂದುಕೊಂಡು ಸಮಾಧಾನದಿಂದ ಕೇಳಿದ :

"ಯಾಕೆ ಒಮ್ಮೆಲೆ ಏನಾಯಿತು ?"

"ನನ್ನದೊಂದು ಕಾರ್ಯಕ್ರಮವೆಂದರೆ ನಾಲ್ಕು ಜನರ ಸಹಕಾರ ಬೇಕು.

ಮುಖ್ಯ ಅದೇ ಇಲ್ಲವಾಗಿದೆ."

"ನಿಮ್ಮ ಕಾರ್ಯಕ್ರಮವಿಲ್ಲವಾದರೆ ಮಾತೇ ಮುಗಿದುಹೋಯಿತು. ನಾನು ನಾಳೆ ಉತ್ಸವವನ್ನು ನಡೆಸಲೇಬೇಕಿಲ್ಲ !"

"ಆಯಿತು ! ನಾನಿಲ್ಲದೆ ಉತ್ಸವವೇ ನಡೆಯುವಂತಿಲ್ಲವೆ ?" ಎಂದು ಸರೋಜಿನಿ ನಸುನಕ್ಕು ಕೇಳಿದಾಗ, ಆ ನಗೆಯಲ್ಲಿ ಅಡಕವಾದ ಆತ್ಮವಿಶ್ವಾಸ ಮಾಧವನಿಗೆ ಹೊಳೆಯದೆ ಇರಲಿಲ್ಲ. ಬೇಕಂತಲೇ ಒಂದಿಷ್ಟು ಚೇಷ್ಟೆ ಮಾಡ ಬೇಕೆಂದು ಹೇಳಿದ :

"ಹಾಗೇನಿಲ್ಲ. ನೀವಿಲ್ಲದಿದ್ದರೂ ನಡೆಯಲಿಕ್ಕಿಲ್ಲವೆ ?" ಎಂದು ಪ್ರತಿ ಯಾಗಿ ನಕ್ಕ. 'ನೀವಿಲ್ಲದೆ ನಡೆಯುವುದು ಸಾಧ್ಯವೇ ಇಲ್ಲ' ಎಂಬುದೇ ಆ ನಗೆಯ ಭಾವವಾಗಿತ್ತೆಂಬುದು ಸರೋಜಿನಿಗೆ ಸಂತೋಷವನ್ನುಂಟುಮಾಡಿತು. ಕೊನೆಗೆ ಮಾಧವನೆಂದ :

"ಅದಿರಲಿ. ಈಗ ಬಂದ ಆತಂಕವೇನು ?"

"ಆತಂಕವೇನು ? ಹೋದಸಲದಂತೆಯೇ ಮೇಳವಾದ್ಯದವರು ತಕರಾರು ಮಾಡುತ್ತಿದ್ದಾರೆ."

"ಏನಂತೆ ?"

"ಇಂದು ಬೆಳಿಗ್ಗೆ ಬರಹೇಳಿದ್ದೆ. ಅವರು ಬರಲೇ ಇಲ್ಲ, ನಾನಾಗಿಯೇ ಹೋಗಿ ಕೇಳಿದರೆ ಏನೇನೋ ಕುಂಟುನೆಪ ಹೇಳುತ್ತಿದ್ದಾರೆ. ಒಟ್ಟಿನಲ್ಲಿ ಹತ್ತಿಪ್ಪತ್ತು ರೂಪಾಯಿಗಳನ್ನು ಹೆಚ್ಚಾಗಿ ಸೆಳೆಯಬೇಕೆಂಬುದೇ ಅವರ ಮನಸ್ಸೆಂದು ಕಾಣುತ್ತದೆ...."

"ಇಷ್ಟೇ ಆದರೆ ಹೇಗೊ ಮಾಡಬಹುದು."

"ಹಾಗಾದರೆ ಅವರಿಗೆ ಇನ್ನೊಮ್ಮೆ ಹೇಳಿಕಳಿಸಲಿ ?"

"ನೀವು ಬೇಡ. ನಾನೇ ಹೋಗಿ ಬರುವೆ. ನೀವು ಮಾತ್ರ ನಿಮ್ಮ ಸಿದ್ಧತೆ ಯಲ್ಲಿರಬೇಕು."

"ನನ್ನದೇನು ಸಿದ್ಧತೆ ?"

"ನಾನೆಲ್ಲವನ್ನೂ ಗೊತ್ತುಮಾಡಿ, ನಾಳೆ ಮಧ್ಯಾಹ್ನವೇ ಬರಹೇಳುತ್ತೇನೆ ಅವರಿಗೆ. ಒಂದು ಸಾರಿ ರಿಹರ್ಸಲ್ ಮಾಡಲೂ ಆದೀತು."

"ರಿಹರ್ಸಲ್ ಬೇಡ, ಏನೂ ಬೇಡ. ಕಾರ್ಯಕ್ರಮಕ್ಕೆ ಅವರು ಸರಿ ಯಾಗಿ ಬಂದರೆ ಸಾಕು."

"ರಿಹರ್ಸಲ್ ಇಲ್ಲದೆಯೆ....?" ಎಂದು ಮಾಧವ ಅನುಮಾನ ಸೂಚಿಸಿದ.

ಅವನ ಅನುಮಾನವನ್ನು ತಟ್ಟನೆ ಗುರುತಿಸಿ ಸರೋಜಿನಿ ಹೇಳಿದಳು :

"ನೀವೇನೂ ಅಷ್ಟೊಂದು ಹೆದರಿಕೊಳ್ಳುವ ಕಾರಣವಿಲ್ಲ. ಎಲ್ಲವೂ ಸರಿಯಾದೀತು....ರಿಹರ್ಸಲ್ ಎಂದರೆ ಮತ್ತೆ ಒಂದೆರಡು ಗಂಟೆ ವೇಳೆ ಹಾಳು. ಮೊದಲೇ ಪರೀಕ್ಷೆ ಸಮೀಪ ಬಂದಿದೆ...."

"ಮೊದಲ ವರ್ಷದ ಪರೀಕ್ಷೆ. ಅದರದೇನು ಮಹಾ...."

"ನೀವುಗೇನದರದು ? ನಮ್ಮ ಪರೀಕ್ಷೆ ನಮಗೆ ದೊಡ್ಡದೇ !"

ಅವಳ ಮಾತೂ ನಿಜವಲ್ಲವೆ ಎಂದುಕೊಂಡು ಮಾಧವ ಸುಮ್ಮನಾದ. ತನ್ನ ಪರೀಕ್ಷೆಯೊದರೂ ಸಮೀಪಿಸುತ್ತಿದೆ. ತಾನಾದರೊ ಅದು ಇದು ಎಂದು ಕಾಲಹರಣ ಮಾಡುತ್ತಿದ್ದುದನ್ನು ನೆನೆದು, ಒಂದು ಕ್ಷಣ ವಿವೇಕದ ಹೊಡೆತಕ್ಕೀಡಾದ. ತನ್ನ ಪರೀಕ್ಷೆಯ ಮೇಲೆ ಎಷ್ಟು ವಿಷಯ ಅವಲಂಬಿಸಿಕೊಂಡು ನಿಂತಿದೆ ಎಂಬುದನ್ನು ನೆನೆದಾಗಲಂತೂ ಈ ಕಾರ್ಯಕ್ರಮ ಮುಗಿದೊಡನೆಯೆ ಯಾವುದಕ್ಕೂ ಮನೆಯಿಂದ ಹೊರಬೀಳದೆ ಓದುಸಾಗಿಸತಕ್ಕುದೆಂದು ನಿಶ್ಚಯಿಸಿದ. ಆ ನಿಶ್ಚಯದ ಕಾವಿನಲ್ಲಿಯೇ ಏನೋ ಎನ್ನುವಂತೆ ಹೊರಡಲನುವಾದ. ಹೊರಡುವ ಮುನ್ನ,

"ಹಾಗಾದರೆ ನಾಳೆ ಸಾಯಂಕಾಲವೇ ಇನ್ನು ಭೆಟ್ಟಿ ?" ಎಂದ.

ಪ್ರಶ್ನೆ ಆಗಿನ ಸಂದರ್ಭದಲ್ಲಿ ತೀರಸಾಮಾನ್ಯವಾಗಿದ್ದರೂ ಅದನ್ನು ಕೇಳಿದ ಮಾಧವನ ರೀತಿಯಲ್ಲಿ ಸರೋಜಿನಿಗೆ ಏನೋ ಒಂದು ಬೇರೆಯಾದ ಅರ್ಥ ಸೂಚಿತವಾಯಿತು. ಮಾಧವ ಸಹಜವಾಗಿಯೇ ಕೇಳಿದ್ದ. ಭೆಟ್ಟಿಯಾಗುವುದು ನಾಳೆ ಸಾಯಂಕಾಲ ಎನ್ನುವುದಕ್ಕಿಂತ ಹೆಚ್ಚಾಗಿ ನಾಳೆ ಸಾಯಂಕಾಲದವರೆಗೆ ನಿಮ್ಮ ಭೆಟ್ಟಿಯಿಲ್ಲ ಎಂದು ಮಾಧವನ ಅರ್ಥವಿದ್ದಂತೆ ಸರೋಜಿನಿಗೆ ಭಾಸವಾಗಿತ್ತು. ಹೀಗೆ ಭಾಸವಾಗಲಿಕ್ಕೆ ಅವಳ ಮನಃಸ್ಥಿತಿಯೇ ಕಾರಣ. ಇತ್ತೀಚೆಗೆ ಮಾಧವನ ಮಾತು ನಡೆಗಳಲ್ಲಿ ಈ ರೀತಿಯ ಅರ್ಥವನ್ನು ಆಕೆ ಆಗಾಗ ಕಂಡು ಹಿಡಿದಿದ್ದಳು. ತನ್ನಕೂಡ ಮಾತನಾಡುತ್ತಿರುವಾಗ ಮಾಧವ ನಿಃಸಂಕೋಚವಾಗಿ ಮಾತನಾಡುತ್ತಿದ್ದ. ತನ್ನ ಕೂಡ ಮಾತನಾಡುತ್ತಿದ್ದಾಗ ತಾನು ಏನು ಮಾತನಾಡಿದರೂ ಆತನಿಗೆ ಆ ಮಾತುಗಳಿಂದ ಬೇರೆಯಾದ, ಅದನ್ನು ಮೀರಿದ, ಬೇರೆ ಯಾವುದೋ ಒಂದು ರೀತಿಯ ಸಮಾಧಾನವಾಗುತ್ತಿದೆ– ಆಗುತ್ತಿರಬಹುದು – ಎಂಬುದನ್ನು ತಿಳಿದವಳಾಗಿದ್ದಳು. ಆ ಕ್ಷಣದಲ್ಲಿ ತನ್ನ ಮನಃಸ್ಥಿತಿಯಾದರೂ ಹಾಗೆಯೇ ಮಾತಿಗೆ ನಿಲುಕದ ಶಾಂತತೆಯನ್ನು ಹೊಂದಿ ವಿಚಿತ್ರವಾದ ಹೊಸದೊಂದು ಸುಖಾನುಭವವನ್ನು ಪಡೆಯುತ್ತಿತ್ತೆಂಬುದನ್ನೂ

ತಿಳಿದವಳಾಗಿದ್ದಳು. ಹಾಗೆ ನೋಡಿದರೆ ಸಾಹಿತ್ಯ ಸಂಘದ ಕಾರ್ಯಕಲಾಪ ಗಳನ್ನು ಹೊರತುಪಡಿಸಿದರೆ ತನ್ನ-ಆತನ ಸಂಬಂಧ ಎಲ್ಲಿಯೂ ಬರುತ್ತಿರಲಿಲ್ಲ. ಹೀಗಿದ್ದರೂ ಆತ ಕೇವಲ ಸಂಘದ ಕಾರ್ಯದರ್ಶಿ ಮಾತ್ರವಾಗಿರಲಿಲ್ಲ. ಆತನಿ ಗಾದರೂ ತಾನು ಸಂಘದ ಚಟುವಟಿಕೆಗಳಲ್ಲಿ ಸಹಕಾರವನ್ನು ನೀಡುವ ಕೇವಲ ಕಾರ್ಯಕರ್ತ್ರಿಯಾಗಿರಲಿಲ್ಲವೆಂಬ ಮನವರಿಕೆ ಹೆಚ್ಚು ಹೆಚ್ಚಾಗಿ ಬೆಳೆಯುತ್ತಿತ್ತು.

ಈ ಯೋಚನೆಗಳೆಲ್ಲವೂ ಕ್ಷಣಾರ್ಧದಲ್ಲಿ ಸರೋಜಿನಿಯ ಮನಸ್ಸಿನೆದುರು ಸುಳಿದುಹೋದಾಗ ಆತನ ಪ್ರಶ್ನೆಗೆ ಉತ್ತರವೇನೆಂದು ಹೇಳಬೇಕೆಂಬುದು ತಿಳಿಯದೆ ಸುಮ್ಮನಾದಳು. ಮಾಧವ ಮತ್ತೆ ಕೇಳಿದ :

"ಆಯಿತು. ಹಾಗಾದರೆ ನಾಳೆ ಸಾಯಂಕಾಲ ಐದರ ಸುಮಾರಿಗೆ ಬಂದು ಬಿಡುತ್ತೀರಾ ?" ಎಂದು.

"ಹೂಂ....ಐದಕ್ಕೆ ಬರುತ್ತೇನೆ" ಎಂದಳು ಸರೋಜಿನಿ—ನಿದ್ರೆಯಿಂದ ಎಚ್ಚೆತ್ತವಳಂತೆ.

"ನಾನಿನ್ನು ಹೊರಡುತ್ತೇನೆ. ಇನ್ನೂ ಎಷ್ಟೋ ಕೆಲಸ...."

"ನಾಳೆ ಉತ್ಸವ. ಇನ್ನೂ ಕೆಲಸವೆ ?"

"ಹೂಂ....ನಾಳೆ ಕಾರ್ಯಕ್ರಮ ಅಂತೇ ಇನ್ನೂ ಕೆಲಸ. ನನ್ನ ಕೆಲಸವೆಂದರೆ ಎಲ್ಲವೂ ಕೊನೆಯ ಗಳಿಗೆಯಲ್ಲಿಯೇ ಆಗಬೇಕು."

"ಆದರೂ ಕೆಲಸವೆಂದಿಗೂ ಕೆಡುವುದಿಲ್ಲ !"

ತನ್ನ ಬಗೆಯಲ್ಲಿ ಇಷ್ಟರಮಟ್ಟಿಗೆ ಸರೋಜಿನಿ ಅಭಿಮಾನವನ್ನು ತಾಳಿರ ಬಹುದೆಂಬ ಎಣಿಕೆ ಮಾಧವನಲ್ಲಿದ್ದರೂ ಅದನ್ನು ಅವಳ ಬಾಯಿಂದಲೇ ಕೇಳಿ ಆನಂದಿತನಾದ. ಸೋಗಿನ ವಿನಯದಿಂದ ಹೇಳಿದ :

"ಇಂದಿನವರೆಗೆ ಹೇಗೂ ಆಯಿತು. ಎಲ್ಲವನ್ನೂ ನೀವೇ ಮಾಡಿದ್ದೀರಿ. ನಾಳೆ ದಿನವೊಂದು ಪಾರಾದರೆ ಕೆಲಸವಾಯಿತು...."

"ಆಯಿತು. ನಾವು ನಿಮಗೆ ಭಲೆ ಎನ್ನುವುದು, ನೀವು ನಮಗೆ ಭಲೆ ಎನ್ನು ವುದು. ಇದೇ ಆಯ್ತು."

"ಏನೇ ಆಗಲಿ, ನಾಳೆಯಂತೂ ಇಬ್ಬರೂ ಭಲೆಯೆನ್ನಿಸಿಕೊಳ್ಳಬೇಕಾಗಿದೆ."

"ನಮ್ಮದೇನು ? ಭಲೆ ಎನ್ನಿಸಿಕೊಳ್ಳುವವರು ನೀವು, ಕಾರ್ಯದರ್ಶಿಗಳು !" ಎಂದು ಬೇಕಂತಲೇ ಕೊಂಕು ನುಡಿದಳು. ತಟ್ಟನೆ ಮಾಧವ ಹೇಳಿದ :

"ನೋಡುವಾ ನಾಳೆ. ಈಗಲೇ ಇಡೀ ಕಾಲೇಜೇ ಮಾತಾಡಹತ್ತಿದೆ ನಿಮ್ಮ ಕಾರ್ಯಕ್ರಮದ ಬಗ್ಗೆ. ನಾಳೆ ದಿನ ತಾವು ನಮ್ಮನ್ನಷ್ಟು ನೋಡಿ ಮಾತನಾಡಿಸಿ

ಬಿಟ್ಟರೆ ಸಾಕು...."ಎಂದು ನಸುನಕ್ಕ ಸುಳ್ಳುಗಾಂಭೀರ್ಯದಿಂದ.

"ಸಾಕು, ಸಾಕು ಈ ಚೇಷ್ಟೆ. ಎಲ್ಲಾ ಗೊತ್ತು ನನಗೆ...." ಎಂದು ಸರೋಜಿನಿ ಕತ್ತು ಕೊಂಕಿಸಿದಳು. ಮಾಧವನಿಗನಿಸಿತು, ಆಕೆ ಹಾಗೆಯೇ ನಿಲ್ಲ ಬೇಕು, ತಾನು ನೋಡುತ್ತಲೇ ಇರಬೇಕು ಎಂದು. ಆದರೆ ಇಬ್ಬರೂ ಹಾಗೆಯೇ ಅಲ್ಲಿ ನಿಲ್ಲುವ ಹಾಗಿರಲಿಲ್ಲ. ಇದಕ್ಕೆ ಕಾರಣ, ಫೆಬ್ರುವರಿ ತಿಂಗಳ ಚುರುಕಾದ ಬಿಸಿಲು ಇಬ್ಬರಿಗೂ ಎಚ್ಚರ ಮೂಡುತ್ತಿತ್ತು—'ಇನ್ನು ಇಲ್ಲಿಂದ ಹೊರಡಿರಿ' ಎಂದು. ಅದನ್ನು ಗಮನಿಸಿಯೇ ಇಬ್ಬರೂ ಹೊರಟರು. ಮಾಧವ ಕಾಲೇಜಿನ ಕಟ್ಟಡವನ್ನು ಸೇರಿದ; ಸರೋಜಿನಿ ವಸತಿಗೃಹದ ದಾರಿಯನ್ನು ಹಿಡಿದಳು.

ವಿದ್ಯಾರ್ಥಿನಿಯರ ವಸತಿಗೃಹ ಕಾಲೇಜಿನಿಂದ ದೂರವಾಗಿರಲಿಲ್ಲ. ದೊಡ್ಡ ದಾದ ಒಂದು ಅರ್ಧ ವರ್ತುಲದಂಥ ದಾರಿಯಾದರೂ ಕಣ್ಣಿಗೆ ಯಾವ ಕಾಲ ದಲ್ಲಿಯೂ ಮನೋಹರವಾಗಿರುತ್ತಿತ್ತು. ಮಾಧವನೊಂದಿಗೆ ಆತ್ಮೀಯವಾಗಿ ಮಾತನಾಡಿ ಮರಳಿ ನಡೆದ ಸರೋಜಿನಿಗಂತೂ ದಾರಿ ಇನ್ನೂ ಮನೋಹರವಾಗಿ ಕಂಡಿದ್ದರೆ ಆಶ್ಚರ್ಯವಿರಲಿಲ್ಲ. ದಾರಿಯುದ್ದಕ್ಕೂ ಹುಲಿಗಲ ಗಿಡಗಳು ಚಿಗಿತು ಹಾದಿಯೆಲ್ಲವನ್ನೂ ಹೂವಿನ ಹಾಸಿಗೆಯನ್ನಾಗಿ ಮಾಡಿದ್ದವು. 'ಬಿಸಿಲು ಬಲಿ ತಷ್ಟೂ ನಾವು ಚಿಗಿಯುತ್ತೇವೆ. ಬೇಸಿಗೆಯ ಕಾವು ಹೆಚ್ಚಾದಷ್ಟೂ ನಮ್ಮ ತಂಪು ಹೆಚ್ಚು' ಎಂಬ ಆತ್ಮವಿಶ್ವಾಸದಲ್ಲಿ ಹಚ್ಚನೆ ಹಸಿರಾಗಿ ಮೆರೆಯುವ ಆ ಗಿಡಗಳು ಒಂದರೆಕ್ಷಣ ಸರೋಜಿನಿಯ ಮೈಮರೆಯಿಸಿದವು. ಸ್ವಭಾವತಃ ಕಲೆಗಾರ್ತಿ ಯಾದ ಆಕೆ ಆ ಹೂವುಗಳನ್ನು ಕಾಲಿನಿಂದ ತುಳಿಯದೆ ಮುಂದಕ್ಕೆ ಸಾಗ ಬೇಕೆಂದರೆ ಸಾಧ್ಯವಾಗಿ ಕಾಣಲಿಲ್ಲ. ನಿರುಪಾಯಳಾಗಿ ತಾನು ತುಳಿಯುವು ದನ್ನು ಕಣ್ಣಿನಿಂದಾದರೂ ನೋಡುವುದು ಬೇಡವೆಂದು ಎದುರು ಸಾಲಾಗಿ ನಿಂತ ಆ ಗಿಡಗಳನ್ನೇ ಕುರಿತು ಯೋಚಿಸುತ್ತ ನಡೆದಳು: 'ಇದರ ಬೀಜ ಕಹಿ, ವಾಸನೆ ಉಗ್ರ ಎಂದು ಜನ ಈ ಗಿಡಗಳನ್ನು ಲೆಕ್ಕಿಸುವುದಿಲ್ಲ. ದಾರಿಯುದ್ದಕ್ಕೂ ಅವುಗಳ ತಂಪನ್ನು ಸೇವಿಸುತ್ತ ಹೋಗುವವರು ಕೂಡ ಈ ಗಿಡ ಯಾವುದೆಂದೂ ನೋಡು ವುದಿಲ್ಲ. ಈ ಗಿಡಗಳು ನಿಷ್ಠುರವಾದರೂ ನಿಜವಾದುದನ್ನು, ಒಳ್ಳೆಯದನ್ನು ಆಡುವ, ಮಾಡುವ ಮನುಷ್ಯರಂತೆಯೆ ಅಲ್ಲವೆ?' ಎಂದುಕೊಂಡು ಸಾಗಿದಳು.

ಸರೋಜಿನಿ ತನ್ನ ಕೋಣೆಯನ್ನು ತಲುಪಿದಾಗ ಅಲ್ಲಿ ಚಿಕ್ಕದೊಂದು ಸಮ್ಮೇಳನವೇ ಕೂಡಿತ್ತು. ಆ ಸಮ್ಮೇಳನವೇನೂ ಹೊಸದಲ್ಲ. ನಿತ್ಯದ ವಿಷಯ ವಾಗಿತ್ತು. ಅದಕ್ಕೆ ಕಾರಣವೆಂದರೆ ಸರೋಜಿನಿಯ ಕೋಣೆಯಲ್ಲಿಯ ಜೊತೆ ಗಾತಿಯೇ. ಯಾವನೋ ಒಬ್ಬ ದೊಡ್ಡ ಅಧಿಕಾರಿಯ ಒಬ್ಬಳೇ ಮಗಳು! ಗಂಟೆ

ಗೊಮ್ಮೆ ವೇಷವನ್ನೂ ಕ್ಷಣಕ್ಕೊಮ್ಮೆ ಮಾತಿನ ವಿಷಯವನ್ನೂ ಬದಲಾಯಿಸಿ, ದಿನಕ್ಕೆ ಹದಿನಾರು ಗಂಟೆ ಹರಟೆ ಹೊಡೆಯುವುದೇ ಆಕೆಯ ಧ್ಯೇಯವಾಗಿದ್ದ ರಿಂದ ಸಮ್ಮೇಳನ ನಿತ್ಯದಲ್ಲಿಯೂ ಅನಿವಾರ್ಯವಾಗುತ್ತಿತ್ತು. ಎಷ್ಟೋ ಸಲ ಸರೋಜಿನಿ ಬೇಸರಗೊಂಡು "ಪರೀಕ್ಷೆ ಬಂದಿದೆ, ಇನ್ನಾದರೂ ಹರಟೆಯನ್ನು ನಿಲ್ಲಿಸು, ತಾಯಿ" ಎಂದಾಗ ಆಕೆ ಹೇಳುತ್ತಿದ್ದಳು:

"ಹರಟೆ ಹೊಡೆದೇ ಮ್ಯಾಟ್ರಿಕ್ ಪಾಸು ಮಾಡಿದ್ದೇನೆ. ಈ ಪರೀಕ್ಷೆ ಏನು —ಆದರೆ ಆಯಿತು, ಇಲ್ಲವಾದರೆ ಹೋಯಿತು!"

"ಹಾಗಾದರೆ ಕಾಲೇಜಿಗೆ ಯಾತಕ್ಕೆ ಬಂದೆ?"

"ಹುಚ್ಚೀ! ಕಾಲೇಜಿಗೆ ಓದಲಿಕ್ಕೆ ಬರುತ್ತಾರೆಯೆ? ಅದರಲ್ಲಿಯೂ ಹೆಣ್ಣು ಹುಡುಗಿಯರು! ನಾನಂತೂ ಓದಿಗೆಂದು ಕಾಲೇಜಿಗೆ ಬಂದೇ ಇಲ್ಲ!"

"ಹಾಗಾದರೆ ಯಾತಕ್ಕೆ?"

"ಯಾತಕ್ಕೆ? ಕಾಲೇಜ್ ಲಾಯಿಫ್ ಎಂಜಾಯ್ ಮಾಡಲಿಕ್ಕೆ!"

"ಏನದು ಕಾಲೇಜ್ ಲಾಯಿಫ್ ಎಂದರೆ?"

"ಕಾಲೇಜ್ ಲಾಯಿಫ್ ಎಂದರೆ ಕಾವ್ಯವಿದ್ದ ಹಾಗೆ! ಅನುಭವಿಸಿದರೆ ಆನಂದ! ಅನುಭವಿಸಿದರೇನೇ ತಿಳಿಯತಕ್ಕದ್ದು. ತಿಳಿಸಿ ಹೇಳಿದರೆ ಅರ್ಥವಿಲ್ಲ!" ಎಂದು ಹೇಳುತ್ತಿದ್ದಳು. ಹೀಗಾಗಿ ಆಕೆಗೆ ಎದುರು ಹೇಳದೆ ಎಲ್ಲರೂ ಆಕೆಯ ಮಾತಿನಲ್ಲಿ ಮಗ್ನರಾಗುತ್ತಿದ್ದರು. ಸರೋಜಿನಿ ಕೋಣೇಗೆ ಬಂದಾಗಲೂ ಮತ್ತೆ ಅದೇ ವಿಷಯ ಮೇಲಕ್ಕೆದ್ದಿತು. ಸಾಲದ್ದಕ್ಕೆ ಒಬ್ಬೊಬ್ಬ ಪ್ರಾಧ್ಯಾಪಕರೂ ಗೆಳತಿ ಯರ ಮಾತಿನೇಟಿಗೆ ಗುರಿಯಾಗುವುದರಲ್ಲಿದ್ದರು.

"ಏನು ತಾಯಿ, ಈ ಮಿಲ್ಟನ್ ಅಂತೂ ಒಂದು ಶಬ್ದ ಕೂಡ ಅರ್ಥವೇ ಆಗುವುದಿಲ್ಲ! ಅದನ್ನು ಹೇಳುವ ಆ ಪ್ರೊಫೆಸರ್—ಅವನಿಗೆ ಹುಚ್ಚು ಹಿಡಿದಿರ ಬೇಕು. ಮಿಲ್ಟನ್ ಎಂದರೆ ತಲೆಯಮೇಲಿಟ್ಟುಕೊಂಡು ಕುಣಿಯುತ್ತಾನೆ!" ಎಂದು ಒಬ್ಬಳು.

"ಏನು, ನಿಮ್ಮ ಪ್ರೊಫೆಸರ್ ಕ್ಲಾಸಿನಲ್ಲಿ ಕುಣಿಯುತ್ತಾನೆಯೋ? ಹಾಗಾ ದರೆ ನಾಳೆ ನಿಮ್ಮ ಕ್ಲಾಸಿಗೆ ಬಂದೇಬಿಡುವೆ. ಈ ಹೊತ್ತಂತೂ ನನಗೆ ತೀರ ಬೇಸರವಾಗಿಬಿಟ್ಟಿತು. ಆ—ಯಾರೇ ಆತ? ಏನೋ ಹೇಳಿಯೇ ಹೇಳುತ್ತಿದ್ದ— ಸಿವಿಕ್ಸೋ ಏನೋ; ತಾನು ಮಾತಾಡಿದ್ದು ತನಗಾದರೂ ತಿಳಿಯುತ್ತಿತ್ತೋ ಇಲ್ಲವೋ...ನನಗಂತೂ ಕಡಿದುಕೊಂಡು ಬೀಳುವಷ್ಟು ತೂಕಡಿಕೆ" ಎಂದು ಇನ್ನೊಬ್ಬಳು.

"ಹೌದು ನೋಡು, ತಾಯಿ. ಕ್ಲಬ್ಬಿನಲ್ಲಿ ಸೊಂಪಾಗಿ ಊಟ ಹೊಡೆದು ಕ್ಲಾಸಿಗೆ ಹೋದರೆ ನಿದ್ರೆಗೇನೂ ಕೊರತೆಯಿಲ್ಲ. ಅದರಲ್ಲಿಯೂ ಹುಡುಗಿಯರ ಬೆಂಚು ಮುಂದೆಯೇ. ನಿದ್ರೆ ಮಾಡಬೇಕೆಂದರೂ ಸಾಧ್ಯವಿಲ್ಲ. ಮೇಲಾಗಿ ಪ್ರೊಫೆಸರರಂತೂ ಪುಸ್ತಕಕ್ಕಿಂತಲೂ ಹೆಚ್ಚಾಗಿ ನೋಡೋದು ನಮ್ಮನ್ನೇ...." ಎಂದು ಆ ಅಧಿಕಾರಿಯ ಪ್ರಿಯ ಪುತ್ರಿ.

"ಹೌದು. ನಾಳೆನಿಂದ ನಾವೇ ಹಿಂದಿನ ಬೆಂಚುಗಳ ಮೇಲೆ ಯಾಕೆ ಕೂಡ ಬಾರದು ?" ಎಂದು ಮೊದಲನೆಯವಳು.

"ಆಗಿಹೋಯಿತು ! ಹಿಂದಿನ ಬೆಂಚು ಹಿಡಿದರೆ ಹುಡುಗರ ಕೈಗೆಯೇ. ಅವರಿಗೆ ಬೇಕಾದದ್ದೂ ಅಷ್ಟೆ !"

"ಅದಕ್ಕೆಂದೇ ನಾನು ಹೇಳುವುದು ಕಾಲೇಜಿಗೆ ಹೋಗಬಾರದು !" ಎಂದು ಇನ್ನೊಬ್ಬಳು.

"ಕಾಲೇಜಿಗೆ ಹೋಗಬಾರದೇ ? ಕ್ಲಾಸಿಗೆ ಹೋಗಬಾರದು ಅನ್ನು" ಎಂದು ಮತ್ತೊಬ್ಬಳು.

"ಕ್ವಾಯಿಟ್ ರಾಯಿಟ್. ಕ್ಲಾಸಿಗೆ ಹೋಗದೆ ಕಾಲೇಜಿಗೆ ಹೋಗುವುದೇ ಮೋಜು. ಈಗ ತಿಳಿಯಿತಲ್ಲವೆ ನಿನಗೆ? ಎಷ್ಟು ದಿವಸದಿಂದ ಹೇಳುತ್ತಾ ಇದ್ದೇನೆ...." ಎಂದು ಅಧಿಕಾರಿಯ ಪುತ್ರಿ. ಸರೋಜಿನಿಯು ಕೋಣೆಯಲ್ಲಿ ಕಾಲಿಟ್ಟು ಎಲ್ಲರ ಲಕ್ಷ್ಯವನ್ನೂ ಸೆಳೆದಳು.

"ಈಗ ಮುಗಿಯಿತೇನೇ ನಿನ್ನ ಕಾಲೇಜು ? ಎಂದು ಮೊಲನೆಯವಳು.

"ಈಗಲಾದರೂ ಮುಗಿಯಿತು, ಇದೇ ಪುಣ್ಯ!" ಎರಡನೆಯವಳ ಉದ್ಗಾರ.

"ಈಹೊತ್ತು ಪ್ರ್ಯಾಕ್ಟಿಕಲ್ ಇತ್ತೇನು?" ಮೂರನೆಯವಳ ಕೊಂಕು ಪ್ರಶ್ನೆ.

"ಆಕೆ ಆರ್ಟ್ಸ್ ವಿದ್ಯಾರ್ಥಿ, ಸಾಯಿನ್ಸ್ ಅಲ್ಲ—ಗೊತ್ತಿಲ್ಲವೇನು ?"

"ಎಲ್ಲಾ ಗೊತ್ತಿದೆ. ಆರ್ಟ್ಸ್‌ದವರಿಗೆ ಪ್ರ್ಯಾಕ್ಟಿಕಲ್ಸ್ ಇರೋದಿಲ್ಲೇನು?" ಎಂದು ನಕ್ಕು ಮುಂದುವರಿಸಿದಳು :

"ಸಾಯಿನ್ಸ್‌ದವರಿಗೆ ಲ್ಯಾಬೊರೇಟರಿಯಲ್ಲಿ ಪ್ರ್ಯಾಕ್ಟಿಕಲ್ ಆರ್ಟ್ಸ್‌ದವರಿಗೆ ಕಾಲೇಜ್ ಗಾರ್ಡನ್ಸ್‌ನಲ್ಲಿ!" ಎಂದು ನಗೆ ಹಿಡಿಸದಾಗಿ ಹೇಳಿದಳು. ಎಲ್ಲರಿಗೂ ಮಾತು ಸೇರಿಕೆಯಾಗಿ ಬಿದ್ದು ಬಿದ್ದು ನಕ್ಕರು.

ಪುಸ್ತಕಗಳನ್ನು ಶೆಲ್ಫಿನ ಮೇಲಿಟ್ಟು ಇವರಾರ ಮಾತಿನ ಕಡೆಗೂ ಲಕ್ಷ್ಯವಿಲ್ಲದಂತೆ ಸರೋಜಿನಿ ಮುಖ ತೊಳೆಯಲು ಹೋದಳು. ಹೋಗಿ ಬರುವವರೆಗೂ ಒಂದೇ ಒಂದು ಯೋಚನೆ. ಮಾಧವನಿಗೆ ಮಾತು ಮುಗಿಸುವ ಮನಸ್ಸಿದ್ದಂತೆ

ಕಾಣಲಿಲ್ಲ. ಅವನೆಡೆಯಿಂದ ಹೊರಡಲು ತನ್ನ ಕಾಲುಗಳೂ ಕೀಳುತ್ತಿರಲಿಲ್ಲ. ಅವಳಿಗೆ ವಿಚಿತ್ರವೆನಿಸುತ್ತಿತ್ತು. ಅಂತೂ ಒಮ್ಮೆ ಹೊರಟಮೇಲೆಯೂ ಮಾಧವ ಒಂದೆರಡು ಸಲ ತಿರುಗಿ ನೋಡಿದ್ದ. ಯಾತಕ್ಕಾಗಿ ನೋಡಿರಬಹುದು ? ಆದರೆ ಮರುಕ್ಷಣವೇ ಮತ್ತೊಂದು ವಿಚಾರ ಸುಳಿದು ವಿಚಿತ್ರವೆನಿಸಿತು. ಮಾಧವ ಒಂದೆರಡು ಸಲ ಹಿಂತಿರುಗಿ ನೋಡಿದ್ದು ನಿಜ. ಆದರೆ ಅದು ತನಗೆ ಹೇಗೆ ತಿಳಿಯಿತು ? ತಾನೇಕೆ ಹಿಂತಿರುಗಿ ನೋಡಬೇಕಿತ್ತು ? ಇಬ್ಬರೂ ಒಂದೇ ವೇಳೆಗೆ ಹಿಂತಿರುಗಿ ನೋಡಿರುವುದು ವಿಚಿತ್ರವೇ ಸರಿ. ಆದರೆ ಅದಕ್ಕೂ ಹೆಚ್ಚಾಗಿ ಸರೋಜಿನಿಗೆ ವಿಚಿತ್ರವೆನಿಸಿದ್ದು—ತಾನೇಕೆ ನೋಡಿದೆ ಎಂಬುದು. ತತ್‌ಕ್ಷಣವೇ ಅಂದುಕೊಂಡಳು : ಯಾತಕ್ಕೇನು ? ಮಾಧವ ಇಂದು ಎಷ್ಟು ಸೊಗಸಾಗಿ ಕಾಣುತ್ತಿದ್ದ ! ಆತನ ಇಂದಿನ ಮೂರ್ತಿಯನ್ನು ಮನಸ್ಸಿನೆದುರಿನಿಂದ ಕಿತ್ತುಹಾಕುವುದು ಅಸಾಧ್ಯವೇ ಸರಿ. ಆತನನ್ನು ಇಂದು ಯಾರು ನೋಡಿದರೂ ಮತ್ತೊಮ್ಮೆ ಆತನನ್ನು ನೋಡಬೇಕೆನ್ನಿಸುವಂತಿದ್ದ. ಆದರೂ ...ಮುಂದೆ ವಿಚಾರ ಬಗೆಹರಿಯಲಿಲ್ಲ. ವಿಚಾರದ ಬದಲಾಗಿ ಯಾವುದೋ ಒಂದು ಮಧುರಭಾವ ಹೃದಯವನ್ನಾವರಿಸಿ ಕಚಕುಳಿಯಾಡಿಸುವಂತಿತ್ತು. ಗೆಳತಿಯರೆಲ್ಲರೂ ಈಕೆ ಬರುವ ದಾರಿಯನ್ನೇ ಕಾಯುತ್ತಿದ್ದರು.

"ಯಾಕೆ ? ಇಷ್ಟು ಹೊತ್ತು ಏನು ಮಾಡಿದೆಯೆ ? ಸ್ಪೆಷಲ್ ಕ್ಲಾಸಿತ್ತೇ ನಿಮಗೆ ?"

"ಸ್ಪೆಷಲ್ ಕ್ಲಾಸೇನೋ ಇತ್ತು. ಆದರೆ ನಾನೇನೂ ಹೋಗಲಿಲ್ಲ."

"ಕಾಂಗ್ರಾಚುಲೇಷನ್ಸ್ ! ಹೀಗೆ ಹಾದಿಗೆ ಬಾರೇ, ನನ್ನ ತಾಯಿ "

"ಹಾಗಾದರೆ 'ಪ್ರ್ಯಾಕ್ಟಿಕಲ್ಸ್' ಏನು ?" ಎಂದು ನಕ್ಕಳೊಬ್ಬಳು.

"ನಮಗೆಲ್ಲಿಯ ಪ್ರ್ಯಾಕ್ಟಿಕಲ್ಸೇ ?"

"ಈಕೆ ಈಗ ಏನು ಹೇಳಿದಳು ಕೇಳಲಿಲ್ಲವೇ ನೀನು ? ಆರ್ಟ್ಸ್‌ದವರಿಗೆ ಗಾರ್ಡನ್ಸ್‌ನಲ್ಲಿ...."

"ಛೀ ! ಛೀ ! ನಮ್ಮ ಸರೋಜಿನಿಯು ಪ್ರ್ಯಾಕ್ಟಿಕಲ್ಸ್ ಗಾರ್ಡನ್ಸ್‌ನಲ್ಲಿ ಅಲ್ಲ...."ಎಂದು ಬೇಕೆಂತಲೇ ತಡೆದಾಗ ಎಲ್ಲರಿಗೂ ಕುತೂಹಲ ಹಿಡಿಸದಾಗಿ ಅರೆಮುರ್ಘ ಎಲ್ಲರೂ ಸೇರಿಯೇ ಕೇಳಿದರು :

"ಹಾಗಾದರೆ ಎಲ್ಲಿ ?"

"ಗೊತ್ತಿಲ್ಲವೆ ನಿಮಗೆ ?"

"ನಮಗೆ ಹೇಗೆ ಗೊತ್ತಾಗಬೇಕು ?"

"ಸಾಹಿತ್ಯ ಸಂಘದ ಸದಸ್ಯರಾಗಿದ್ದರೆ ನಿಮಗೂ ಗೊತ್ತಾಗುತ್ತಿತ್ತು!"

"ಓಹೋ!...."

ಸರೋಜಿನಿಯ ಹೃದಯದಲ್ಲಿ ಒಂದೆಡೆ ಆಗಲಿನ ಸುಮಧುರ ಭಾವ, ಮನಸ್ಸಿನೆದುರು ಮಾಧವನ ಮೂರ್ತಿ. ಇನ್ನೊಂದೆಡೆ ಆ ಭಾವ ಗೊತ್ತುಗುರಿಯಿಲ್ಲದ ಇಂಥ ಹರಟೆಯ ಹೊಡೆತದಲ್ಲಿ ಉಳಿಯುವುದೇ ಕಷ್ಟವೆನಿಸಿತು. ಆ ಭಾವನೆಯನ್ನು ಉಳಿಸಿಕೊಂಡು ಅದನ್ನೇ ನೆನೆಯಲು ಹಾತೊರೆಯುತ್ತಿದ್ದ ಸರೋಜಿನಿಯ ಹೃದಯ ಈ ಮಾತಿನ ರೀತಿಯನ್ನೆದುರಿಸಲು ಸಿದ್ಧವಾಗಿರಲಿಲ್ಲ. ಅಂತೆಯೇ ಅರೆಮರ್ಧ ಸಿಡುಕಿನಲ್ಲಿಯೇ ಹೇಳಿದಳು:

"ನಿಮಗೇನು ಹುಚ್ಚೆ? ಸುಮ್ಮನೆ ಏನಾದರೊಂದು ಮಾತನಾಡಬೇಡಿರಿ ನೋಡಿ...."

"ಸುಳ್ಳಾದರೆ ಸಿಟ್ಟೇಕೆ. ಸರೋಜಿನಿದೇವಿಯವರೆ?"

"ಸುಳ್ಳೆಂತಲ್ಲ, ಹುಚ್ಚೆಂದು!"

"ಹುಚ್ಚು, ಯಾರಿಗೆ?"

"ಹೀಗೆ ಬಾಯಿಗೆ ಬಂದ ಹಾಗೆ ಹರಟುವವರಿಗೆ!"

"ಒಳ್ಳೆಯದು ನಿನ್ನಂತೆಯೇ ಆಗಲಿ. ಬಾಯಿಗೆ ಬಂದ ಹಾಗೆ ಹರಟಿದರೆ ಹುಚ್ಚು; ಕಣ್ಣಿನಿಂದ ಕಂಡದ್ದನ್ನು ಹೇಳಿದರೆ...." ಎಂದು ಮೊದಲನೆಯವಳು ಗೆಲುವಿನಿಂದ ಮುಂದೆ ಬಂದಳು.

"ಏನದು ನೀನು ಕಣ್ಣಿನಿಂದ ಕಂಡದ್ದು?"

"ಯಾಕಮ್ಮ? ನಮ್ಮ ಬಾಯಿಂದಲೇ ಕೇಳಬೇಕೆನ್ನುತ್ತೀಯಾ?"

"ಮಾಧವ ನಿನ್ನ ಮೂರುತಿಯನೆ ನಿಲ್ಲಿಸೊ...." ಎಂದು ಎರಡನೆಯವಳು ರಾಗ ತೆಗೆದಳು.

"ಸಾಕುಮಾಡೆ. ನೀನಂತೂ..." ಎಂದು ಸರೋಜಿನಿ ಆಕೆಯ ಬಾಯಿಯನ್ನೇ ಮುಚ್ಚಿದಳು. ಎಲ್ಲರಿಗೂ ಹಿಡಿಸಲಾರದ ನಗು. ಸರೋಜಿನಿಗೆ ಒಳಗಿನಿಂದಲೇ ಆನಂದ ತರಂಗತರಂಗವಾಗಿ ಹೃದಯದಲ್ಲಿ ಪುಟಿದೇಳುತ್ತಿದ್ದರೂ ಬಹಿರಂಗವಾಗಿ ಏನನ್ನೂ ತೋರಗೊಡುವಂತಿರಲಿಲ್ಲ. ಮೊದಲನೆಯವಳು ಮತ್ತೆ ಕೆಣಕಿದಳು:

"ಅಲ್ಲೇ, ಏನಾದರು ಮಾತು ನಡೆದಿತ್ತೆ? ಅಂಥ ಬಿಸಿಲಲ್ಲಿ ಗಂಟೆಗಟ್ಟಲೆ ನಿಂತಿದ್ದಿರಿ?"

"ಎಲ್ಲಿಯ ಗಂಟೆ? ಒಂದೈದು ನಿಮಿಷ ಇರಬಹುದು. ನಾಳಿನ ಕಾರ್ಯ

ಕ್ರಮದ ಬಗ್ಗೆ ಒಂದಿಷ್ಟು ಕೇಳಬೇಕಾಗಿತ್ತು...."

"ಏನು ಕೇಳಬೇಕಾಗಿತ್ತು ? ಯಾವ ಹಾಡು ಹಾಡಲಿ ಎಂದೇನು ?"

"ಯಾವುದೇನು ? ಹಾಡಂತೂ ಗೊತ್ತೇ ಇದೆ."

"ಯಾವುದು ?" ಎಂದು ಸರೋಜಿನಿ ಅರ್ಧ ಅಣಕಿನಿಂದಲೇ ಕೇಳಿದಳು.

"ನಾನು ಹೇಳಲಿ ?" ಎಂದು ಮೂರನೆಯವಳು ಮುಂದಾದಳು.

"ಹುಂ...."

"ಯಾರಿಗೂ ಹೇಳೋಣು ಬ್ಯಾಡಾ...."

"ನಿಮಗೆಲ್ಲ ಹುಚ್ಚು ಅಂತ ಹೇಳಿದೆನಲ್ಲ....ಇನ್ನೇನು ಮತ್ತೆ...."

"ಹುಚ್ಚು ನಮಗಲ್ಲ....ಹುಚ್ಚು ನಿನಗೆ....ಮೆಚ್ಚು ಮೋಜು ನಮಗೆ...."

ಹರಟೆ ನಡೆದೇ ಇತ್ತು. ಅಂಚೆ ಸಿಪಾಯಿ ಪತ್ರಗಳನ್ನು ತೆಗೆದುಕೊಂಡು ಬಂದು ತಡೆಯನ್ನುಂಟುಮಾಡಿರದಿದ್ದರೆ ಇನ್ನೂ ನಡೆಯುತ್ತಲೇ ಇತ್ತು. ಮಾಧವನಿಗಿಂತ ಹೆಚ್ಚಿನ ಕುತೂಹಲವನ್ನು ತಮತಮಗೆ ಬರಬೇಕಾಗಿದ್ದ ಕಾಗದಗಳು ಕೆರಳಿಸಿದ್ದರಿಂದ ಎಲ್ಲರೂ ಕ್ಷಣಾರ್ಧದಲ್ಲಿ ತಮ್ಮ ತಮ್ಮ ಕೋಣೆಗಳಿಗೆ ಓಡುತ್ತ ತೆರಳಿದರು. ಸರೋಜಿನಿಗೆ ತಾಯಿಯ ಕಡೆಯಿಂದ ಕಾಗದವೊಂದು ಬಂದಿತ್ತು.

ಸರಸರನೆ ಪತ್ರವನ್ನೋದಿ ಮುಗಿಸಿದಳು. ಕುರ್ಚಿಯಲ್ಲಿ ಕುಸಿದುಬಿದ್ದಳು. ಬಲಗೈಯ ಮೊದಲಿನೆರಡು ಬೆರಳುಗಳಿಂದ ಎರಡೂ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿ ಹಿಡಿದಳು. ತನ್ನ ಜೀವನದಲ್ಲಿಯ – ತನ್ನ ಮನೆಮಾರಿನ ಜೀವನದಲ್ಲಿಯ—ಭೀಕರತೆಯನ್ನು ನೋಡಲಾರದವಳಾಗಿ ಆಕೆ ಹಾಗೆ ಕಣ್ಣುಮುಚ್ಚಿದ್ದಳೆಂದೂ ಹೇಳಬಹುದಿತ್ತು. ಯಾವ ಒಂದು ಪರಂಪರೆಯನ್ನು ಮುರಿದು ಸುಖವಾಗಿ ಬಾಳಬೇಕೆಂಬ ಬಯಕೆಯಿಂದ ಸರೋಜಿನಿ ತನ್ನ ವಿದ್ಯಾಭ್ಯಾಸಕ್ಕಾಗಿ ಕಾಲೇಜಿಗೆ ಬಂದಿದ್ದಳೋ ಆ ಬಯಕೆಯನ್ನು ಸಾಧ್ಯವಿದ್ದ ಯುಕ್ತಿಗಳೆಲ್ಲವನ್ನೂ ಪ್ರಯೋಗಿಸಿ ತನ್ನ ತಾಯಿ ಮಣ್ಣುಗೂಡಿಸಬೇಕೆನ್ನುತ್ತಿರುವಂತಿತ್ತು. ತನ್ನ ಧ್ಯೇಯವನ್ನು ಬೆಳೆಯಗೊಡದೆ ಅದನ್ನು ಚಿಗುರುವಾಗಲೇ ಚಿವುಟಿಹಾಕಬೇಕೆಂದು ಹೊಂಚು ಹಾಕಿದ ಪ್ರಪಂಚವನ್ನು ನೋಡುವುದೇ ಬೇಡ ಎಂದು ಕಣ್ಣು ಮುಚ್ಚಿದ್ದಳು !

ಪರೀಕ್ಷೆ ಸಮೀಪಿಸಿದಂತೆ ವಸತಿಗೃಹದ ವಾಸವೂ ಕೊನೆಗಾಣುವುದರಲ್ಲಿದ್ದುದರಿಂದ ಕೊನೆಯ ತಿಂಗಳಿಗೆಂದು ಸರೋಜಿನಿ ತಾಯಿಯ ಹತ್ತಿರ ಹಣ ಕೇಳಿದ್ದಳು. ಹಣವನ್ನು ಸುರಿಯಲು ತಾಯಿ ಎಂದಿಗೂ ಹಿಂಜರಿಯುತ್ತಿರಲಿಲ್ಲ.

ಆದರೆ ಹಣ ಸರೋಜಿನಿಯ ಕೈಗೆ ತಲುಪುವಾಗಲೆಲ್ಲವೂ ತಾಯಿ ತನ್ನ ಕೈವಾಡವನ್ನು ತೋರಿಸುತ್ತಿದ್ದಳು. ತನ್ನಿಂದ ದೂರವಾಗಬಯಸುತ್ತಿದ್ದ ಮಗಳನ್ನು ಹಿಡಿದು ಹತ್ತಿರವಿರಿಸಿಕೊಳ್ಳಬೇಕೆನ್ನುತ್ತಿದ್ದಳು. ತಾಯಿಯ ಈ ಬಯಕೆ —ಕೇವಲ ತಾಯ್ತನದ ಹಂಬಲವಾಗ್ತಿದ್ದರೆ ಸರೋಜಿನಿ ತಾಯಿಗೆ ಕೃತಜ್ಞಳಾಗಿರಬಹುದಿತ್ತು. ಆದರೆ ಅದು ಕೇವಲ ತಾಯಿಯ ಬಯಕೆಯಾಗಿರದೆ ಅವಳ ಮನೆಯಲ್ಲಿ ಮೂರು ನಾಲ್ಕು ತಲೆಮಾರುಗಳಿಂದಲೂ ನಡೆದುಬಂದ ಸೂಳೆಗಾರಿಕೆಯ ಪರಂಪರೆಯನ್ನು ಮುಂದುವರಿಸುವ ಅಸಂಸ್ಕೃತವಾದ ಆಸೆಯಾಗಿತ್ತು ! ಇದನ್ನು ನೆನೆದಾಗ ಸರೋಜಿನಿಯೆಂದುಕೊಳ್ಳುತ್ತಿದ್ದಳು : 'ಈಕೆ ನನ್ನ ತಾಯಿಯಲ್ಲ ! ನನ್ನ ಜನ್ಮದಾರಭ್ಯದ ವೈರಿ ! ಪಾಪದ ದಾರಿಗೆ ನೂಕುವ ಈ ಶಕ್ತಿ ನನ್ನ ಜನ್ಮಕ್ಕೊಂದು ಶಾಪ !' ಎಂದು.

ತನಗೆ ಬೇಕಾದ ನೂರು ರೂಪಾಯಿಗಳನ್ನು—ಎಷ್ಟು ಬೇಕಾದಷ್ಟು ದುಡ್ಡನ್ನು—ಅದೇ ಊರಿನಲ್ಲಿ ವಕೀಲಿಯ ವ್ಯವಸಾಯದ ನೆಪದಿಂದ ಸುಖವಾಗಿ ಕಾಲ ಕಳೆಯುತ್ತಿದ್ದ ಗೋವಿಂದಗೌಡರ ಕಡೆಯಿಂದ ತೆಗೆದುಕೊಳ್ಳಬಹುದೆಂದು ತಾಯಿ ಬರೆಯಿಸಿದ್ದಳು.

ಗೋವಿಂದಗೌಡ ! ಆ ಹೆಸರನ್ನು ನೆನೆದರೆ ಸರೋಜಿನಿ ಆಪಾದಮಸ್ತಕವೂ ಉರಿಯುತ್ತಿದ್ದಳು. ತನ್ನ ತಾಯಿಯ ಬಯಕೆಗೆ ಹತ್ತು ಬಗೆಯಲ್ಲಿ ಸಹಕಾರವನ್ನು ನೀಡಿ ತನ್ನ ಸ್ವಾರ್ಥವನ್ನು ಸಾಧಿಸಬೇಕೆಂದಿದ್ದ ಗೋವಿಂದಗೌಡನೂ ತನ್ನ ಬದುಕಿನಲ್ಲಿಯ ಒಂದು ವಿಷಮಶಕ್ತಿಯೆಂದು ಭಾವಿಸಿದ ಸರೋಜಿನಿ ಈ ಇವರಿಬ್ಬರೂ ಹರಡುತ್ತಿದ್ದ ಬಲೆಗಳನ್ನು ದಾಟಿಹೋಗುವುದು ಎಂದಾದರೂ ಸಾಧ್ಯವಾಗಬಹುದೆ? ಎಂದುಕೊಂಡಳು. ಕಳೆದ ಜೂನ್ ತಿಂಗಳಲ್ಲಿ ತಾನು ಕಾಲೇಜು ಸೇರುವಾಗ ದೊಡ್ಡದೊಂದು ಯುದ್ಧವೇ ನಡೆದುಹೋದುದನ್ನು ನೆನೆದಳು. ಕಾಲೇಜು ಸೇರುವುದು ತಾಯಿಗೆ ಖಂಡಿತವಾಗಿಯೂ ಬೇಡವಾಗಿತ್ತು. ಹೀಗೆಂದು ಮ್ಯಾಟ್ರಿಕ್ ಪಾಸಾದನಂತರ ಎರಡುಮೂರು ವರ್ಷ ಮನೆಯಲ್ಲಿರಬೇಕಾಗಿತ್ತು. ಆಕೆಯ ದೃಷ್ಟಿಯಿಂದ ವಿದ್ಯಾಭ್ಯಾಸವೆಂದರೆ ವ್ಯರ್ಥವಾದ ವೆಚ್ಚ ; ಅಲ್ಲದೆ ಕಾಲೇಜು ಸೇರಿದ ಹೆಣ್ಣು ಕೈಗೆ ನಿಲುಕದು ಎಂಬ ನಂಬಿಕೆ ಬೇರೆ. ತಾಯಿಯನ್ನು ಒಪ್ಪಿಸಬೇಕಾದಾಗ ಈ ನಂಬಿಕೆಗಳನ್ನು ಹೊಡೆದೋಡಿಸುವ ಕೆಲಸದಲ್ಲಿ ಗೌಡ ಸಹಕಾರಿಯಾಗಿದ್ದನೇನೋ ನಿಜ. ಆದರೆ ಆತ ತನ್ನ ಪರವಾಗಿ ಆಗ ಯಾಕೆ ವಾದಿಸಿದ್ದನೆಂಬುದರ ಮರ್ಮ ಸರೋಜಿನಿಗೆ ತಾನು ಕಾಲೇಜು ಸೇರಿದ ಒಂದೆರಡು ವಾರಗಳಲ್ಲಿಯೇ ತಿಳಿಯಿತು. ಸರೋಜಿನಿ

ಕಾಲೇಜಿಗೆ ಬಾರದಿದ್ದರೆ ಆಕೆ ತಾಯಿಯ ಹತ್ತಿರವೇ ಉಳಿಯುತ್ತಿದ್ದಳು ; ಆಕೆ ಯನ್ನು ಅಲ್ಲಿಂದ ತಾನಿರುವಲ್ಲಿಗೇ ಬರುವಂತೆ ಮಾಡಿದರೆ ತನ್ನ ಬಯಕೆಯನ್ನು ಸಾಧಿಸಬಹುದು ಎಂಬುದು ಗೌಡನ ಇಂಗಿತವಿದ್ದಿತೆಂಬುದೂ, ಆಕೆ ಕಾಲೇಜಿ ಗಾಗಿ ತಮ್ಮ ಊರಿಗೆ ಬಂದರೆ ಎಲ್ಲವೂ ಸರಿಹೋಗುವುದೆಂದೂ, ತಾನು ಆಕೆಯ ವೆಚ್ಚವನ್ನೆಲ್ಲ ವಹಿಸಿಕೊಳ್ಳುತ್ತೇನೆಂದು ಹೇಳಿದ್ದರಿಂದಲೇ ತಾಯಿ ತನ್ನನ್ನು ಕಾಲೇಜಿಗೆ ಹೋಗಗೊಟ್ಟಳೆಂಬುದೂ, ಸರೋಜಿನಿಗೆ ಹಿಂದುಗಡೆ ಯಿಂದ ಗೊತ್ತಾಯಿತು. ಆ ಪ್ರಸಂಗ ಆಕೆಯ ಕಣ್ಣೆದುರು ಇನ್ನೂ ನಿಚ್ಚಳ ವಾಗಿ ನಿಲ್ಲುತ್ತಿತ್ತು.

ಜುಲೈ ತಿಂಗಳ ಮೊದಲ ವಾರವಿರಬಹುದು. ಸರೋಜಿನಿ ವಸತಿಗೃಹವನ್ನು ಸೇರಿ ಅದೇ ಹತ್ತೆಂಟು ದಿವಸಗಳಾಗಿದ್ದವು. ಹೊಸತಾಗಿ ಎಲ್ಲ ಏರ್ಪಾಡು ಗಳನ್ನು ಮಾಡಿಕೊಳ್ಳಬೇಕಾದ್ದರಿಂದ ನಿತ್ಯವೂ ಒಂದಿಲ್ಲೊಂದು ಸಾಮಾನಿಗಾಗಿ ಸರೋಜಿನಿಗೆ ಪೇಟೆಯಲ್ಲಿ ಹೋಗಿಬರಬೇಕಾಗಿದ್ದಿತು. ಇದನ್ನು ತಿಳಿದ ಗೋವಿಂದಗೌಡ ಸಂಜೆಯ ವಾಕಿಂಗಿನ ನೆಪದಿಂದ ಸರೋಜಿನಿ ಇದಿರಾಗುವಂತೆ ವಸತಿಗೃಹದೆದುರಿನಿಂದ ನಿಧಾನವಾಗಿ ನಡೆದಿದ್ದ. ಸರೋಜಿನಿಗೆ ಪೇಟೆಯಿಂದ ಬರಲು ಅಂದು ದಿನದಕ್ಕಿಂತಲೂ ಕೊಂಚ ತಡವೂ ಆಗಿತ್ತು. ಅದೇ ಮಳೆ ಬಿದ್ದು ಹೋಗಿದ್ದರಿಂದ ಬೀದಿಗಳೆಲ್ಲವೂ ಬರಿದಾಗಿಯೇ ಇದ್ದವು. ವಸತಿಗೃಹ ವಂತೂ ಊರಹೊರಗೆಯೇ ಇದ್ದುದರಿಂದ ಆ ಬೀದಿ ಇನ್ನೂ ನಿರ್ಜನವಾಗಿತ್ತು. ಅವಸರವಸರವಾಗಿ ಬರುತ್ತಿದ್ದ ಸರೋಜಿನಿಯನ್ನು ಗೌಡ ದಾರಿಯಲ್ಲಿ ತಡೆದು ಬಿಟ್ಟ. ಆತನ ಬಗೆಯಲ್ಲಿ ಹೆಚ್ಚಾಗಿ ಸಂಶಯಗೊಳ್ಳಲು ಯಾವ ವಿಶೇಷ ಕಾರಣವಿರದ್ದರಿಂದ ನಿಂತು ಮಾತನಾಡುವ ಧೈರ್ಯವೂ ಸರೋಜಿನಿಯಲ್ಲಿ ಇತ್ತು. ಗೋವಿಂದಗೌಡ,

"ಏನು, ಪೇಟೆಯ ಕಡೆಗೆ ಹೋಗಿದ್ದೆಯಾ?" ಎಂದು ಕೇಳಿದ.

"ಹುಂ..."

"ಹೇಗಿದೆ ಕಾಲೇಜು?"

"ಹೇಗೇನು? ಇನ್ನೂ ಇದೇ ಪಾಠಗಳನ್ನು ಮೊದಲು ಮಾಡಿದ್ದಾರೆ."

"ವಸತಿಯಲ್ಲಿ ಎಲ್ಲವೂ ಸರಿಯಾಗಿದೆಯಷ್ಟೆ?"

"ಹುಂ..."

ಸರೋಜಿನಿಯ ಒಂಟಿಮಾತಿನ ಉತ್ತರಗಳಿಂದ ಗೌಡನಿಗೆ ತೃಪ್ತಿಯಾಗು ತ್ತಿರಲಿಲ್ಲವೆಂಬುದು ಸ್ಪಷ್ಟವಾಗಿತ್ತು. ಹೇಗಾದರೂ ಮಾಡಿ ಆಕೆಯನ್ನು

ಮಾತನಾಡಿಸಬೇಕಾಗಿದ್ದರಿಂದ ಹತ್ತೆಂಟು ಪ್ರಶ್ನೆಗಳು ಆತನಲ್ಲಿ ಸಿದ್ಧವಾಗಿಯೇ ಇದ್ದಂತೆ ಕಾಣುತ್ತಿತ್ತು.

"ಊರಿಂದ ಬಂದು ಹತ್ತುಹನ್ನೆರಡು ದಿವಸವಾಯಿತು. ಹೇಗಿದ್ದೀಯೋ ಅನ್ನುತ್ತಿದ್ದೆ. ನಿನ್ನೆಯೇ ನಿನ್ನ ತಾಯಿಯ ಕಡೆಯಿಂದ ಕಾಗದ ಬಂದಿದೆ— ಹೋಗಿ ನೋಡಿಕೊಂಡು ತಿಳಿಸಿರಿ ಎಂದು."

ಇದೆಲ್ಲವೂ ಕಟ್ಟುಕಥೆಯಾಗಿರಬೇಕೆಂದು ಸರೋಜಿನಿಗೆ ಸಂಶಯ. ಆಕೆಯ ಸಂಶಯವೂ ನಿಜವೇ. ಆದರೆ ಇದ್ದರೂ ಇರಬಹುದು. ತಾಯಿಯನ್ನು ಬಿಟ್ಟು ತಾನು ಬೇರೆಯಾಗಿ ಇರುತ್ತಿದ್ದುದು ಇದೇ ಮೊದಲ ಸಲವಾದ್ದರಿಂದ ಕಾಗದ ಬರೆಯಿಸಿರಲೂ ಸಾಕು ಎಂದುಕೊಂಡು ಹೇಳಿದಳು :

"ಎಲ್ಲವೂ ಸರಿಯಾಗಿದೆ ಎಂದು ಬರೆಯಿರಿ...."

"ಹೂಂ... ಬರೆಯುತ್ತೇನೆ... ಮತ್ತೇನು ?"

ಸರೋಜಿನಿ ಸುಮ್ಮನಾದಳು. ಕೈಯಲ್ಲಿ ಬಡಿಗೆಯನ್ನು ಸೋಗಿನ ಉಲ್ಲಾಸದಿಂದ ತಿರುವುತ್ತಾ ಗೌಡ ಎರಡು ಹೆಜ್ಜೆ ಸಮೀಪಕ್ಕೆ ಬಂದು ಕೇಳಿದ:

"ನಮ್ಮ ಮನೆಯ ಕಡೆಗೆ ಬರುವುದಿಲ್ಲವೆ?"

"ಬರುತ್ತೇನೆ, ಯಾವಾಗಲಾದರೂ...?

"ಈಗ ನಿಮ್ಮ ಕ್ಲಬ್ಬುಗಳು ಇನ್ನೂ ಪ್ರಾರಂಭವಾಗಿಲ್ಲವಾದರೆ ಈಗಲೇ ಹೊರಟುಬಿಡು. ರಾತ್ರಿ ಊಟ ಮಾಡಿಕೊಂಡು ತಿರುಗಿಬರುವಿಯಂತೆ...."

"ಬೇಡ, ಬೇಡ. ಈಗ ಯಾತಕ್ಕೆ ಸುಮ್ಮನೆ...."

"ಸುಮ್ಮನೆ ಏನದರಲ್ಲಿ ? ಊಟ ಮಾಡಿಕೊಂಡು ಬಂದರಾಗುವುದಿಲ್ಲವೆ?"

ಆತನ ಮನಸ್ಸನ್ನು ಮುರಿಯುವುದು ಸರೋಜಿನಿಗೆ ಕಷ್ಟದ ಕೆಲಸವೆನಿಸಿತು. ಅನಗತ್ಯವಾಗಿ ಈತ ಯಾಕೆ ಇಷ್ಟು ಒತ್ತಾಯಪಡಿಸುತ್ತಿರಬಹುದು ಎಂಬ ವಿಚಾರ ನಿಧಾನವಾಗಿ ಸಂಶಯಕ್ಕೆ ಎಡೆಕೊಡತೊಡಗಿತು. ಹೇಗಾದರೂ ಮಾತು ಮುಗಿಸಬೇಕೆಂದು ಹೇಳಿದಳು:

"ಈಹೊತ್ತು ಬೇಡ. ಈಗಲೇ ರಾತ್ರಿಯಾಗಿದೆ. ಇನ್ನು ಮೇಲೆ ನಿಮ್ಮಲ್ಲಿಗೆ ಬಂದು ತಿರುಗಿ ಹೋಗುವುದೆಂದರೆ ತೀರ ತಡವಾಗುತ್ತದೆ...."

"ತಡವಾದರೇನಂತೆ? ತಿರುಗಿಬರುವಾಗ ಗಾಡಿಯಲ್ಲಿ ಬರಬಹುದು. ಇಲ್ಲಿಯ ವರೆಗೆ ನಾನು ಬಂದು ಕಳಿಸಿ ಹೋಗುತ್ತೇನೆ. ನಿಮ್ಮ ಸೂಪರಿಂಟೆಂಡೆಂಟರು ಆಕ್ಷೇಪಿಸಿದರೆ ಅವರ ಅಪ್ಪಣೆಯನ್ನೂ ಈಗಲೇ ಕೇಳಿಬಿಡಬಹುದು....ನಡೆ. ಹೋಗುವಾ ." ಎಂದು ಸರೋಜಿನಿಯ ಬೆನ್ನ ಮೇಲೆ ಕೈಯಿಟ್ಟ. ಸರೋಜಿನಿ

ಸರಕ್ಕನೆ ಎರಡು ಹೆಜ್ಜೆ ಹಿಂದಕ್ಕೆ ಸರಿದಳು, ಆಕೆಯ ಭಾವ ಗೌಡನಿಗೆ ಹೊಳೆಯದಿರಲ್ಲಿಲ್ಲ. ಆದರೆ ಅದರಿಂದ ಎಚ್ಚರಗೊಳ್ಳುವ ಸ್ಥಿತಿಯಲ್ಲಿ ಆತನ ವಿವೇಕ ಇರಲಿಲ್ಲ. ಅಂತೆಯೇ ಹೇಳಿದ :

"ಹೀಗೇಕೆ ಮಾಡುತ್ತೀ, ಸರೋಜಾ "

ಸರೋಜಿನಿ ಬೆಚ್ಚಿದಳು. ತನ್ನ ತಾಯಿ ತನ್ನನ್ನು ಹಾಗೆಯೇ ಸಂಬೋಧಿಸುತ್ತಿದ್ದರೂ ಗೌಡನಿಂದ ಆ ರೀತಿಯನ್ನು ಆಕೆ ಅಪೇಕ್ಷಿಸಿರಲಿಲ್ಲ. ಅಲ್ಲದೆ ಆತನ ದನಿಯಲ್ಲಿಯ ಕಾತರತೆ ಆಕೆಯನ್ನು ವಿಚಿತ್ರವಾಗಿ ಕೆರಳಿಸಿತು. ಆತನ ಪಾಪ ಹೇತುವನ್ನು ಸ್ಪಷ್ಟವಾಗಿ ಗುರುತಿಸಿದಳು. ತುಸು ಕಠಿಣವಾಗಿಯೇ ಹೇಳಿದಳು :

"ನಾನಿಂದು ಬರುವುದಿಲ್ಲ..." ಎಂದು.

"ಹಾಗಾದರೆ ಎಂದು ಬರುವಿ ?"

ನೋಡೋಣವಂತೆ. ಇನ್ನೂ ಇಡೀ ಟರ್ಮ್ ಇದೆಯಲ್ಲ...." ಎಂದು ಸುಳ್ಳು ಸಮಾಧಾನದ ದನಿಯಲ್ಲಿ ಹೇಳಿ ಅಂದಿನ ಒತ್ತಾಯದಿಂದ ಪಾರಾಗಲೆಳಸಿದಳು.

"ಮುಂದಿನ ವಾರ ಬರುತ್ತೀಯಾ ?"

"ಹುಂ..." ಎಂದಳು ಸರೋಜಿನಿ, ಈಗಂತೂ ಶನಿ ತೊಲಗಿತು ಎಂಬ ಸಮಾಧಾನದಲ್ಲಿ.

"ಹಾಗಾದರೆ ಮತ್ತೊಮ್ಮೆ ಕಾಣುವೆ" ಎಂದು ಹೇಳಿ ಮತ್ತೆ ನಿಷ್ಕಾರಣವಾಗಿ ಆಕೆಯ ಬೆನ್ನು ತಟ್ಟಿ ಗೌಡ ಹೊರಟುಹೋಗಿದ್ದ.

ಮುಂದೆ ಮೊದಲ ಟರ್ಮಿನಲ್ಲಿ ಮತ್ತೆ ಮೂರು-ನಾಲ್ಕು ಸಂದರ್ಭಗಳಲ್ಲಿ ಗೌಡನ ಕೈಗೆ ಸಿಕ್ಕು ಏನಾದರೂ ಹೇಳಿ ಪಾರಾಗಬೇಕಾದರೆ ಸರೋಜಿನಿಗೆ ಸಾಕಾಗಿಹೋಗಿತ್ತು. ಇಂಥ ಪ್ರತಿಯೊಂದು ಸಂದರ್ಭದಲ್ಲಿಯೂ ಆಕೆ ಅಂದುಕೊಳ್ಳುತ್ತಿದ್ದಳು ; 'ಸೂಳೆಗಾರಿಕೆಯಲ್ಲಿ ಹುಟ್ಟಿದ್ದೇ ಒಂದು ಶಾಪದಂತೆ ನನ್ನನ್ನು ಬೆನ್ನಟ್ಟುತ್ತಿದೆ. ಈ ಎಲ್ಲ ಚೇಷ್ಟೆಗಳಲ್ಲಿ ಗೌಡನಿಗೆ ಬುದ್ಧಿಪೂರ್ವಕವಾಗಿ ಉತ್ತೇಜನ ಕೊಡುತ್ತಿದ್ದ ನನ್ನ ಈ ತಾಯಿ ಈ ಶಾಪದ ಮೂರ್ತಸ್ವರೂಪವಾಗಿದ್ದಾಳೆ' ಎಂದು.

ಸರೋಜಿನಿಯ ತಾಯಿ ರಂಗಸಾನಿ ತನ್ನ ಯಜಮಾನ ತೀರಿಹೋದಮೇಲೆ ತನ್ನ ಊರಾದ ಗದಗನ್ನು ಸೇರಿದ್ದಳು. ಆಗ ಸರೋಜಿನಿಗೆ ನಾಲ್ಕು ವರ್ಷ. ಗೌಡನೂ ಅದೇ ಊರಿನ ಒಂದು ಹಿರಿಯ ಮನೆತನದವನಾದ್ದರಿಂದ ಆಕೆಯ ತಾಯಿಯ ಬಳಕೆ ಆ ಮನೆಯಲ್ಲಿ ವಿಶೇಷವಾಗಿತ್ತು. ಗೋವಿಂದಗೌಡನ ತಂದೆ ಇರುವವರೆಗೂ ಗೌಡನ ಮನೆತನದಿಂದ ಒಂದಿಲ್ಲೊಂದು ರೀತಿಯಲ್ಲಿ ವರ್ಷಾ

ಸನವೂ ದೊರೆಯುತ್ತಿತ್ತು. ಆ ಮನೆತನದಲ್ಲಿ ಏನಾದರೂ ಉತ್ಸವ ವಿಜೃಂಭಣೆ ನಡೆದರೆ ರಂಗಸಾನಿ ತನ್ನ ಹಾಡುಗಾರಿಕೆಯನ್ನು ಪ್ರದರ್ಶಿಸುತ್ತಿದ್ದಳು. ಗೌಡನ ತಂದೆ ತೀರಿಹೋದರೂ ತಾಯಿಯ ವಹಿವಾಟು ಯಥಾಸ್ಥಿತವಾಗಿ ನಡೆದೇ ಇತ್ತು. ಗೌಡ ವಕೀಲವೃತ್ತಿಯನ್ನು ಪ್ರಾರಂಭಿಸಿದ್ದು ತಮ್ಮ ಊರಲ್ಲಿಯೇ. ತಾಯಿಯ ಓಡಾಟದ ಮೂಲಕ ವಯಸ್ಸಿಗೆ ಬರುತ್ತಿದ್ದ ಸರೋಜಿನಿ ಗೌಡನ ಲಕ್ಷ್ಯವನ್ನು ಹೆಚ್ಚೆಚ್ಚಾಗಿ ಸೆಳೆಯತೊಡಗಿದ್ದಳು. ಕಳೆದ ವರ್ಷ ಗೌಡ ವಕೀಲಿಯನ್ನು ಧಾರವಾಡದ ಜಿಲ್ಹಾ ಕೋರ್ಟಿನಲ್ಲಿ ನಡೆಸ ಬೇಕೆಂದು ಗೊತ್ತಾದಾಗ ಆತ ಸರೋಜಿನಿಯ ವಿದ್ಯಾಭ್ಯಾಸದ ನೆಪಹೂಡಿ ಆಕೆಯ ತಾಯಿಯನ್ನು ಊರುಬಿಡಿಸಿ ಕರೆದೊಯ್ಯುವ ಸಂಧಾನ ನಡೆಸಿದ. ಆದರೆ ಇತ್ತೀಚಿಗೆ ವರ್ಷೆರಡು ವರ್ಷಗಳಲ್ಲಿ ಬೆಳೆಯುತ್ತಿದ್ದ ದೇಹಾಲಸ್ಯದ ಮೂಲಕ ರಂಗಸಾನಿ ಊರುಬಿಡಲು ಒಪ್ಪಲಿಲ್ಲ. ಸರೋಜಿನಿ ಮ್ಯಾಟ್ರಿಕ್ ಪಾಸು ಮಾಡಿದಾಗ ಆಕೆ ಕಾಲೇಜು ಸೇರಬಾರದೆನ್ನುವುದಕ್ಕೆ ತನ್ನ ಅಸ್ವಾಸ್ಥ್ಯವೂ ಒಂದು ಅಡ್ಡಿ ಎಂದೂ ಹೇಳಿದ್ದಳು. ಹೀಗಾಗಿ ಸರೋಜಿನಿ ಊರಲ್ಲಿಯೇ ಕೆಲಕಾಲ ಉಳಿಯಬೇಕಾಗಿದ್ದರಿಂದ ಆ ವರ್ಷ ಗೌಡ ಆಗಾಗ ಊರಿಗೆ ಬಂದು ಸರೋಜಿನಿಯನ್ನು ಕಾಣುವುದಕ್ಕಾಗಿ ತಾಯಿಯ ಕೂಡ ಮಾತುಕತೆ ನಡೆಸುತ್ತಿದ್ದ.

ಗೌಡನ ಆತುರ ರಂಗಸಾನಿಗೊಂದು ಉತ್ತೇಜನವಾಗುತ್ತಿತ್ತು. ಸರೋಜಿನಿಯನ್ನು ಗೌಡನ ಆಶ್ರಯಕ್ಕೊಪ್ಪಿಸಿಬಿಟ್ಟರೆ ತನ್ನ ಜೀವಮಾನದ ಪ್ರಶ್ನೆ ಬಗೆ ಹರಿಯುತ್ತದಲ್ಲದೆ ಸರೋಜಿನಿಯೂ ಸುಖವಾಗಿರಲು ಅನುಕೂಲವಾಗುವುದೆಂಬ ವಿಚಾರದಲ್ಲಿ ಇನ್ನೇನನ್ನೂ ಯೋಚಿಸುತ್ತಿರಲಿಲ್ಲ. ವೇಶ್ಯಾವೃತ್ತಿಗೆ ಒಪ್ಪದೆ ತಾನಾದರೂ ತನ್ನ ಗೆಳತಿಯರಂತೆ ಮದುವೆಯಾಗಿ ಇರುತ್ತೇನೆಂದು ಸರೋಜಿನಿ ಸೂಚಿಸಿದಾಗಲೆಲ್ಲ ತಾಯಿ-ಮಗಳಿಗೆ ವಾಗ್ಯುದ್ಧ ನಡೆಯುತ್ತಿತ್ತು. ಮಾತಿನಲ್ಲಿ ತಾಯಿಯನ್ನು ಸೋಲಿಸುವುದು ಸರೋಜಿನಿಗೆ ಸಾಧ್ಯವಿರಲಿಲ್ಲ. ವಿದ್ಯಾಭ್ಯಾಸಕ್ಕಾಗಿ ಕಾಲೇಜು ಸೇರಿದರೆ ಈ ಕಲುಷಿತವಾದ ವಾತಾವರಣದಿಂದಾದರೂ ದೂರವಾಗಿರಬಹುದೆಂದು ಭಾವಿಸಿ ಸರೋಜಿನಿ ಕೊನೆಗೊಮ್ಮೆ ಕಾಲೇಜಿಗೆ ಕಳಿಸುವ ಮಟ್ಟಿಗೆ ತಾಯಿಯನ್ನು ಒಪ್ಪಿಸಿದ್ದಳು. ಕಾಲೇಜಿಗೆ ಹೋದರೂ ಅದೇ ಊರಲ್ಲಿ ಗೌಡನಿದ್ದೇ ಇರುವನೆಂಬ ವಿಶ್ವಾಸದಲ್ಲಿಯೇ ತಾಯಿ ಒಪ್ಪಿದಂತಿತ್ತು.

ಸರೋಜಿನಿ ಕುಳಿತಲ್ಲಿದೆಂದ್ದು ತಾಯಿಯ ಪತ್ರವನ್ನು ಚರಚರನೆ ಚೂರು

ಮಾಡಿ ಎಸೆದಳು; ಆ ತುಂಡುಗಳು ಕೂಡ ಕೋಣೆಯಲ್ಲಿ ಬೇಡವೆಂದು ಅವನ್ನೆಲ್ಲ ಎತ್ತಿಕೊಂಡು ಹಿಂಬಾಗಿಲಿನಿಂದ ದೂರವಾಗಿ ಗಾಳಿಗುಂಟ ತೇಲಿಬಿಟ್ಟು ಹಾಸಿಗೆಯಲ್ಲಿ ಬಂದು ಬಿದ್ದುಕೊಂಡಳು. ಈ ರೀತಿಯಾಗಿ ತನಗಿಂತ ಎಷ್ಟೋ ಪಾಲು ಹಿರಿಯರಾಗಿದ್ದ ಇವರಿಬ್ಬರೂ—ತನ್ನ ತಾಯಿ ಮತ್ತು ಗೌಡ – ತನ್ನ ಬದುಕನ್ನು ಹಾಳುಮಾಡಬೇಕೆಂದು ಹಟಹಿಡಿದು ನಡೆಯುತ್ತಿದ್ದಾಗ ತನ್ನ ಪಣ ಎಷ್ಟು ದಿವಸದ್ದು ಎಂದು ನಿರಾಶೆಗೊಂಡಳು. ತಾನು ಗೌಡನಿಂದ ದುಡ್ಡು ತೆಗೆದುಕೊಳ್ಳುವಂತೆ ಮಾಡುವುದರಲ್ಲಿ ತಾಯಿಯ ಕಾರಸ್ಥಾನವಿತ್ತೆಂಬುದನ್ನು ತಿಳಿದ ಸರೋಜಿನಿ ಆಕೆಯ ಈ ವೃತ್ತಿಗೆ ರೋಸಿಹೋಗಿದ್ದಳು. ಆದರೆ ಹೀಗೆ ಪತ್ರ ಬರೆಯಿಸುವುದರಲ್ಲಿ ರಂಗಸಾನಿಯು ಎರಡು ಉದ್ದಿಶ್ಯಗಳನ್ನು ಸಾಧಿಸುತ್ತಿದ್ದಳು. ಒಂದೆಡೆ ಗೌಡನಿಗೆ ಉತ್ತೇಜನ ಕೊಟ್ಟಂತಾಗಿ ದುಡ್ಡಿನ ನೆಪದಿಂದಲಾದರೂ ಅವರಿಬ್ಬರೂ ಒಬ್ಬರನ್ನೊಬ್ಬರು ಕಾಣಲು ಅನುಕೂಲವಾಗಲಿ ಎಂಬ ವಿಚಾರ. ಇನ್ನೊಂದೆ ಅವರಿಬ್ಬರೂ ಸಮೀಪ ಬಾರದಿದ್ದರೂ ಈಗಿನ ಮಟ್ಟಿಗಂತೂ ಗೌಡನ ಕಡೆಯಿಂದ ನೂರಾರು ರೂಪಾಯಿ ದುಡ್ಡನ್ನು ಸೆಳೆಯಲು ಅನುವಾಯಿತು ಎಂಬ ವೇಶ್ಯಾವೃತ್ತಿಯ ವ್ಯಾವಹಾರಿಕ ವಿಚಾರ. ಹೀಗೆಂದುಕೊಂಡು ಸರೋಜಿನಿ ದುಡ್ಡು ಬೇಡಿದಾಗಲೆಲ್ಲ ಗೋವಿಂದಗೌಡನ ಕಡೆಯಿಂದ ಪಡೆಯಬಹುದೆಂಬ ಉತ್ತರವೇ ಬರುತ್ತಿತ್ತು. ಈಗ ನಡೆದದ್ದೂ ಅಷ್ಟೇ.

ಆದರೆ ಏನಾದರೂ ಈ ಸಲ ಮಾತ್ರ ದುಡ್ಡು ಬೇಡಲೆಂದು ಗೌಡನೆಡೆಗೆ ಹೋಗತಕ್ಕದ್ದಲ್ಲ ಎಂದು ಸರೋಜಿನಿ ನಿರ್ಧಾರ ಮಾಡಿದಳು. ಕಳಿಸುವ ಹಾಗಿದ್ದರೆ ನೀನೇ ಕಳಿಸು ಎಂದು ತಾಯಿಗೆ ಖಂಡಿತವಾಗಿ ಬರೆಯುವುದೆಂದುಕೊಂಡಳು. ಇಲ್ಲವಾದರೆ ಕಾಲೇಜುಬಿಟ್ಟು ಬರಬೇಕಾಗುವುದೆಂದು ತಿಳಿಸಬೇಕೆಂದಳು ; ಆದರೆ ಅದರ ಭೆದರಿಕೆ ತಾಯಿಗೇನು ? ಆಕೆಯ ದೃಷ್ಟಿಯಿಂದ ಕಾಲೇಜು ನಿಂತರೆ ಒಳ್ಳೆಯದೆ ಎಂದಾಗ ಆ ಬೆದರಿಕೆ ಏನೂ ಪ್ರಯೋಜನವಲ್ಲವೆಂದು ನಿರಾಶೆಗೊಂಡಳು. ಅಲ್ಲದೆ ಬಿಟ್ಟುಹೋಗಬೇಕಾದರೂ ಇಲ್ಲಿ ಕೊಡಬೇಕಾದವರ ಸಾಲ ತೀರಿಸದ ಹೊರತು ಬಿಡುಗಡೆ ಹೇಗೆ ಸಾಧ್ಯ ಎಂದು ಸಂಕಟಪಟ್ಟಳು. ಏನಾದರೂ ಇನ್ನೂ ಹದಿನೈದು ಇಪ್ಪತ್ತು ದಿವಸದ ಅವಧಿ ಇದೆ. ಅಷ್ಟರಲ್ಲಿ ತಾಯಿಯಿಂದ ಉತ್ತರ ಬರಬಹುದು. ಅಥವಾ ಇನ್ನೂ ಏನಾದರೂ ಮಾಡಬಹುದು ಎಂದು ಸಮಾಧಾನ ತಂದುಕೊಂಡಳು. ಈ ಸಮಾಧಾನವೇ ಮಾಧವನ ಮೂರ್ತಿಯಾಗಿ ಕಣ್ಣೆದುರು ನಿಂತಿತು. ಹೌದು. ತನಗೆ ಬೇಕಾದ ದುಡ್ಡನ್ನು ಮಾಧವನಿಗೆ ಬೇಡಿ ತೆಗೆದುಕೊಂಡರೆ ? ಆದರೆ

ಇತ್ತೀಚಿನ ಮೂರು ನಾಲ್ಕು ತಿಂಗಳುಗಳಲ್ಲಿಯೇ ಜೆಳೆಯುತ್ತಿದ್ದ ಪರಿಚಯವನ್ನು ಹೀಗೆ ದುಡ್ಡಿನ ಬೇಡಿಕೆಗೆ ಗುರಿಮಾಡುವುದೆ? ಎಂಥ ಅವಮಾನ, ದುಡ್ಡು ಬೇಡುವುದೆಂದರೆ! ಅಲ್ಲದೆ ಆತನ ಮನೆತನದ ಪರಿಸ್ಥಿತಿಯನ್ನು ಪೂರ್ತಿಯಾಗಿ ತಿಳಿಯದ ತಾನು ಹಠಾತ್ತಾಗಿ ನೂರಾರೂ ರೂಪಾಯಿ ಬೇಡಿ ಆತನನ್ನು ತೊಂದರೆಗೀಡುಮಾಡಿದರೆ ಹೇಗೆ? ಬೇಡಿದರೆ ಆತ ಖಂಡಿತವಾಗಿಯೂ ಕೊಡುವನೆಂಬ ಭರವಸೆ ಉಳಿದ ಯೋಚನೆಗಳನ್ನು ಬದಿಗಿರಿಸಿ ಆಗಿನ ಮಟ್ಟಿಗೆ ಸರೋಜಿನಿಗೆ ಬೇಕಾದ ಸಮಾಧಾನವನ್ನು ತಂದುಕೊಟ್ಟಿತು.

ಸರೋಜಿನಿ ಹಾಸಿಗೆಯಲ್ಲಿ ಬಿದ್ದುಕೊಂಡು ಯೋಚನೆ ಮಾಡುತ್ತಲೇ ಇದ್ದಳು. ಆಚೆಯ ಕೋಣೆಯಲ್ಲಿ ಇನ್ನೇನ್ನೋ ಕೋಲಾಹಲ ನಡೆದೇ ಇತ್ತು. ಒಂದು ಕ್ಷಣ ಆವರೆಲ್ಲರ ಬಗೆಯಲ್ಲಿ ಅಸೂಯೆಯೆನಿಸಿತು. ಎಷ್ಟು ಸ್ವಚ್ಛಂದವಾಗಿ ಯಾವ ಚಿಂತೆಯ ಸೋಂಕೂ ಇಲ್ಲದೆ ಇವರೆಲ್ಲರೂ ಸುಖವಾಗಿ ಕಾಲ ಕಳೆಯುತ್ತಿದ್ದಾರೆ. ತಾನು ಮಾತ್ರ ಯೋಚನೆಯ ಭಾರದ ಬುಡಕ್ಕೆ ಸಿಕ್ಕು ಒದ್ದಾಡುತ್ತಿದ್ದೇನೆ. ಈ ಎಲ್ಲ ಪರಿತಾಪ ತನ್ನ ಪಾಲಿಗೇ ಯಾಕೆ ಬರಬೇಕು? ಎಂದು ಕೇಳಿಕೊಂಡಳು. ಉತ್ತರ ಸಿಕ್ಕದೆ ತೊಳಲಾಡುತ್ತಿದ್ದಳು. ಯೋಚನೆ ಮಾಡಿದ ಹಾಗೆಲ್ಲ ತಾಯಿಯ ಮನೋವೃತ್ತಿಯ ಬಗ್ಗೆ ರೊಚ್ಚು ಒಡಮೂಡುತ್ತಿತ್ತು. ಮರುಕ್ಷಣ ಕನಿಕರವೂ ಅನ್ನಿಸುತ್ತಿತ್ತು. ಆಕೆಯ ಸಂಕುಚಿತ ವೃತ್ತಿ ತಪ್ಪಾದದ್ದು ಸರಿ. ಯಾವ ವಿದ್ಯಾಭ್ಯಾಸವಿಲ್ಲದೆ ಒಂದು ಪರಂಪರೆಯಲ್ಲಿ ಬೆಳೆದವಳಲ್ಲಿ ಬೇರೆಯಾದ ವಿಚಾರಗಳಿರುವುದೇ ಸಾಧ್ಯವಿರಲಿಲ್ಲ. ಯಾರದಾದರೂ ತಪ್ಪಿದ್ದರೆ ಅದು ಆ ಪರಂಪರೆಯದು. ಆ ಪರಂಪರೆಯನ್ನು ಬೆಳಸಿದವರಾರು? ಉಳಿಸಬೇಕೆನ್ನುವವರು ಯಾರು? ಸಮಾಜದಲ್ಲಿ ಸುಸಂಸ್ಕೃತರೂ, ಬುದ್ಧಿವಂತರೂ, ಗಣ್ಯ ನಾಗರಿಕರೂ ಎಂದೆನಿಸಿಕೊಳ್ಳುತ್ತಿದ್ದ ಗೋವಿಂದಗೌಡನಂಥ ವ್ಯಕ್ತಿಗಳೇ ಅಲ್ಲವೇ? ಒಂದು ಕ್ಷಣ ಸರೋಜಿನಿ ಇಡೀ ಪುರುಷ ವರ್ಗವನ್ನೇ ಆಪಾದನೆಗೀಡುಮಾಡಿ ಶಪಿಸಿದಳು. ಆದರೆ ಎಲ್ಲ ಪುರುಷರೂ ಹಾಗೆಯೇ ಇರುತ್ತಾರೆಯೇ? ತಟ್ಟನೆ ಮಾಧವನ ಮೂರ್ತಿ ಕಣ್ಣೆದುರು ನಿಂತಿತು. ಮಾಧವ! ಮನೋಹರನಾದ ಮಾಧವ! ಮನಸ್ಸು ಆಸೆಗುದುರೆಯನ್ನೇರಿ ಎಲ್ಲಿಯೋ ದೂರದೂರ ಓಡಿತು ಮಾಧವ ತನ್ನ ಉದ್ಧಾರವನ್ನು ಯಾಕೆ ಮಾಡಬಾರದು? ....ಯಾಕೆ ಮಾಡಬಾರದು? ಆದರೆ ಅದಕ್ಕೆ ಎಷ್ಟು ತೊಡರು-ತೊಂದರೆ? ತನ್ನ ಪೂರ್ವೇತಿಹಾಸ ಮಾಧವನಿಗೆ ತಿಳಿದಿದೆಯೋ ಇಲ್ಲವೊ? ಅದು ತಿಳಿದಮೇಲೆ ಆತ ದೂರವಾದರೆ ತನ್ನ ಬದುಕು ಎಷ್ಟು ಬರಡು? ಆದರೆ ಮಾಧವನಿಂದ

ಅಷ್ಟನ್ನು ಅಪೇಕ್ಷಿಸಬಹುದೆ? ಅಪೇಕ್ಷಿಸಲು ತನಗೆ ಯಾವ ಅಧಿಕಾರ? ಯೋಚಿಸಿದ ಹಾಗೆ ಸರೋಜಿನಿಗೆ ತನ್ನ ಬದುಕಿನ ಅಸಹಾಯಕತೆಯ ಬಗ್ಗೆ ಕನಿಕರವೆನಿಸತೊಡಗಿತು. ಸಮಾಜದಲ್ಲಿಯ ಸ್ಥಾನಮಾನಗಳಿಗೆ ಯಾವ ಬೆಲೆ? ವ್ಯಕ್ತಿಯ ಹಿರಿಮೆಯೆ ಮುಖ್ಯ, ಎಂದು ವಾದಿಸುವುದು ಮೂರ್ಖತನವೆನಿಸಿತು ಸರೋಜಿನಿಗೆ ವ್ಯಕ್ತಿ ಹಿರಿಯದಾದರೆ ಸಮಾಜದ ಶಕ್ತಿಯೂ ತಗ್ಗಬಹುದು. ಆದರೆ ಸಮಾಜವನ್ನೇ ಬಗ್ಗಿಸಿ, ಮೀರಿ ನಿಲ್ಲುವ ಯೋಗ್ಯತೆ ತನ್ನಲ್ಲಿದೆಯೋ, ಆ ಧೈರ್ಯಸ್ಥೈರ್ಯಗಳು ತನ್ನಲ್ಲಿವೆಯೋ ಎಂದು ಸಂಶಯಗೊಂಡು ಸಂಕಟ ಪಟ್ಟಳು....

ಸಮಾಜ ತನ್ನನ್ನು ನೋಡುವ ದೃಷ್ಟಿಯೆಂದರೆ ಗೋವಿಂದಗೌಡ ತನ್ನನ್ನು ನೋಡುವ ದೃಷ್ಟಿಯಲ್ಲದೆ ಬೇರೊಂದಲ್ಲ. "ಎಲ್ಲರಂತೆ ಬದುಕಬೇಕೆಂದಿರುವ ನನ್ನನ್ನು ಹಾಗೆ ಬದುಕಗೊಡಬಾರದೆಂದು ಯಾಕೆ ಯತ್ನಿಸುತ್ತಿದ್ದೀಯ?" ಎಂದು ಆತನನ್ನು—ಸಮಾಜವನ್ನು—ಕೇಳುವುದು ಹೇಗೆ? ಕೇಳಿದರೆ ಆತನ ಉತ್ತರವೇನು? ಹೀಗೆ ಸರೋಜಿನಿ ಹತ್ತು ಪ್ರಶ್ನೆಗಳನ್ನು ಕೇಳುವಂತಾದವಳೇ ಹೊರತು ಎಷ್ಟು ಯೋಚಿಸಿದರೂ ಆ ಪ್ರಶ್ನೆಗಳಿಗೆ ಉತ್ತರ ಹೇಳಲು ಸಮರ್ಥಳಾಗಲಿಲ್ಲ. ಆದರೆ ಈ ಬಗೆಯ ಯೋಚನೆಗಳಲ್ಲಿ ತೊಡಗಿದಾಗಲೆಲ್ಲವೂ ಸರೋಜಿನಿಯ ಹೃದಯ ಒಂದು ನಿರ್ಧಾರವನ್ನು ಕಟ್ಟುತ್ತಿತ್ತು. ಅದೆಂದರೆ ಎಂಥ ಸಂಕಟ ಬಂದರೂ ತಾಯಿಯ ಮಾತಿಗೆ ಸರಿಯಾಗಿ ವೇಶ್ಯಾವೃತ್ತಿಯ ಕೊಳಚೆಯಲ್ಲಿ ಬಿದ್ದು ಕೊಳೆಯುವ ಹಾಗಿಲ್ಲ—ಎಂದು ಇರುಳು ಕಂಡ ಬಾವಿಯಲ್ಲಿ ಹಗಲು ಬೀಳುವುದುಂಟೆ? ಹಾಗೆ ಮಾಡುವುದು ತನ್ನ ಬುದ್ಧಿಗೆ, ವಿವೇಕಕ್ಕೆ ಸ್ತ್ರೀತ್ವಕ್ಕೆ ಖಂಡಿತವಾದ ಅವಮಾನ ಎಂದುಕೊಳ್ಳುತ್ತಿದ್ದಳು.

"ನಿನ್ನ ಬುದ್ಧಿಗೆ ಅವಮಾನವಾಗಬಹುದು. ಆದರೆ ನಿನ್ನ ಸ್ತ್ರೀತ್ವಕ್ಕೆ ಅವಮಾನವಲ್ಲ! ಎಂದು ಒಂದು ದನಿ ಹೇಳಿತು. ದನಿ ಗೌಡನ ದನಿಯಾಗಿತ್ತು.

"ಅವಮಾನವಲ್ಲದೆ ಏನು?"

"ನೀನು ಮನೆತನದಲ್ಲಿ ಬೆಳೆದ ಹೆಣ್ಣಾಗಿದ್ದರೆ ಹಾಗೆ ಹೇಳಬಹುದಿತ್ತು!"

"ನಾನು ಮನೆತನದಲ್ಲಿ ಬೆಳೆದಿಲ್ಲವೆಂದಮಾತ್ರಕ್ಕೆ ನಾನು ಸ್ತ್ರೀಯಲ್ಲವೆ?"

"ನೀನು ಸ್ತ್ರೀಯಾಗಿರಬಹುದು. ಆದರೆ ನೀನು ವೇಶ್ಯೆ! ಮೂರು ನಾಲ್ಕು ತಲೆಮಾರುಗಳಿಂದ ನಿನ್ನ ನಾಳಗಳಲ್ಲಿ ವೇಶ್ಯೆಯ ರಕ್ತ ಹರಿಯುತ್ತಿದೆ."

"ಆದರದೇನು?"

"ಆದರದೇನೆನ್ನುವಿಯಾ? ಆ ರಕ್ತದ ಪ್ರವಾಹವನ್ನು, ಗುಣದೋಷಗಳನ್ನು

ನೀನು ನಿನ್ನ ಬುದ್ಧಿವಂತಿಕೆಯಿಂದ ಬದಲಾಯಿಸಲಾರೆ ! "

"ಹಾಗಾದರೆ ನಾನು ವೇಶ್ಯೆಗೆ ಹುಟ್ಟಿದವಳೆಂದು ವೇಶ್ಯೆಯಾಗಿಯೇ ಉಳಿಯಬೇಕೆ ? "

"ಹೌದು ! "

"ನ್ಯಾಯವೇ ಅದು ? "

"ನ್ಯಾಯವಲ್ಲದಿರಬಹುದು. ಅದು ಸ್ವಾಭಾವಿಕ. ಅನಿವಾರ್ಯ !"

"ಸ್ವಾಭಾವಿಕವೂ ಅಲ್ಲ, ಅನಿವಾರ್ಯವೂ ಅಲ್ಲ ! "

"ಹಾಗೆ ಹೇಳುವುದು ನಿನ್ನ ಬುದ್ಧಿವಂತಿಕೆಯ ಭ್ರಮೆ. "

"ಭ್ರಮೆಯಾಗಿರಬಹುದು—ನಿನ್ನ ದೃಷ್ಟಿಯಿಂದ. ಆ ಭ್ರಮೆಯನ್ನೇ ಕ್ರಮವನ್ನಾಗಿ ಮಾಡಬೇಕಾಗಿದೆ ನನಗೆ. "

"ಅದು ಹೇಗೆ ಸಾಧ್ಯ ? "

"ಯಾಕೆ ಸಾಧ್ಯವಿಲ್ಲ ? ನನ್ನ ತಾಯಿಯಿಂದ ನಾನು ದೂರವಿರಬೇಕಾದರೂ ಸರಿ. ಇದಕ್ಕಾಗಿ ಆಕೆ ಪ್ರಾಣ ಕೊಟ್ಟರೂ ಸರಿ. ನಾನು ಆ ವೃತ್ತಿಯನ್ನು ಹಿಡಿಯಲು ಸಾಧ್ಯವಿಲ್ಲ. "

"ಈಗ ಹಾಗೆ ಅನಿಸಬಹುದು. ಇಂದಿಲ್ಲ ನಾಳೆ ಬಿಟ್ಟ ದಾರಿಯನ್ನೇ ಬಳಸಬೇಕಾಗಬಹುದು! "

"ಎಂದಿಗೂ ಅಸಾಧ್ಯ ! "

"ನೋಡುವಿಯಂತೆ. ಬೇರೆ ಮಾರ್ಗವೇ ಇಲ್ಲ ! "

"ಬೇರೆ ಮಾರ್ಗವಿಲ್ಲವೆ ? ಯಾಕೆ ಇಲ್ಲ ? ಎಲ್ಲರಂತೆ ನಾನು ಮದುವೆಮಾಡಿಕೊಂಡು ಸಮಾಜದಲ್ಲಿ ಉಳಿದ ಸ್ತ್ರೀಯರಂತೆ ಇರಲು ಮಾರ್ಗವಿಲ್ಲವೆ ? "

"ಮಾರ್ಗವಿರಬಹುದು. ಆದರೆ ನಿನಗೆ ಅಲ್ಲಿ ಪ್ರವೇಶವಿಲ್ಲ ! "

"ಯಾಕೆ ಇರಬಾರದು ?"

"ಆಗಲೇ ಹೇಳಿದೆ—ನೀನು ವೇಶ್ಯೆಯೆಂದು. ನಿನ್ನಲ್ಲಿಯ ರಕ್ತ ವೇಶ್ಯೆಯದೆಂದು. ಇದನ್ನು ಬಲ್ಲ ಯಾವ ಪುರುಷ ನಿನ್ನನ್ನು ಮದುವೆಗೆ ಒಪ್ಪಬಹುದು?"

ಸರೋಜಿನಿಗೆ ಉತ್ತರವಿಲ್ಲದಾಯಿತು. "ಹೌದು. ಯಾರು ಒಪ್ಪಬಹುದು?" ಎಂದುಕೊಂಡಳು. ಮನಸ್ಸಿನಲ್ಲಿ ಕಡೆದುಬಂದ ವಿಚಾರಕ್ಕಿಂತ ಸಮಾಜದಲ್ಲಿ ನಡೆದುಬಂದ ವಿಚಾರಕ್ಕೆಯೇ ಪ್ರಾಶಸ್ತ್ಯವಿದ್ದಾಗ ತನ್ನಂಥವಳನ್ನು ಒಪ್ಪಿ ಮದುವೆಯಾಗುವ ವಿಚಾರಸ್ವಾತಂತ್ರ್ಯವುಳ್ಳವನನ್ನು ಬೇಡುವುದೆಂದರೆ ಹುಲಿಯ ಹಾಲನ್ನು ಬೇಡಿ ಹಂಬಲಿಸಿದಂತೆಯೇ ಅಲ್ಲವೆ ಎಂದುಕೊಂಡಳು.

ಆರ್ತಸ್ವರದಿಂದ ಕೇಳಿದಳು :

"ಇದು ಬುದ್ಧಿಯ ಯುಗ. ಬುದ್ಧಿಯ ಯುಗದಲ್ಲಿಯೂ ಕೂಡ ಇಂಥ ಅನ್ಯಾಯ ನಡೆಯಬಹುದೆ ?"

"ಹೌದು, ಇದು ಬುದ್ಧಿಯ ಯುಗವೆಂದೇ ಇಂಥ ಅನ್ಯಾಯ ನಡೆಯುತ್ತಿದೆ. ಅನ್ಯಾಯವನ್ನು ಅಡಗಿಸುವುದಕ್ಕಿಂತ ಹೆಚ್ಚಾಗಿ ಅದನ್ನು ಸಲೀಲವಾಗಿ ಹೇಗೆ ಅರಗಿಸಿಕೊಳ್ಳಬಹುದು ಎಂಬ ಯೋಚನೆಯಲ್ಲಿಯೇ ಪ್ರಪಂಚದ ಬುದ್ಧಿಯ ಉಪಯೋಗವಾಗುತ್ತಿದೆ. ಅಂದಮೇಲೆ ?"

"ಸಮಾಜದ ಪ್ರಗತಿಯ ಮಾತುಗಳನ್ನು ಹೇಳುತ್ತಾರಲ್ಲ ?"

"ಹೌದು ಹೇಳುವುದು ಪ್ರಗತಿಯ ಮಾತು !"

"ಹಾಗಾದರೆ ನನ್ನ ಗತಿ ಏನು ?"

"ಯೋಚನೆ ಮಾಡಿದರೆ ಗತಿಗೇಡಾಗುವಿ ! ಬಂದ ದಾರಿಗೆ ಸುಂಕವಿಲ್ಲ, ತಿಳಿಯಿತೆ ?"

"ಸುಂಕ ಕೊಟ್ಟರೂ ಅಡ್ಡಿಯಿಲ್ಲ. ಬಂದ ದಾರಿಯಿಂದ ಹೋಗುವಂತಿಲ್ಲ !"

"ಯಾತಕ್ಕಾಗಿ ಈ ಹಟ ?"

"ನನಗೆ ಸುಖವಾಗಿರಬೇಕಾಗಿದೆ."

"ಆ ಸುಖದ ಸುಖವನ್ನೇ ಕೊಡಬೇಕಾದೀತು !"

"ನನಗೆ ಮನುಷ್ಯಳಂತೆ ಬಾಳಬೇಕಾಗಿದೆ !"

"ಮನುಷ್ಯಳಂತೆ ಬಾಳಬೇಕಾದರೆ ಮೊದಲು ನೀನು ದೇವತೆಯಾಗಬೇಕು !"

"ಸಾಧನೆಯಿಂದ ಅದೂ ಸಾಧ್ಯ !"

"ಆಗಬಹುದು, ಆದರೆ ಸಮಾಜಕ್ಕೆ ವಿಶ್ವಾಸವಿಲ್ಲ."

"ಇಷ್ಟಕ್ಕೆ ಆಸ್ಪದವಿಲ್ಲದ ಸಮಾಜಕ್ಕೆ ಬೆಂಕಿಬೀಳಬೇಕು !"

"ಅದು ನಿನ್ನ ಇಚ್ಛೆ. ಆದರೆ ನಿನ್ನ ಇಚ್ಛೆಗೆ ಸಮಾಜವೇ ನಿನಗೆ ಬೆಂಕಿಯಿಡಬಹುದು !"

"ಇಟ್ಟರೂ ಅಡ್ಡಿಯಿಲ್ಲ. ಪ್ರಯತ್ನಮಾಡಿದ ಶ್ರೇಯಸ್ಸಾದರೂ ದೊರಕಬಹುದು !"

"ಆ ಬರಡುಗೆಲುವು ಎಂದಿಗೂ ಸಿಗಬಹುದು. ಆದರೆ ನಿನಗೆ ಬೇಕಾದದ್ದೇನು?"

ಎಂದು ಸಮಾಜ ಹೀಯಾಳಿಸಿ ಹಿಂದಕ್ಕೆ ಸರಿಯಿತು. ಸರೋಜಿನಿ ಮುಂದಕ್ಕೆ ಸರಿದು ಎದ್ದು ತನ್ನ ಕಾಟನಮೇಲೆ ಕುಳಿತಳು. ವಿಚಾರಗಳಿಂದ ತಲೆ ಕಾಯ್ದುಹೋಗಿತ್ತು. ಹೊರಗೆ ದಿನದ ಕಾವು ಅಡಗುವುದರಲ್ಲಿತ್ತು. ಬೇಸಗೆಯ

ಕಾವು ಸಂಜೆಯ ಸುಳಿಗಾಳಿಯನ್ನೇರಿ ದೂರ ದೂರ ಹೊರಟಿತ್ತು. ಕೋಣೆಯ ಬಾಗಿಲಲ್ಲಿ ಬಂದು ನಿಂತು ಸುತ್ತಲೂ ನೋಡಿದಳು. ಸಂಜೆ ಸೊಗಸಾಗಿತ್ತು. ಎತ್ತರದಲ್ಲಿ ಮೇಲೆ ಭವ್ಯವಾಗಿ ನಿಂತಿದ್ದ ಕಾಲೇಜಿನ ಕಟ್ಟಡವು ಸಂಜೆಯ ಹೊಂಬೆಳಕಿನಲ್ಲಿ ಅದ್ವಿತೀಯವಾಗಿ ಕಾಣುತಿತ್ತು. ಸೂರ್ಯಾಸ್ತವಾದರೇನು, ಸೂರ್ಯೋದಯವಾದರೇನು, ಮಳೆ ಸುರಿದರೇನು, ಚಳಿ ಕಡಿದರೇನು— ನಾನು ಹೀಗೆಯೇ ಎತ್ತರದಲ್ಲಿ ತಲೆಬಾಗದೆ ನಿಲ್ಲುವವ ಎನ್ನುವ ಧ್ಯೇಯವಾದಿಯಂತೆ ಕಂಡಿತು ಕಟ್ಟಡ. ತನ್ನ ಬದುಕಿನಲ್ಲಿಯೂ ಅದೇ ಸ್ಥೈರ್ಯದಿಂದ ಸೆಟೆದು ನಿಲ್ಲಬೇಕಾಗಿದೆ ಎಂದುಕೊಂಡಳು.

ಆಚೆಯ ಕೋಣೆಯೊಳಗಿನಿಂದ ಗೆಳತಿಯರ ಗುಂಪು ಹೊರಬಿದ್ದಿತು. ಎಲ್ಲರೂ ಅದೇ ಪ್ರಸಾಧನವನ್ನು ಮುಗಿಸಿಬಂದವರಾದ್ದರಿಂದ ಎಲ್ಲರೂ ಹೊನ್ನಬೆಳಕಿನಲ್ಲಿ ಚೆಲುವೆಯರಾಗಿ ಕಾಣುತ್ತಿದ್ದರು. ಜೀವನದ ಆನಂದ ಚಿಂತೆಯೊಳಗಾಗಿರದ ಅವರ ಮುಖಗಳಲ್ಲಿ ಚಿಮ್ಮುತ್ತಿತ್ತು. ಸರೋಜಿನಿ ಕೇಳಿದಳು :

"ಹೋದವರೆಲ್ಲರೂ ಆ ಕಡೆಗೇ ಹೋದಿರಿ."

"ಏನು ಮಾಡುವುದು ಮತ್ತೆ? ಮಾತಿಗೊಂದು ತರಹ ಮೂತಿ ಮಾಡಿದರೆ?" ಎಂದು ಮಂಜುಳೆ ಮೊದಲಿಸಿದಳು.

"ಏನು ಮಾಡಿದಿರಿ ಇಷ್ಟು ಹೊತ್ತು ?"

"ಮಾಡುವುದೇನು ? ಮಂಜುಳೆಯ ಕೋಣೆಯಲ್ಲಿ ಚಹವಾಯಿತು— ಸುಮತಿಯ ಕೋಣೆಯಲ್ಲಿ ಮತ್ತೆ ಹರಟೆಯಾಯಿತು...." ಎಂದು ವಿಮಲೆ ವರದಿಯನ್ನೊಪ್ಪಿಸಿದಳು.

"ಸರೋಜಿನಿ, ಒಂದು ಹೊಸ ಸಮಾಚಾರ__?

"ಸಾಕು ತಗಿಯೇ, ಸುಮ್ಮನಿರು...." ಎಂದು ಸುಮತಿ ಮಂಜುಳೆಯನ್ನು ತಡೆಯಹೋದಳು.

"ಏನೆ ?"

"ಸುಮತಿ ನಾಳೆ ಊರಿಗೆ ಹೊರಟಿದ್ದಾಳೆ !"

"ಅದೇನು ?"

"ಅವರ ತಂದೆಯ ಪತ್ರ ಬಂದಿದೆ, ಕೂಡಲೇ ಹೊರಟು ಬಾ ಎಂದು."

"ಪರೀಕ್ಷೆ ಬಂದುಬಿಟ್ಟದೆಯಲ್ಲ ಮತ್ತೆ ?"

"ಪರೀಕ್ಷೆಗಾಗಿಯೇ ಬಾ ಎಂದು ಬರೆದಿದ್ದಾರೆ !" ಎಂದು ಮಂಜುಳೆ ನಕ್ಕು ಹೇಳಿದಳು.

"ಸಾಕು ಬಿಡು ತಾಯಿ, ನಿನ್ನ ಚೇಷ್ಟೆ!" ಎಂದಳು ಸುಮತಿ.

"ನನಗೆ ಸಾಕಾಗಿದೆ ಬಿಡು. ಆದರೆ ನಿನಗೆ ಬೇಕಾಗಿದೆ. ಅಂತೇ ಹೊರಟಿದ್ದೀಯ."

"ಏನೇ! ಏನು ಸಮಾಚಾರ?" ಎಂದು ಸರೋಜಿನಿಯ ಕುತೂಹಲ.

"ಏನೇನು? ಇಷ್ಟೂ ತಿಳಿಯಬಾರದೆ? ನಾಡಿದ್ದು ಊರಲ್ಲಿ ಈಕೆಯ ಪರೀಕ್ಷೆ! ಪರೀಕ್ಷೆ ತೆಗೆದುಕೊಳ್ಳುವವರು ಮುದುಕ ಡೆಪ್ಯುಟಿಗಳಲ್ಲ, ತರುಣ ಕನ್ಯಾರ್ಥಿಗಳು...."

"ನಾನು ಹೋಗುವುದೇ ಇಲ್ಲ" ಎಂದು ಸುಮತಿ ಸೋಗಿನ ಸೆಡವನ್ನು ಸೂಸಿದಳು.

"ನೀನು ಹೋಗದಿದ್ದರೆ ಅವರೇ ಇಲ್ಲಿಗೆ ಬರಲಿ, ನಮಗೇನು? ನಮಗಾದರೂ ಈ ಪರೀಕ್ಷೆಯ ರೀತಿರಿವಾಜುಗಳಾದರೂ ಗೊತ್ತಾಗ್ತದಾವು!" ಎಂದು ವಿಮಲೆ ದನಿಗೂಡಿಸಿದಳು.

"ನಾನೇ ಬೇಡವೆಂದರೆ ಯಾತಕ್ಕೆ ಬರುತ್ತಾರೆ?" ಎಂದು ಸುಮತಿಯ ಸವಾಲು.

"ದೊಡ್ಡಮಾತು, ಪತ್ರ ಬಂದ ಕೂಡಲೆ ಪತ್ತಲ ಕೊಳ್ಳಲೆಂದು ಪೇಟೆಯಲ್ಲಿ ಹೊರಟಿದ್ದೀಯ, ಮೇಲೆ ಬೇಡವೆಂದು ಹೇಳುತ್ತಾಳಂತೆ...." ಎಂದು ಮಂಜುಳೆ.

"ಅಂತೂ ಈ ಪರೀಕ್ಷೆ ಪಾಸಾದರೆ ಕಾಲೇಜಿನ ಪರೀಕ್ಷೆಗೆ ಸೊನ್ನೆಯೆ ಎನ್ನು...."

"ನಿನಗೇನು ಹುಚ್ಚೋ, ಸರೋಜಿನಿ? ಇದು ಮಹಾಪರೀಕ್ಷೆ. ಇದರ ಮುಂದೆ ಯಾವ ಪರೀಕ್ಷೆಯೂ ಇಲ್ಲ! ಈ ಪರೀಕ್ಷೆ ಮುಗಿದರೆ ಮುಂದೆ ಯಾವ ಪರೀಕ್ಷೆಯ ಅಗತ್ಯವೂ ಇಲ್ಲ, ಅನುಕೂಲವೂ ಇಲ್ಲ" ಎಂದು ವಿಮಲೆಯ ಸಮಾರೋಪ. ಈ ಮಾತಿನ ಪ್ರವಾಹವನ್ನು ಹೇಗಾದರೂ ಮಾಡಿ ತಡೆಯಬೇಕೆಂದಿದ್ದ ಸುಮತಿ ನಡುವೆಯೇ ಬಂದು ಸರೋಜಿನಿಯನ್ನು ಪೇಟೆಯಲ್ಲಿ ಬರಲೆಂದು ಕರೆದಳು.

"ನಾನೊಲ್ಲೆ. ಇಡೀದಿವಸ ಏನೂ ಓದಲಾಗಲಿಲ್ಲ. ಮತ್ತೆ ನಾಳೆಯೂ ಇಲ್ಲ."

"ಓಹೋ! ನಾಳೆ ನಿನ್ನ ಕಾರ್ಯಕ್ರಮ ಅಲ್ಲವೆ? ಅಂದಮೇಲೇನು ಕೇಳುವುದು?"

"ಹೇಳುವುದಿಲ್ಲ, ಕೇಳುವುದಿಲ್ಲ ನಾಳೆಯ ದಿನ ಒಂದು ಮುಗಿದುಹೋದರೆ."

"ಮುಗಿದುಹೋದರೆ ಮತ್ತೆ ಪ್ರಾರಂಭ. ಕಾರ್ಯಕ್ರಮ ಮುಗಿದರೆ

ಕಾರ್ಯದರ್ಶಿಯೆಲ್ಲಿ ಹೋದಾಸು? ಎಂದು ಮಂಜುಳೆ ಚೇಷ್ಟೆ ಮಾಡಿದಳು.

"ಹೋಗಿರಿ, ಹೋಗಿರಿ. ಕೆಲಸವಿಲ್ಲ ನಿಮಗೆ..."

"ಹೌದು, ಹೌದು. ನಮಗೆ ಕೆಲಸವಿಲ್ಲ. ಇದೆ ಎಂದು ಹೇಳುತ್ತಿದ್ದೇವೆಯೇ? ನಮಗೆ ಕೆಲಸವಿಲ್ಲ ಎಂದೇ ನಿನ್ನ ಕೆಲಸ ನಮ್ಮ ಕಣ್ಣಿಗೆ ಬಿದ್ದದ್ದು!"

"ಏನದು ನಿಮ್ಮ ಕಣ್ಣಿಗೆ ಬಿದ್ದದ್ದು!"

"ಅದೆಲ್ಲ ಈಗ ಯಾಕೆ? ಎಷ್ಟು ದಿನ ಬಚ್ಚಿಡಬಲ್ಲೆ. ಇದನ್ನೆಲ್ಲ?"

"ಹುಚ್ಚು ಹಿಡಿದಿದೆ ನಿಮಗೆಲ್ಲ!"

"ಹಿಡಿದವರಿಗೆ ಪ್ರಪಂಚವೇ ಹಾಗೆ ಕಾಣುತ್ತದೆ." ಸರೋಜಿನಿ ಗೆಳತಿಯರನ್ನು ಬಿಟ್ಟು ಕೋಣೆಯೊಳಕ್ಕೆ ಹಿಂತಿರುಗಿದಳು. ಮನಸ್ಸೆಲ್ಲವೂ ಸುಪುತ್ರಿಯ ಸೌಖ್ಯದ ಸುತ್ತ ತಿರುಗುತ್ತಿತ್ತು. ಆಕೆ ಸುಖವಾಗಿರಲೆಂದು ಬಯಸುತ್ತಿದ್ದ ತಂದೆಯೊಬ್ಬನಿದ್ದ ಆಕೆಗೆ. ಆದರೆ ತನಗೆ? ತನ್ನ ತಂದೆ ಯಾರು ಎಂಬುದನ್ನು ತಿಳಿಯದ ಸರೋಜಿನಿ ವಿಪರೀತ ವೇದನೆಗೊಳಗಾದಳು

## 2

ಮರುದಿನದ ಕಾರ್ಯಕ್ರಮಗಳ ಏರ್ಪಾಡುಗಳೆಲ್ಲವನ್ನೂ ನೋಡಿಕೊಂಡು ಮಾಧವನಿಗೆ ಮನೆಗೆ ತಲುಪಬೇಕಾದರೆ ರಾತ್ರಿ ಹತ್ತು ಗಂಟೆಯಾಗುತ್ತ ಬಂದಿತ್ತು. ಬೈಸಿಕಲ್ಲನ್ನು ಹಾಗೂಹೀಗೂ ನೂಕಿಕೊಂಡು ಹೋಗುತ್ತಿದ್ದ. ದೇಹ ದಣಿದಿತ್ತು. ಮನಸ್ಸು ಬೇಸರಗೊಂಡಿತ್ತು. ಮನೆಗೆ ಹೋಗುವುದೆಂದರೆ ಆತನಿಗೆ ಇನ್ನೂ ಬೇಸರ. ಇದಕ್ಕೆ ಕಾರಣವೆಂದರೆ ಆತನ ಪಾಲಿಗೆ ಆ ಮನೆ ಮನೆಯಾಗಿರಲಿಲ್ಲ. ತಾಯಿ ಅಲ್ಲಿ ಇರುತ್ತಿದ್ದಳೇನೋ ನಿಜ. ಆದರೆ ಆಕೆಗೆ ಯಾವ ಅಧಿಕಾರವೂ ಇರಲಿಲ್ಲ. ಎಲ್ಲ ಕಾರುಭಾರ ಚಿಕ್ಕಿ ಸೀತಾಬಾಯಿಯ ಮುಖಾಂತರವೇ ನಡೆಯಬೇಕು. ಹಾಗೆ ನೋಡಿದರೆ ಮನೆಗೆ ಯಜಮಾನನೆನ್ನಿಸಿಕೊಳ್ಳುತ್ತಿದ್ದ ಚಿಕ್ಕನದೂ ನಡೆಯುತ್ತಿರಲಿಲ್ಲ. ಆತನಿಗೆ ಮೂರನೆಯ ಮಡದಿಯಾಗಿ ಬಂದ ಸೀತಾಬಾಯಿ ಮಾತ್ರ ನಿಜವಾಗಿಯೂ ಮನೆಗೆ ಯಜಮಾನಿಯಾಗಿದ್ದಳಲ್ಲದೆ 'ಒಡತಿ'ಯೂ ಆಗಿದ್ದಳು. ಆಕೆಯ ಅಪ್ಪಣೆಯಿಲ್ಲದೆ ಮನೆಯಲ್ಲಿಯ ಯಾವ ಹುಲ್ಲುಕಡ್ಡಿಯೂ ಅಲುಗಾಡುವಂತಿರಲಿಲ್ಲವಾದ್ದರಿಂದ ಮಾಧವನಂತೆ ಆತನ ತಾಯಿ ರಾಧಕ್ಕನೂ ಬೇಸರಗೊಂಡಿದ್ದಳು. ಆದರೆ ಮಾಧವನಂತೆ ನಿರುಪಾಯವಾಗಿ ಕಾಲ ನೂಕಬೇಕಾಗಿತ್ತು. ಇಂದಿಲ್ಲ ನಾಳೆ ಮಗ ದೊಡ್ಡವನಾಗಿ ಬೇರೆಯಾಗಿ ಸಂಸಾರ ಹೂಡಿದಾಗಲಾದರೂ ಈ ಕಷ್ಟ ಕಳೆಯಬಹುದೆಂದು ಆಸೆ

ಯನ್ನು ಬೆಳೆಸುವುದರಲ್ಲಿಯೇ ದಿನ ಸವೆಯುತ್ತಿತ್ತು, ಸುತ್ತಲಿನ ಕಷ್ಟ ಮರೆಯುತ್ತಿತ್ತು. ತನ್ನ ತಾಯಿ ಮನೆಯಲ್ಲಿದ್ದರೂ ಮಾಧವನಿಗೆ ಯಾವ ಆಸೆಯೂ ಕಾಣುತ್ತಿರಲಿಲ್ಲವಾದ್ದರಿಂದ ಮನೆಗೆ ಬರಲು ಎಂದಿಗೂ ಬೇಸರವೆನಿಸುತ್ತಿತ್ತು. ಆದರೆ ಎರಡು ಹೊತ್ತಿನ ಹೊಟ್ಟೆಯ ಪಾಡಿಗಾದರೂ ಮನೆಯನ್ನು ಕಾಣಲೇ ಬೇಕಾಗುತ್ತಿತ್ತು. ಮನೆಗೆ ಬಂದಾಗಲೂ ಯಾರ ಜತೆಯಲ್ಲಿಯೂ ಮಾಧವ ಹೆಚ್ಚು ಮಾತನಾಡದೆ ತನ್ನ ಕೋಣೆಯಲ್ಲಿಯೇ ಇರುತ್ತಿದ್ದ. ಕಕ್ಕನಾಗಲಿ, ಕಕ್ಕಿಯಾಗಲಿ ತಾವಾಗಿಯೇ ಬಂದು ಮಾತನಾಡಿಸುವುದಂತೂ ದೂರವೇ!

ಬೈಸಿಕಲ್ಲನ್ನು ಹೊರಪಡಸಾಲೆಯಲ್ಲಿರಿಸಿ ಮಾಧವ ನೇರವಾಗಿ ತನ್ನ ಕೋಣೆಯ ಕಡೆಗೆ ತೆರಳಿದ. ಎಡತುದಿಯಲ್ಲಿಯ ಕೋಣೆಯಲ್ಲಿ ರಾಮಚಂದ್ರ ರಾಯರು ಯಾರ ಜತೆಯಲ್ಲಿಯೋ ಜೋರಾಗಿ ಮಾತನಾಡುತ್ತಿದ್ದರು. ಕಿವಿಗೆ ಬಿದ್ದ ಒಂದೆರಡು ಮಾತುಗಳ ಮೇಲಿಂದ ಯಾವುದೋ ತಕರಾರಿನ ವಿಷಯ ವಿದ್ದದ್ದು ತಿಳಿಯಿತು. ಕಕ್ಕನ ಸ್ವಭಾವವನ್ನು ಬಲ್ಲ ಮಾಧವನಿಗೆ ಇದರಲ್ಲಿ ಹೊಸದೇನೂ ಎನಿಸಲಿಲ್ಲವಾದ್ದರಿಂದ ಆ ಕಡೆಗೆ ಲಕ್ಷ್ಯಕೊಡಲಿಲ್ಲ. ಆದರೆ ಈ ಪುರಾಣ ನಡೆದದ್ದು ಯಾರೆದುರಿರಬಹುದು ಎಂದು ಕುತೂಹಲಪಡುತ್ತಿರುವಷ್ಟರಲ್ಲಿಯೇ ಬಾಗಿಲ ಹಿಂದೆ ನಿಂತಿದ್ದ ರಾಧಕ್ಕ ಮಗನನ್ನುದ್ದೇಶಿಸಿ ಹೇಳಿದರು, "ಭೀಮಣ್ಣ ಬಂದಿದ್ದಾನೆ" ಎಂದು. ಭೀಮಣ್ಣ ಮಾಧವನಿಗೆ ಸೋದರಮಾವ. "ನಡೆದದ್ದಾದರೂ ಏನು? ಎಂದು ಕೇಳಿದ್ದಕ್ಕೆ ತಾಯಿ ಹೇಳಿದರು : "ನಿನ್ನದೇ ಮಾತು. ಅದನ್ನೇ ಏನು ಅಂತ ಕೇಳುತ್ತ ಇದ್ದೆ" ಎಂದರು. ಸೀತಾಬಾಯಿಯವರು ಅಡುಗೆಮನೆಯಲ್ಲಿದ್ದರು. ಯಾತಕ್ಕಾಗಿಯೋ ನಡುಮನೆಗೆ ಬಂದಿದ್ದ ರಾಧಕ್ಕನಿಗೆ ಮಾಧವನನ್ನು ಕುರಿತ ಮಾತು ಕಿವಿಗೆ ಬಿದ್ದಾಗ ಅಲ್ಲಿಯೇ ನಿಂತಿದ್ದರು. ಅಷ್ಟರಲ್ಲಿಯೇ ಮಾಧವನೂ ಬಂದಿದ್ದ. ಬೀಗರಿಬ್ಬರ ಮಾತು ನಡೆದೇ ಇತ್ತು.

"ನಾನು ಹೇಳುವಷ್ಟು ಹೇಳಿ ನೋಡಿದೆ. ಆಡಿ ನೋಡಿದೆ. ಆದರೆ ಯಾವುದಕ್ಕೂ ಆತನ ಲಕ್ಷ್ಯವಿದ್ದಂತಿಲ್ಲ. ನನಗಂತೂ ಸಾಕಾಗಿಹೋಗಿದೆ" ಎಂದು ಕಕ್ಕ.

"ನೀವೇ ಹೀಗೆ ಹೇಳಿದರೆ ಹೇಗೆ, ರಾಮರಾವ್? ಎಷ್ಟಾದರೂ ಹುಡುಗ. ನೀವು ನಡೆಸಿಕೊಂಡು ಹೋದ ಹಾಗೆ ನಡೆಯಬೇಕು."

"ಹುಚ್ಚು ನಿಮಗೆ! ನನ್ನ ಕೂಡ ಮಾತನಾಡುವುದೂ ಆತನಿಗೆ ಬೇಡ. ಯಾವಾಗಲೂ ಮುಖ ತಪ್ಪಿಸಿಯೇ ತಿರುಗುತ್ತಾನೆ. ಆಗಲಿ, ನನ್ನ ಮಾತಿನಿಂದಾದರೂ ಆಗಬೇಕಾದದ್ದೇನು ಎಂದು ನಾನೂ ಸುಮ್ಮನಿದ್ದು ಬಿಡುತ್ತೇನೆ."

"ನೀವು ಹೀಗೆ ನಿರುತ್ಸಾಹ ಮಾಡಿದರೆ ಹೇಗೆ, ಹೇಳಿರಿ. ನೀವೇ ಬೆಳೆಯಿಸಿ

ಆತನನ್ನು ಹಾದಿಗೆ ಹಚ್ಚಬೇಕು. ಆ ಭಾರ ನಿಮ್ಮ ಮೇಲೆಯೇ ಬಿದ್ದಿದೆ."

"ಆ ಭಾರದ ಕೆಳಗೆಬಿದ್ದು ಮುಗ್ಗರಿಸುವ ಹಾಗಾಗಿದೆ ನನಗೆ. ಹೇಳಿದ ಹಾಗೆ ಕೇಳಿದರೆ ಒಂದು ಮಾತು. ಹೇಗೂ ಆದೀತು. ನನ್ನ ಮಗನಾಗಿದ್ದರೆ ಏಟು ಹಾಕುತ್ತಿದ್ದೆ. ಅಷ್ಟಕ್ಕೂ ಹಾದಿಗೆ ಬರದಿದ್ದರೆ ಮನೆಬಿಟ್ಟು ಹೊರಡು ಎಂದು ಎನ್ನುತ್ತಿದ್ದೆ. ಆದರೆ ಈಗ ನನಗೆ ಏನೂ ಮಾಡಲಿಕ್ಕಿಲ್ಲ. ಕೊನೆಗೆ ಬರುವುದು ಅಪಕೀರ್ತಿಯೇ ನನ್ನ ಪಾಲಿಗೆ."

ಭೀಮಣ್ಣ ಒಂದು ಕ್ಷಣ ಸುಮ್ಮನಾದರು. ಹೀಗೆ ಖಂಡಿತವಾಗಿ ಮಾಧವ ನಿಷ್ಪ್ರಯೋಜಕನೆಂದು ಕಕ್ಕ ಹೇಳುತ್ತಿರುವಾಗ ತಾವಾದರೂ ಹೇಳುವುದೇನು ಎಂದು ಸುಮ್ಮನಾದರೂ ರಾಮರಾಯರ ಅಭಿಪ್ರಾಯವನ್ನು ಒಪ್ಪುವಂತಿರ ಲಿಲ್ಲ. ಕಕ್ಕ-ಕಕ್ಕಿಯರ ಆಳ್ವಿಕೆಯಲ್ಲಿ ತಂಗಿ, ತಂಗಿಯ ಮಗ ಎಂಥ ಕಷ್ಟಗಳಿಗೆ ಈಡಾಗಬೇಕಾಗುತ್ತಿತ್ತೆಂಬುದರ ಕಲ್ಪನೆ ಅವರಿಗಿದ್ದುದರಿಂದ ರಾಮರಾಯ ನಂಥವರು ತನ್ನನ್ನಾಶ್ರಯಿಸಿದವರನ್ನು ಹೀಗೆ ಹೀಗಳೆದು ಮಾತನಾಡುವುದರಲ್ಲಿ ಭೀಮಣ್ಣನವರಿಗೆ ಆಶ್ಚರ್ಯವೇನೂ ಅನ್ನಿಸಲಿಲ್ಲ. ಆದರೆ ವಿಪರೀತ ಕೆಡುಕು ಎನಿಸಿತು. ಬೇಕಾದ ಅನುಕೂಲಗಳೊಂದಿಗೆ ಸುಖವಾಗಿ ಕಾಲಕಳೆಯಬಹು ದಾಗಿದ್ದ ತಂಗಿ, ತಂಗಿಯ ಮಗ, ರಾಮರಾಯನಂಥ ಲೋಭಿಯ ಕೈಗೆ ಸಿಕ್ಕು ಒದ್ದಾಡಬೇಕಾಯಿತಲ್ಲಾ ಎಂದು ದುಃಖವಾಯಿತು. ಇದೆಲ್ಲವನ್ನೂ ತಪ್ಪಿಸ ಬೇಕೆಂದು ತಂಗಿಯನ್ನು ತಮ್ಮೂರಿಗೆ ಕರೆದೊಯ್ದು ಮಾಧವನ ವಿದ್ಯಾಭ್ಯಾಸಕ್ಕೆ ಬೇರೆ ಏರ್ಪಾಡು ಮಾಡಬೇಕೆಂದು ಬಯಸಿದ್ದರು. ಆದರೆ ದುಡ್ಡಿನಿಂದ ಅಷ್ಟೊಂದು ಅನುಕೂಲವಂತರಾಗಿರದ್ದರಿಂದ ಅವರ ಸದಿಚ್ಛೆಯೆಲ್ಲವೂ ಇಡೀ ದಿವಸ ಹಿಡಿಜೋಳ ಸಿಗದ ಭಿಕುಕ್ಷನಂತೆ ಬಾಯಾರಿನಿಂತಿತ್ತು. ಅಲ್ಲದೆ ಹೇಗಾ ದರೂ ಮಾಡಿ ಆ ಏರ್ಪಾಡನ್ನು ಸಾಧಿಸಿದರೆ ರಾಮರಾಯನ ಸಂಬಂಧವನ್ನು ಸಂಪೂರ್ಣವಾಗಿ ಕಡಿದಂತಾಗಿ, ಆತನಿಂದ ಮಾಧವನಿಗೆ ಸಿಗಬೇಕಾಗಿದ್ದ ದುಡ್ಡಿಗೆ ಎಲ್ಲಿ ಧಕ್ಕೆ ತಗಲುವುದೋ ಎಂಬ ಹೆದರಿಕೆಯ ಮೂಲಕವೂ ಸುಮ್ಮ ನಾಗಿದ್ದರು. ಆದರೆ ತಮ್ಮ ಮಗನಾಗಿದ್ದರೆ ಮನೆಬಿಟ್ಟು ಹೊರಡಿಸುತ್ತಿದ್ದೆ ಎಂದು ಹೇಳಿದ ಮಾತನ್ನು ಕೇಳಿದಾಗ ಮಾತ್ರ ಪರಿಸ್ಥಿತಿ ದಿನದಿನಕ್ಕೂ ಕೆಡುತ್ತ ನಡೆದಿರಬೇಕೆಂಬುದರ ಅರಿವು ಉಂಟಾಯಿತು. ಭೀಮಣ್ಣ ಸುಮ್ಮನಾದುದ ರಿಂದ ಉತ್ತೇಜಿತರಾಗಿ ರಾಮರಾಯರು ಮುಂದುವರಿದರು :

"ಈಗ ನೀವೇ ನೋಡಿದಿರಿ. ಇದೀಗ ಮನೆಗೆ ಬಂದ. ಮನೆಯಿಂದ ಹೋದದ್ದು ಮುಂಜಾನೆ ಹತ್ತಕ್ಕೊ,ಹತ್ತೂವರೆಗೊ! ಹೆಚ್ಚುಕಡಿಮೆ ಸಾಯಂ

ಕಾಲ ನನ್ನ ಊಟವಾಗಿ ನಾನು ಕೆಲಸದಲ್ಲಿ ತೊಡಗಿದನಂತರವೇ ಈತ ಮನೆಗೆ ಬರುವುದು. ಎಂದಮೇಲೆ ಹೆಂಗಸರು ಎಷ್ಟು ಕಾಯಬೇಕು ? ಇದೆಲ್ಲ ಮಾತಾಡುವ ವಿಷಯವಲ್ಲ. ಏನೋ ಮಾತುಬಂದಿತು ಎಂದು ಹೇಳುತ್ತಿದ್ದೇನೆ. ಅಷ್ಟೆ."

ಅಡುಗೆಯ ಮನೆಯ ಸಂಪೂರ್ಣ ಸ್ವಾಮಿತ್ವವನ್ನು ಸೀತಾಬಾಯಿಯವರು ತಮ್ಮ ಕಡೆಗೆಯೆ ಇಟ್ಟುಕೊಂಡದ್ದು ಎಲ್ಲರಿಗೂ ತಿಳಿದ ವಿಷಯವಾಗಿತ್ತು. ಆದರೆ ಮಾಧವ ರಾತ್ರಿ ಬರಲು ತಡವಾದರೆ ಎಲ್ಲರೂ ಊಟ ಮುಗಿಸಿಕೊಂಡು ಎಲೆಯೊಂದನ್ನು ಬಡಿಸುತ್ತಿದ್ದುದು ರಾಧಕ್ಕ. ಮಾಧವ ಇವರಿಬ್ಬರ ಹೊರತಾಗಿ, ಹೊರಗಿನವರಿಗೆ ತಿಳಿಯುವಂತಿರಲಿಲ್ಲ. ಸೀತಾಬಾಯಿಯ ಸ್ವಾಮಿತ್ವದ ಸ್ಪಷ್ಟ ಪರಿಣಾಮಗಳೆಂದರೆ ಮಾಧವನಿಗೆ ಹೆಚ್ಚು ಕಡಿಮೆ ಪ್ರತಿನಿತ್ಯವೂ ಕೊನೆಗೆ ಉಳಿದ ಊಟದ ಪಾಲು. ರಾಧಕ್ಕನಿಗೆ ರಾತ್ರಿಯ ಫಲಾಹಾರಕ್ಕಾಗಿ ಏನಾದರೂ ಇದೆಯೋ ಇಲ್ಲವೋ ಎಂಬುದನ್ನು ಕೇಳಲಿಕ್ಕಂತೂ ಯಾರೂ ಗತಿಯಿರಲಿಲ್ಲ. ಈ ಎಲ್ಲ ವಿಷಯಗಳನ್ನು ಆಗೀಗ ಬಂದಾಗ ತಂಗಿಯಿಂದ ತಿಳಿದ ಭೀಮಣ್ಣ ಒಳಗಿನಿಂದಲೇ ಕಿಡಿಕಿಡಿಯಾದರು. ಏನಾದರೂ ಮಾಡಿ ಈ ಸಲ ಇವರಿಬ್ಬರನ್ನೂ ಇಲ್ಲಿಂದ ಬಿಡುಗಡೆ ಮಾಡುವುದು ಎಂದುಕೊಂಡರು. ಈ ಇಚ್ಛೆಗೆ ಅನುಕೂಲವಾಗಿ ಮಾಧವನ ಕೊನೆಯ ಪರೀಕ್ಷೆಯೂ ಸಮೀಪಿಸಿತ್ತು. ತಿಂಗಳೊಪ್ಪತ್ತಿನಲ್ಲಿ ಪರೀಕ್ಷೆಮುಗಿಯುವುದು. ಆಮೇಲೆ ಎಲ್ಲವನ್ನೂ ಒಮ್ಮೆ ಕೊನೆಯದಾಗಿ ನಿಷ್ಕರ್ಷೆ ಮಾಡಿಬಿಡಬೇಕೆಂದುಕೊಂಡರು. ಭೀಮಣ್ಣ ಈ ತರದ ಯೋಚನೆಗಳಲ್ಲಿತೊಡಗಿದ್ದಾಗ ರಾಮರಾಯರೂ ಮುಂದುವರಿದು ಬೇಕಾದ ವಿಷಯವನ್ನು ಎತ್ತಿಯೇ ಬಿಟ್ಟರು.

"ನಿಮಗೆ ನಾನು ಹೆಚ್ಚಿಗೆ ಹೇಳಿದರೆ ನೀವು ನನ್ನ ವಿಷಯದಲ್ಲಿಯೇ ತಪ್ಪು ತಿಳಿಯುವಂತಾದೀತು. ನಿಜವಾಗಿಯೂ ಈ ಜವಾಬುದಾರಿ ನನಗೆ ಸಾಕಾಗಿ ಹೋಗಿದೆ. ಹೇಗೂ ಪರೀಕ್ಷೆಯೂ ಮುಗಿಯುತ್ತದೆ. ಎಲ್ಲಿಯಾದರೊಂದು ಮದುವೆ ಗೊತ್ತುಮಾಡಿ ಆತನಿಗೊಂದು ಬೇರೆಯಾಗಿಯೇ ಮನೆಮಾಡಿ ಕೊಡಿರಿ, ಆಯಿತು."

ರಾಮರಾಯರ ಮಾತುಮಾತಿನಲ್ಲಿಯೂ ಕುತ್ಸಿತವು ಉಕ್ಕಿಬರುತ್ತಿತ್ತು. ತಾವು ಸೂಚಿಸಿದ್ದು ಒಂದುಒಳ್ಳೆಯ,ಅಗತ್ಯವಾದಏರ್ಪಾಡೆಂಬ ಎನ್ನುವುದಕ್ಕಿಂತ "ನಿಮ್ಮ ಮನಸ್ಸಿನಲ್ಲಿದ್ದುದು ಇದು,ಅದನ್ನೇ ಮಾಡಿಕೊಳ್ಳಿರಿ ಆಯಿತು"ಎನ್ನುವ ಭಾವವಿತ್ತು. ಆದರೆ ಸ್ವಭಾವತಃ ಶಾಂತವೃತ್ತಿಯ ಭೀಮಣ್ಣನವರಿಗೆ ಕೆರಳಿ ಜಗಳ ಹೂಡಬೇಕಾಗಿರಲಿಲ್ಲವೆಂದೇ ಸುಮ್ಮನಾಗಿದ್ದರು. ಹೀಗೆ ಮಾಡುವುದೇ

ವಿಹಿತವೆಂದು ಅವರು ಬಗೆದಿದ್ದರೂ ಸ್ಪಷ್ಟವಾಗಿ ಒಪ್ಪಿಗೆಯನ್ನು ಹೇಳಿ ಅವರ ಮನಸ್ಸನ್ನಾದರೂ ಯಾತಕ್ಕಾಗಿ ನೋಯಿಸಬೇಕೆಂದೂ ಸುಮ್ಮನಾದರು. ಅಲ್ಲದೆ ತಮ್ಮ ಇಂಗಿತವನ್ನು ತಿಳಿಯಗೊಡಬಾರದೆಂದು ಮಾತಿನ ಲಹರಿಯನ್ನು ಬೇರೆಯಾಗಿಸಲು ಯತ್ನಿಸುವಂತೆ ಹೇಳಿದರು.

"ನೀವೆಲ್ಲ ಹೇಳುವುದೂ ಸರಿಯೇ. ಆದರೆ ಆತನೊಂದು ಕೇಳಬೇಕಲ್ಲ? ನೀವು ಹೇಳಿದರೇನು? ನಾನು ಹೇಳಿದರೇನು?" ಎಂದು ಅವರ ಪರವಾಗಿ ಮಾತನಾಡುತ್ತಿರುವಂತೆಯೆ ಅಂದರು.

"ಅದು ಹೇಗಾದೀತು, ಭೀಮರಾವ್? ಎಷ್ಟಾದರೂ ಸೋದರಮಾವ. ನಿಮ್ಮ ಮಾತು ನಡೆದೀತು. ನನ್ನ ಮಾತಂತೂ ಖಂಡಿತವಾಗಿ ನಡೆಯುವುದಿಲ್ಲ. ಅಲ್ಲದೆ ಬೆಳೆದ ಹುಡುಗರು—ಕಲಿತವರು. ಹೀಗೆಯೇ ಮಾಡಿರಿ ಎಂದು ಹೇಳಿ ನಾನೇಕೆ ಒತ್ತಾಯಮಾಡಲಿ? ಅನಾಯಾಸ ನೀವೂ ಬಂದಿದ್ದೀರಿ. ಮಾತನಾಡಿ ನೋಡಿರಿ" ಎಂದು ಮಾತು ಮುಗಿಸುವವರಂತೆ ಹೇಳಿದರು.

ಇದನ್ನೆಲ್ಲ ಕೇಳಿ ಭೀಮಣ್ಣನವರಿಗೆ ಸಮಾಧಾನವೂ ಆಯಿತು, ಅಸಮಾಧಾನವೂ ಆಯಿತು. ಇವರು ಹೇಳಿದಂತೆ ಮಾಧವ ಮದುವೆಯಾಗಿ ಬೇರೆಯಾಗಿದ್ದರೆ ಒಳ್ಳೆಯದೆ ಎಂಬುದಕ್ಕೆ ಸಮಾಧಾನ; ಆದರೆ ಬೇರೆಯಾಗಿರುವುದೆಂದರೆ, ಅಷ್ಟೊಂದು ಸುಲಭವಾದ ವಿಚಾರವಾಗಿರಲಿಲ್ಲ. ದುಡ್ಡಿನ ವಿಚಾರದಲ್ಲಿ ಯಾವ ತೊಂದರೆ ತಲೆದೋರಬಹುದೆಂಬುದನ್ನಂತೂ ತಿಳಿಯಲು ಸಾಧ್ಯವೇ ಇರಲಿಲ್ಲ. ಮನೆಯಲ್ಲಿ ಮಾಧವನ ತಂದೆಯ ಆಸ್ತಿ ಯಾವುದೂ ಇಲ್ಲವೆಂದು ಹೇಳಿಬಿಟ್ಟರೆ? ಆತನ ದುಡ್ಡಿನ ಮೂಲಕವೇ ರಾಮಚಂದ್ರರಾಯ ಕೆಲಸವಿಲ್ಲದಿದ್ದರೂ ಒಳ್ಳೆಯ ರೀವಿಯಲ್ಲಿ ತನ್ನ ವಕೀಲಿಯನ್ನು ನಡೆಸುತ್ತಿದ್ದ. ಆದರೆ ಮಾಧವನ ತಂದೆಯ ದುಡ್ಡು ರಾಮಚಂದ್ರರಾಯನ ಕೈಯಲ್ಲಿ ಸಿಕ್ಕ ಬಗ್ಗೆ ಯಾವ ಕಾಗದ ಪತ್ರಗಳೂ ಇರಲಿಲ್ಲ—ಆಗಿನ ಪರಿಸ್ಥಿತಿಯಲ್ಲಿ ಇರುವುದೂ ಸಾಧ್ಯವಿರಲಿಲ್ಲ. ಅಕಸ್ಮಾತ್ತಾಗಿ ಅವರು ತೀರಿಹೋದಾಗ ಅವರ ಸಾವು ಸಾಮಾನ್ಯ ಸಾವು—ಅದರಲ್ಲಿ ಯಾವ ವಿಶೇಷವೂ ಇರಲಿಲ್ಲವೆಂಬುದನ್ನು ಸಿದ್ಧಪಡಿಸುವುದೇ ಸಾಕಾಗಿಹೋದಾಗ ಸತ್ತವರ ಆಸ್ತಿಯ ಬಗ್ಗೆಯಲ್ಲಿಯ ಕಾಗದಪತ್ರಗಳನ್ನು ಕುರಿತು ವಿಚಾರ ಮಾಡಲಿಕ್ಕೆ ಅವಸಾನವೇ ಇರಲಿಲ್ಲ. ಅಲ್ಲದೆ ಇದೆಲ್ಲ ಹತ್ತುವರ್ಷಗಳ ಹಿಂದಿನ ಮಾತು. ಬೇರೆ ಏರ್ಪಾಡು ಮಾಡಿದರೆಂದು ಹೇಳಿ ಏನನ್ನೂ ಕೊಡದೆಹೋದರೆ ಮುಂದೇನು ಎಂಬುದೇ ಭೀಮಣ್ಣನವರಿಗೆ ಬಗೆಹರಿಯದ ಪ್ರಶ್ನೆಯಾಯಿತು. ಆಯಿತು, ನೋಡೋಣ, ಪ್ರಸಂಗ

ಬಂದ ಹಾಗೆ ಎಂದು ಸಮಾಧಾನ ತಂದುಕೊಳ್ಳುತ್ತಿರುವಾಗಲೇ ಒಳಗಿನಿಂದ ಊಟಕ್ಕೆ ಕರೆ ಬಂದಿತು.

ಊಟ ಹೆಚ್ಚುಕಡಿಮೆ ಮೌನವಾಗಿಯೇ ನಡೆಯಿತು. ಭೀಮಣ್ಣ ಮಾಧವನನ್ನು ಮಾತನಾಡಿಸುತ್ತಿದ್ದರೂ ಯಾವ ವಿಶೇಷ ಆಸ್ಥೆ ಅನಾಸ್ಥೆಗಳೂ ಇಲ್ಲದೆ ಮಾಧವ ಸ್ವಲ್ಪದರಲ್ಲಿಯೇ ಮಾತು ಮುಗಿಸುತಿದ್ದ. ಆಯಿತು, ಊಟವಾದ ಮೇಲೆ ಆತನನ್ನು ಮಾತನಾಡಿಸುವುದು ಇದ್ದೇ ಇದೆಯಲ್ಲ, ಎಂದು ಭೀಮಣ್ಣನವರೂ ಸುಮ್ಮನಾದರು.

"ಮತ್ತೇನು ಭೀಮರಾವ್, ಊರ ಕಡೆಯ ಸಮಾಚಾರ? ಬತ್ತದಬೆಳೆಯಂತೂ ಈ ಸಲ ಯಾರೂ ಕೇಳುವ ಹಾಗೆಯೇ ಇಲ್ಲ. ಅಂದಮೇಲೇನು ?" ಎಂದು ರಾಮರಾಯರು ಔಪಚಾರಿಕವಾಗಿ ಮೊದಲುಮಾಡಿದರು.

"ಬೆಳೆಗೇನು ಅಡ್ಡಿ ಇಲ್ಲ. ಆದರೆ ಈ ಸರಕಾರದ ಲೆವ್ಹಿ ಬಂದಿದೆಯಲ್ಲ. ಕೈಗೆ ಬಂದುದ್ದು ಬಾಯಿಗೇ ಬರುವಂತಿಲ್ಲ. ಎಷ್ಟು ಬೆಳೆದರೂ ಅವರು ಬಿಟ್ಟು ಕೊಟ್ಟದ್ದು ನಮ್ಮ ಪಾಲಿಗೆ...."

"ಅದರ ಚಿಂತೆ ನಿಮಗೇನು? ಊರ ಗೌಡ ನಿಮ್ಮ ಜೇಬನಲ್ಲಿ."

"ಹಾಗೇನಿಲ್ಲ, ರಾಯರೆ. ಈಗೆಲ್ಲ ಅವರಿಗೂ ಆಸೆ ಮಿತಿಮೀರಿ ನಿಂತಿದೆ. ಎಷ್ಟು ಎತ್ತಿಹಾಕಿದರೂ ಅವರಿಗೆ ಸಮಾಧಾನವಿಲ್ಲವಾಗಿದೆ. ಇನ್ನೇನು, ನನ್ನ ಬಿಳಿಯ ಟೊಪ್ಪಿಗೆ ಎಷ್ಟೋ ಕೆಲಸಗಳನ್ನು ಸುಸೂತ್ರವಾಗಿ ಸಾಗಿಸುತ್ತಿದೆ ಅನ್ನಬಹುದು!"

"ಹೂಂ....ಈಗೇನು ಎಲ್ಲ ಬಿಳಿಯ ಟೊಪ್ಪಿಗೆಯುವರದೇ ಅಲ್ಲವೆ?"

"ಹಟದಿಂದ ಇಪ್ಪತ್ತುವರ್ಷ ಹಾಕಿದೆ. ಅದರ ಉಪಯೋಗ ಇತ್ತೀಚೆ ಒಂದಿಲ್ಲೊಂದು ರೀತಿ ಆಗತಾ ಇದೆ ಅನ್ನಬಹುದು."

ಹೀಗೆ ಊರಲ್ಲಿಯ ತಮ್ಮ ವರ್ಚಸ್ಸು ಕೇವಲ ತಮ್ಮ ಟೊಪ್ಪಿಗೆಯ ಬಣ್ಣದ ಪರಿಣಾಮವೆಂದು ಹೇಳಿದ್ದು ಅವರ ನಿರಭಿಮಾನವೃತ್ತಿಗೆ ಸಾಕ್ಷಿಯಾಗಿತ್ತು. ನಿಜವಾಗಿಯೂ ಮೊದಲನೆಯ ಅಸಹಕಾರ ಚಳುವಳಿಯ ಕಾಲದಿಂದ ಇಡೀ ಊರಲ್ಲಿ ನಿಶ್ಚಲವಾಗಿ ಗಾಂಧಿಯುವರ ಭಕ್ತನಾಗಿ ಉಳಿದವರೆಂದರೆ ಭೀಮಣ್ಣ ಒಬ್ಬರೆ. ಆದ್ದರಿಂದ ಇಂದಿಗೆ ಯಾವ ಸರಕಾರಿ ಅಧಿಕಾರಿ ಊರಿಗೆ ಬಂದರೂ ಭೀಮಣ್ಣನವರ ಹೊರತು ಯಾವ ಮಹತ್ವದ ನಿರ್ಣಯಗಳೂ ಆಗುವಂತಿರಲಿಲ್ಲ. ಕಳೆದ ಚುನಾವಣೆಯಲ್ಲಿ ಆತನಿಗೂ ಕಾಂಗ್ರೆಸ್ "ಟಿಕೆಟ್"ದೊರೆಯಬಹುದೆಂಬುವವರೆಗೂ ಮಾತು ಕೇಳಬರುತ್ತಿತ್ತು. ಆದರೆ ಭೀಮಣ್ಣನವರಿಗೆ

ಯಾವಗಲೂ ಕಾರ್ಯಕ್ಷೇತ್ರವನ್ನು ಸಣ್ಣದನ್ನಾಗಿಟ್ಟುಕೊಂಡು ಚೊಕ್ಕಟ ವಾಗಿ ಕೆಲಸ ಮಾಡುವುದೇ ರೂಢಿಯಾಗಿಬಿಟ್ಟಿದ್ದರಿಂದ ಯಾವ ದೊಡ್ಡ ಹವ್ಯಾಸಕ್ಕೂ ಅವರು ಬೀಳುತ್ತಿರಲಿಲ್ಲ. ಅವರ ಮಾತಿನ ರೀತಿಯನ್ನು ತಿಳಿದ ರಾಮರಾಯರು ಹೇಳಿದರು :

"ಕೇವಲ ಬಿಳಿಯ ಟೊಪ್ಪಿಗೆಗಳನ್ನು ಹಾಕಿದರೆ ಯಾರೂ ಕೇಳಿಯಾರು ? ಚಳುವಳಿಯ ಕಾಲದಲ್ಲಿ ಏನೇನನ್ನೋ ಮಾಡುತ್ತಿದ್ದಿರಪ್ಪಾ....ಆಗೆಲ್ಲ ನಮಗೆ ತುಂಬ ಹೆದರಿಕೆ...."

ಮಾತು ಹೀಗೆಯೇ ಗೊತ್ತುಗುರಿಯಿಲ್ಲದೆ ನಡೆದಿತ್ತು—ನಿಧಾನವಾಗಿ ನಡೆದ ಊಟದಂತೆ. ಊಟ ಮುಗಿದ ಕೂಡಲೆ ಎಲೆಯ ಅಡಿಕೆಯ ಉಪಚಾರ ವಾಯಿತು. ರಾಯರು ಮಹಡಿ ಮೇಲಿನ ತಮ್ಮ ಕೋಣೆಯನ್ನು ಸೇರಿದರು. ಭೀಮಣ್ಣನವರು ಮಾಧವನ ಕೋಣೆಯನ್ನು ಸೇರಿದರು. ರಾಧಕ್ಕನಿಗೂ ಅಣ್ಣನ ಕೂಡ ಮಾತಾಡಬೇಕೆಂಬ ಆತುರವಿದ್ದರೂ ಸೀತಾಬಾಯಿಯವರು ಅಡುಗೆಮನೆಯನ್ನು ಬಿಡುವ ತನಕ ಹೊರಟು ಬರುವಂತಿರಲಿಲ್ಲ. ಅಲ್ಲದೆ ಅಡುಗೆಮನೆಯ ಸ್ವಾಮಿತ್ವ ಮಾತ್ರ ಸೀತಾಬಾಯಿಯವರಿಗೆ ಸೇರಿತ್ತು. ಅದರ ಸೇವಕತ್ವವೆಲ್ಲವೂ ರಾಧಕ್ಕನ ಸೊತ್ತಾಗಿದ್ದರಿಂದ ಅಣ್ಣನನ್ನು ಸೇರ ಬೇಕಾದರೆ ಅರ್ಧಗಂಟೆಯಾದರೂ ಬೇಕಾಯಿತು.

"ಮತ್ತೇನಪ್ಪಾ ಮಾಧವಾ—?" ಭೀಮಣ್ಣ ಮೊದಲು ಮಾಡಿದರು.

"ಮತ್ತೇನು ? ಆಯಿತಲ್ಲ ಇಷ್ಟು ಹೊತ್ತಿನವರೆಗೆ ಪ್ರವಚನ...."

"ಹೂಂ—ಆಯಿತು ಅನ್ನು ಪ್ರವಚನ...."

"ನೀನೂ ಹೂಂಗುಡುತ್ತಲೇ ಇದ್ದಿ. ನನಗಂತೂ ಹಿಡಿಸಲಾರದಷ್ಟು ನಗು ಬರುತ್ತಿತ್ತು."

"ಹುಂ....ಮತ್ತೇನು ಮಾಡುವುದು ? ಎದುರು ಮಾತನಾಡಿ ಕೆರಳಿಸುವುದ ಕ್ಕಿಂತ ಸುಮ್ಮನೆ ಹೇಳಿದ್ದನ್ನು ಕೇಳಿಕೊಂಡು ತಮಗೆ ತಿಳಿದಂತೆ ಮಾಡಿದರೆ ಆಯಿತು...."

"ಆಯಿತು. ಎಷ್ಟಾದರೂ ನೀನು ಗಾಂಧೀ ಶಿಷ್ಯ ಅಲ್ಲವೆ ?"

"ಅದು ಹೋಗಲಿ ಬಿಡಪ್ಪಾ. ಅವರ ಮಾತೇನೂ ಹೊಸದಲ್ಲ. ಆದರೆ ಹೋದ ಸಲ ನಾನು ಬಂದಾಗಿನಕ್ಕಿಂತ ಈ ಸಲ ಇನ್ನೂ ಹೆಚ್ಚಾಗಿಬಿಟ್ಟಿದೆ ಯಲ್ಲಾ ಅಲ್ಲ, ನೀನಾದರೂ ಸುಮ್ಮನೆ ಯಾಕೆ ಅವರಿಗೆ ವಿರುದ್ಧವಾಗಿ ನಡೆಯುತ್ತೀ ?"

"ನಾನೇನು ವಿರುದ್ಧವಾಗಿಯೂ ನಡೆಯುವುದಿಲ್ಲ, ಯಾವುದೂ ಇಲ್ಲ. ಅವರ ಕಡೆಗೆ ನಾನು ಗಮನವನ್ನೇ ಕೊಡುವುದಿಲ್ಲ. ಅದೇ ಅವರಿಗೆ ಮುಖ್ಯ ಸಿಟ್ಟು."

"ಹಾಗಾದರೂ ಯಾಕೆ ಮಾಡಬೇಕು ? ಎಷ್ಟಾದರೂ ಹಿರಿಯರು...."

ಮಾಧವನಿಗೆ ತೀರ ಬೇಸರವೆನಿಸಿತು. ತಾಯಿಯನ್ನು ಬಿಟ್ಟರೆ ಪ್ರಪಂಚದಲ್ಲಿ ತನಗೆ ಹಿತಚಿಂತಕರು ಯಾರಾದರೂ ಇದ್ದರೆ ಭೀಮಣ್ಣ ಎಂದು ತಿಳಿದಿದ್ದ ಮಾಧವನಿಗೆ ತನ್ನ ಸೋದರಮಾವನ ಮಾತಿನ ರೀತಿ ಪೂರ್ತಿ ಅರ್ಥವಾಗದೆ ಅರೆಮುರ್ಧ ಸಿಡುಕಿನಲ್ಲಿಯೇ ಹೇಳಿದ.

"ಸಾಕಪ್ಪಾ ಆ ಮಾತು. ನೀನೂ ಅವರಂತೆಯೇ ಮಾತನಾಡಲಾರಂಭಿಸಿದರೆ ಮುಗಿದೇ ಹೋಯಿತು. ಇಷ್ಟೊತ್ತಿನ ಪುರಾಣದ ಪರಿಣಾಮ ಚೆನ್ನಾಗಿ ಆಗಿದೆ ಎಂದ ಹಾಗಾಯಿತು ನಿನ್ನ ಮನಸ್ಸಿನ ಮೇಲೆ...."

"ಹಾಗಲ್ಲ ಮಾಧವಾ, ಅವರಿಗೇನು ನಿನ್ನ ಮೇಲೆ ದ್ವೇಷವೆ ? ನನಗೆ ಇದೇ ತಿಳಿಯುವುದಿಲ್ಲ. ಇಷ್ಟೇಕೆ ಅವರು ನಿನ್ನ ವಿರುದ್ಧ ಈ ಹೊತ್ತು ಮಾತನಾಡಿದರು. ಇದೇ ತಿಳಿಯುವುದಿಲ್ಲ."

"ಎಂದಿಲ್ಲೊಂದು ದಿವಸ ಬರುವ ನಿನಗೆ ಹೇಗೆ ತಿಳಿಯಬೇಕು ? ನಾಲ್ಕಾರು ದಿವಸ ಇರು, ತಾನಾಗಿಯೇ ತಿಳಿದೀತು."

"ಏನು, ಏನು ಸಮಾಚಾರ ?"

"ಸಮಾಚಾರ ಏನೂ ಇಲ್ಲ. ಈಗ ಎರಡು ತಿಂಗಳ ಹಿಂದೆ ತೋರಿಸಲೆಂದು ಕನ್ಯೆಯೊಂದನ್ನು ಕರೆಯಿಸಿದ್ದರು. ಸೀತಾಕಕ್ಕಿಯ ಸಂಬಂಧಿಕರ ಪೈಕಿ ಎಂದು ಕಾಣುತ್ತದೆ. ನೋಡಿದರೆ ಕಣ್ಣು ಕುಕ್ಕಿಸುವಂಥ ಕಪ್ಪು ! ಅದನ್ನು ನನ್ನ ಕೊರಳಿಗೆ ಕಟ್ಟಬೇಕು ಎಂದು ಕಕ್ಕಿಯ ಹಟ. ಕಕ್ಕಿಯ ಹಟ ಎಂದಮೇಲೆ ಗೊತ್ತೇ ಇದೆಯಲ್ಲ...."

"ನೀನೇನು ಹೇಳಿದಿ?"

"ನಾನೇನು ಹೇಳುವುದು?—ಕಲಿಯುವುದು ಮುಗಿದು ನನಗೆಲ್ಲಿಯಾದರೂ ಒಂದು ಉದ್ಯೋಗ ಸಿಗುವವರೆಗೆ ನಾನು ಮದುವೆಯಾಗುವುದೇ ಇಲ್ಲ —ಎಂದು ಒಂದೇ ಮಾತಿನಿಂದ ಮುಗಿಸಿಬಿಟ್ಟೆ."

"ಓಹೋ ! ಹೀಗಿದೆಯೇ ಸಂಚು ? ಅವರಾದರೂ ಸುಮ್ಮನೆ ಈ ರೀತಿಯ ಹಟ ಹಿಡಿಯಬಾರದು...."

"ಬಾರದು ಎಂದು ಅವರಿಗೆ ಹೇಳುವವರು ಯಾರು ? ಅವರ ಮನೆಯ

ಅನ್ನಕ್ಕೆ ನಾವೇ ಬಿದ್ದ ಹಾಗಿದೆ. ಅವರು ತಿಳಿದಿದ್ದೂ ಅಷ್ಟೆ" ಎಂದು ಮಾಧವ ಸುಮ್ಮನಾದ. ಅವನ ದನಿಯಲ್ಲಿ ದುಃಖ ಒತ್ತರಿಸಿ ಬರುತ್ತಿರುವಂತಿತ್ತು.

ಒಂದು ಕ್ಷಣ ಇಬ್ಬರೂ ಸುಮ್ಮನಾದರು. ಕೊನೆಗೆ ಮಾಧವನೇ ಹೇಳಿದ :

"ಆಯಿತು. ಇಷ್ಟು ದಿವಸ ಹೇಗೋ ನಡೆಯಿತು. ಸ್ವಲ್ಪದರ ಸಲುವಾಗಿ ಯಾಕೆ ಎಂದು ಬಂದುದಕ್ಕೆ ಬೆನ್ನುಕೊಟ್ಟು ದಿನ ನೂಕುತ್ತಿದ್ದೇವೆ. ಪರೀಕ್ಷೆ ಯಾದನಂತರ ಒಂದು ದಿವಸ ಉಳಿಯುವ ಹಾಗಿಲ್ಲ ಈ ಮನೆಯಲ್ಲಿ. ಏನು ಬಂದರೂ ಬರಲಿ. ಅಕ್ಕನನ್ನು ಮಾತ್ರ ನೀನು ಕರೆದುಕೊಂಡು ಹೋಗಿಬಿಡು...."

"ಹೂಂ ನಾನು ಈಗ ಬಂದದ್ದೂ ಅಷ್ಟಕ್ಕೆಯೆ. ಆಕೆಯನ್ನು ನಾನು ಈಗಲೇ ಕರೆದುಕೊಂಡು ಹೋಗಬೇಕೆಂದಿದ್ದೇನೆ. ಅವ್ವನಿಂದಂತೂ ಏನೂ ಆಗುವ ಹಾಗಿಲ್ಲ. ಮನೆಯಲ್ಲಿ ಬಾಣಂತಿತನ ಬೇರೆ...."

"ಒಳ್ಳೆಯದೇ ಆಯಿತು. ಇನ್ನು ಒಂದು ತಿಂಗಳಿಗೆ ಪರೀಕ್ಷೆ ಮುಗಿದ ಕೂಡಲೇ ನಿಮ್ಮೂರಿಗೆ ಬಂದುಬಿಡುವೆ. ಆಮೇಲೆ ಮುಂದಿನ ವಿಚಾರ...."

"ಮುಂದಿನ ವಿಚಾರ ಏನು ?"

"ಈಗಲೇ ಯಾಕೆ ಅದೆಲ್ಲ ? ನೋಡೋಣವಂತೆ...."

"ಮಾಧೂ —" ಎಂದು ಭೀಮಣ್ಣ ಮುಂದಕ್ಕೆ ಸರಿದು ಮೆಲುದನಿಯಲ್ಲಿ ಕೇಳಿದರು :

"ದುಡ್ಡಿನ ವಿಚಾರ ಏನಿದೆ ನಿಮ್ಮ ಕಕ್ಕನದು? ಬೇರೆಯಾಗಬೇಕೆಂಬ ವಿಚಾರವನ್ನಂತೂ ಸ್ಪಷ್ಟವಾಗಿ ಹೇಳಿಯೇ ಬಿಟ್ಟೆ. ಕೊಡುವ ಮಾತು ಮಾತ್ರ ಬರಲಿಲ್ಲ. ಅದಕ್ಕೆಂದೆ "

"ಕೊಡುವ ಮಾತೇ ? ಮುಗಿದೇ ಹೋಯಿತು ! ಮೊನ್ನೆ ಪರೀಕ್ಷೆಗಾಗಿ ಕಟ್ಟಬೇಕಾದ ಹಣ ಬೇಡಿದರೆ ಕಣ್ಣೀರು ಕಪಾಳಿಗೆ ತರಿಸಿದ. ಮೂರು ದಿನ ಗೋಳಾಡಿಸಿ ಕೊನೆಗೆ ಐವತ್ತು ರೂಪಾಯಿ ಮೋರೆಯ ಮೇಲೆ ಎಸೆದ, ಹಾಳಾಗಿ ಹೋಗು ಎಂದು."

"ಈ ಸರಿ ಅನ್ಯಾಯದಿಂದ ದುಡ್ಡು ಎತ್ತಿಹಾಕಿ ಏನು ಮಾಡುತ್ತಾನೆಯೊ, ಮಹಾರಾಯ. ತನ್ನ ಜನ್ಮಕ್ಕೆ ಒಂದು ಮಗುವೂ ಇಲ್ಲ.

"ಮಗುವಿಲ್ಲದಿದ್ದರೆ ಬಳಗ ಇದೆಯಲ್ಲ. ಎಲ್ಲ ಹೋಗುವುದು ಕಕ್ಕಿಯ ಬಳಗಕ್ಕೆಯೇ. ಆಯಿತು. ನಮಗಾದರೂ ಯಾಕೆ ಆ ವಿಚಾರ ?"

"ಹೀಗೆಂದರೆ ಹೇಗಾದೀತು, ಮಾಧವಾ ? ನಿನ್ನದು ಎನ್ನುವುದಾದರೂ ನಿನಗೆ ಸಿಗಬೇಡವೇ ?"

"ನನ್ನದೇನು ?"

"ನಿನ್ನದು ಎಂದರೆ ನಿನ್ನ ತಂದೆಯದು. ದುಡ್ಡೇನು ಅಷ್ಟಿಷ್ಟಿತ್ತೆ ?

ಆ ಲೆಕ್ಕ ತೆಗೆದರೆ ಮುಗಿದುಹೋಯಿತು. ಈ ಕ್ಷಣಕ್ಕೆ ಬೀದಿಗೆ ತಳ್ಳ ಬಹುದು, ನನ್ನನ್ನು ನಿನ್ನನ್ನು ಕೂಡಿಯೇ."

"ಹಾಗಾದರೆ ನಿನಗೆ ಏನನ್ನೂ ಕೊಡುವಂತಿಲ್ಲ ಅನ್ನು."

"ಕೊಡುವಂತೆಯೂ ಇಲ್ಲ, ನಾನು ಬೇಡುವಂತೆಯೂ ಇಲ್ಲ. ಅದು ನನಗೆ ಬೇಕೂ ಇಲ್ಲ."

"ನಿನಗೇನು ಹುಚ್ಚು, ಮಾಧವ ?"

"ಹುಚ್ಚಲ್ಲ, ಅನಾಯಾಸವಾಗಿ ಪಾಪ ಕಳೆಯಿತು ಅನ್ನುತ್ತೇನೆ. ಅನ್ಯಾಯದ ದುಡ್ಡು ನನಗೆ ಬೇಕಾಗಿಲ್ಲ. ನೀನು ಏನೂ ಅನ್ನು, ಅದರಿಂದ ಧನ್ಯರಾಗುವವರು ಆಗಲಿ.

ಅಳಿಯನ ಧೈರ್ಯವಾದಿತ್ವಕ್ಕೆ ಭೀಮಣ್ಣನವರು ಒಂದು ಕ್ಷಣ ತಲೆಪೂಗಿದರು. "ಆದರೆ ವ್ಯವಹಾರ ದೃಷ್ಟಿಯಿಂದ ಇದು ಮರುಳುತನವಲ್ಲವೆ" ಎಂದರು.

"ದುಡ್ಡಿಲ್ಲದಿದ್ದರೆ ನಿನ್ನನ್ನು ಯಾರು ಕೇಳಬೇಕು, ಮಾಧವಾ ?"

"ಏನು ಬೇಕಾದುದಾದರೂ ಆ ದುಡ್ಡು ಬೇಡ ನೋಡು, ಭೀಮಣ್ಣಾ. ಹತ್ತುವರ್ಷ ನಡೆದ ವನವಾಸ ಆ ದುಡ್ಡಿನ ಪರಿಣಾಮವೇ. ತಂದೆಯನ್ನು ಕೊಂದದ್ದೂ ಅದೇ ದುಡ್ಡು. ಈಗ ಆದದ್ದೇ ಬೇಕಾದಷ್ಟಾಗಿದೆ. ಇನ್ನು ಮೇಲೆ ಅದರ ಸಂಪರ್ಕ ಕಕ್ಕನ ಲೋಭದ ಮೂಲಕ ನನಗೆ ಬರುವಂತೆಯೂ ಇಲ್ಲ. ಅದು ನಮ್ಮ ಸುದೈವ "

"ಹಾಗಾದರೆ ಏನು ಮಾಡಬೇಕು ಎನ್ನುತ್ತೀ ?"

"ಏನೂ ಇಲ್ಲ. ಪರೀಕ್ಷೆ ಮುಗಿದ ಕೂಡಲೆ ಎಲ್ಲಿಯಾದರೂ ಕೆಲಸ ಹಿಡಿಯಬೇಕು ಎಂದಿದ್ದೇನೆ. ಮುಂಬಯಿಗೆ ಹೋದರೂ ಅಡ್ಡಿ ಇಲ್ಲ. ನನಗೆ ಇಲ್ಲಿಂದ ಎಷ್ಟು ದೂರ ಹೋದಷ್ಟೂ ಸಮಾಧಾನ !" ಮಾಧವನ ದನಿಯಲ್ಲಿ ತುಂಬ ನೋವಿತ್ತು. ಕಣ್ಣೀರು ಚಿಮ್ಮುವುದರಲ್ಲಿತ್ತು. ಇದನ್ನು ಗುರುತಿಸಿದ ಭೀಮಣ್ಣ ಸಮಾಧಾನಪಡಿಸುವ ದನಿಯಲ್ಲಿ ಹೇಳಿದ :

"ಹೋಗಲಿ ಬಿಡು ಮಾಧವಾ. ಸುಮ್ಮನೆ ಕೆಡಕನ್ನಿಸಿಕೊಳ್ಳಬೇಡ. ನಿನ್ನ ದೈವ ಚೆನ್ನಾಗಿದ್ದರೆ ಈಗ ಹೋದದ್ದು ಇನ್ನೊಂದು ರೀತಿಯಲ್ಲಿ ಬಂದೀತು. ಹೋಗಲಿ ಬಿಡು" ಎಂದು ಬೆನ್ನಮೇಲೆ ಕೈಯಾಡಿಸಿದರು. ಆ ಕ್ಷಣದ ಮಟ್ಟಿ

ಗಾದರೂ ಮಾಧವನ ಮನಸ್ಸಿನ ದುಗುಡ ಮಾವನ ಅಂತಃಕರಣದಲ್ಲಿ ಕರಗಿ ಹಾಯವಾಯಿತು.

ರಾಧಕ್ಕ ಬಂದಮೇಲೆ ಅಣ್ಣತಂಗಿಯರು ಎಷ್ಟೋ ವೇಳೆ ಮಾತನಾಡುತ್ತಲೇ ಇದ್ದರು. ಮಾಧವ ಯಾವುದೋ ಪುಸ್ತಕದಲ್ಲಿ ಕಣ್ಣುಗಳನ್ನಿಟ್ಟಿದ್ದರೂ ಕಿವಿಯೆಲ್ಲ ಅವರಿಬ್ಬರ ಮಾತಿನಲ್ಲಿಯೇ ಇತ್ತು. ಒಟ್ಟಿನಲ್ಲಿ ಬಿಡುಗಡೆಯ ಹೊರತು ಭೀಮಣ್ಣನವರಿಗೆ ಬೇರೆ ದಾರಿ ಕಾಣುತ್ತಲೇ ಇರಲಿಲ್ಲ. ಅದರ ಕಷ್ಟನಷ್ಟಗಳು ಅವರ ಮುಂಧೋರಣೆಯ ವೃತ್ತಿಯನ್ನು ಅಣಕಿಸುತ್ತಿದ್ದವು. ಆದರೆ ದಿನದಿನಕ್ಕೂ ಹದಗೆಡುತ್ತಿರುವ ತಂಗಿಯ ಮತ್ತು ಅವಳ ಮಗನ ಪರಿಸ್ಥಿತಿಯನ್ನು ನೆನೆದು ದುಃಖಿತರಾದರು. ತಮ್ಮ ವಿಚಾರಗಳಿಗೆ ಸರಿಯಾಗಿ ರಾಧಕ್ಕನನ್ನು ಕರೆದೊಯ್ಯಬೇಕಾದುದೂ ಒಂದು ಅನುಕೂಲ ಪರಿಸ್ಥಿತಿಯೇ ಎಂದು ನೆನೆದು ಕೊನೆಯಾಗಿ ತಂಗಿಯನ್ನು ಕೇಳಿದರು :

"ಹಾಗಾದರೆ ನಿನ್ನನ್ನು ಕಳುಹಿಸಲಿಕ್ಕೂ ಅಷ್ಟು ಸಹಜವಾಗಿ ಅವರು ಒಪ್ಪಲಾರರೆನ್ನು."

"ನೀನೇ ನೋಡಿದೆಯಲ್ಲ, ಭೀಮಣ್ಣ. ಎಲ್ಲ ಸ್ಥಿತಿಗತಿ ನಿನಗೆ ಗೊತ್ತಿದೆ. ಮನೆಗೆ ಹಿರಿಯಳಾಗಿರಬೇಕಾಗಿದ್ದವಳು ನಾನು ; ತೊತ್ತಿಗಿಂತಲೂ ಆಚೆಯಾಗಿದೆ ನನ್ನ ಗತಿ. ಈ ಗತಿ ಬರಬಾರದಾಗಿತ್ತು ನನಗೆ...." ಎಂದು ಕಣ್ಣೀರು ಹಾಕಿದರು.

"ಈಗಲಾದರೂ ಮುಗಿಯಬಂದಿದೆಯಲ್ಲ. ಯಾಕೆ ಚಿಂತೆ ಮಾಡುತ್ತಿ, ಬಿಡು" ಎಂದು ಅಣ್ಣ ಸಮಾಧಾನಪಡಿಸಿದ.

"ನಿಜವಾಗಿಯೂ ನಾನಿಲ್ಲಿ ಇದ್ದದ್ದು ಮಾಧವನ ಸಲುವಾಗಿ. ಇಲ್ಲವಾದರೆ ಎಂದಿಗೋ ಬಂದುಬಿಡುತ್ತಿದ್ದೆ, ಆಯಿತು. ನಾನಿಲ್ಲಿದ್ದುಕೊಂಡು ಮಾಡಿದ್ದೂ ಅಷ್ಟರಲ್ಲಿಯೇ ಇದೆ. ಆದರೂ ಕಣ್ಣೆದುರಿಗೆ ಇರಬೇಕು ಎಂದು ಇದ್ದಿದ್ದೇನೆ" ಎಂದು ಸುಮ್ಮನಾದರು.

"ಆಗಲಿ, ನಾಳೆ ಬೆಳಗ್ಗೆ ಕೇಳಬೇಕು ; ಒಂದು ಮಾತು ಕೇಳಿಬಿಡುತ್ತೇನೆ, ಅವರಿಬ್ಬರೂ ಕೊಂಕು ಮಾತನಾಡುವುದಂತೂ ನಿಶ್ಚಿತ. ಆಡಿದರೆ ಆಡಲಿ. ನಾವಂತೂ ಹೊರಡುವ ಸಿದ್ಧತೆಯಲ್ಲಿದ್ದರೆ ಆಯಿತು" ಎಂದು ಭೀಮಣ್ಣ ತನ್ನ ನಿರ್ಧಾರವನ್ನೇ ತಿಳಿಸಿದರು

ಮರುದಿನ ಮುಂಜಾನೆ ನಡೆದದ್ದೂ ಎಣಿಸಿದಂತೆಯೇ ಆಯಿತು. ರಾಧಕ್ಕನನ್ನು ಕರೆದೊಯ್ಯುವ ಸಮಾಚಾರವನ್ನು ಕೇಳಿದೊಡನೆ ಸೀತಾಬಾಯಿಯವ

ರಂತೂ ಭೂಮ್ಯಾಕಾಶಗಳನ್ನು ಒಂದು ಮಾಡಿದರು. ರಾಮರಾಯರು ಯಾವ ಜವಾಬುದಾರಿಯನ್ನೂ ತನ್ನ ಮೇಲೆ ತೆಗೆದುಕೊಳ್ಳದೆ ಎಲ್ಲವೂ ತಮ್ಮ ಹೆಂಡತಿಯನ್ನು ಕೂಡಿರುವಂತೆ ಮಾತನಾಡಿ ಪಾರಾದರು. ಒಳಗಿನಿಂದ ಸಿಟ್ಟು ಪುಟದೇಳುತ್ತಿದ್ದರೂ ಭೀಮಣ್ಣನವರು ಸಮಾಧಾನದ ದನಿಯಲ್ಲಿಯೇ ಹೇಳಿದರು:

"ಆಕೆಯೂ ನಮ್ಮಲ್ಲಿಗೆ ಬಂದು ಹೋಗಿ ಮೂರು ವರ್ಷದ ಮೇಲೆ ಆಗಿ ಹೋಯಿತು. ಅಲ್ಲದೆ ನಮ್ಮಲ್ಲಿಯೂ ಏನೋ ಅಡಚಣೆ, ಅನಾನುಕೂಲ. ಮಾಡುವವರು ಮನೆಯಲ್ಲಿ ಯಾರೂ ಇಲ್ಲ...."

"ಹೌದು, ಎಲ್ಲರಿಗೂ ತಮ್ಮ ತಮ್ಮ ಅಡಚಣೆ. ನಮ್ಮ ಅಚಡಣೆಗೆ ಮಾತ್ರ ಯಾರೂ ಇಲ್ಲ" ಎಂದು ಸೀತಾಬಾಯಿಯವರು.

"ಹೋಗಿ ಬರಲಿ ಬಿಡೇ.ಅವರಿಗೂ ಬೇಸರವಿಲ್ಲವೆ?"ಎಂದು ರಾಮರಾಯರು ಭೀಮಣ್ಣನವರಿಗೆ ಸೇರಿಕೆಯಾಗಲೆಂದು ಹೇಳಿದರು – ಮನಸ್ಸಿನಲ್ಲಿದ್ದುದು ಬೇರೆಯಾಗಿದ್ದರೂ.

"ಹೋಗಲಿ. ನಾನೆಲ್ಲೀಗ ಬೇಡ ಎನ್ನುತ್ತೇನೆ ? ಅಲ್ಲದೆ ಬೇಡ ಎಂದರೆ ಕೇಳುವವರಾದರೂ ಯಾರು ? ಈ ಮನೆಯಲ್ಲಿ ನನ್ನದು ನಡೆಯಬೇಕಾದದ್ದೂ ಅಷ್ಟರಲ್ಲಿಯೇ ಇದೆ" ಎಂದು ಸೀತಾಬಾಯಿ ಸಿಡಿಮಿಡಿಗೊಂಡರು—ನಿಷ್ಕಾರಣವಾಗಿ ಸೋಗಿನ ಕಣ್ಣೀರೂ ಬಂದಿತು. ರಾಮರಾಯರಿಗೆ ಹೆಂಡತಿಯನ್ನು ಸಮಾಧಾನಪಡಿಸದೆ ಬೇರೆ ಗತಿ ಉಳಿಯಲಿಲ್ಲ.

"ಈಗೇನಾದದ್ದು ಅಂಥಾದ್ದು ? ಸುಮ್ಮನಾಗಬಾರದೆ ? ಯಾವ ಮಾತಿಗೂ ಇದೇ ತರಹ..."

"ಹೌದು. ಯಾವ ಮಾತಿಗೂ ಇದೇ ತರಹ. ಅಷ್ಟು ಕೆಟ್ಟವಳೇ ಗಂಟು ಬಿದ್ದಿದೇನೆ. ನನ್ನ ಹಣೆಬರಹ. ನೀವೇನು ಮಾಡೀರಿ ? ಎಷ್ಟು ಜೀವ ತೇದು ಮಾಡಿದರೂ ಮತ್ತೆ ಈ ಮಾತು. ಯಾವ ಮಾತಿಗೂ ಇದೇ ತರಹ ಅಂತೇ " ಎಂದು ಸೀತಾಬಾಯಿಯವರು ಒಳಗಡೆ ಹೋಗಿ ನಡುಮನೆಯಲ್ಲಿ ಮೂಲೆಹಿಡಿದುಬಿಟ್ಟರು. ರಾಧಕ್ಕನ ಸ್ಥಿತಿ ವಿಚಿತ್ರವಾಗಿತ್ತು. ಸೀತಾಬಾಯಿಯ ಮಾತಿನಲ್ಲಿ ಯಾವುದೂ ಅನಿರೀಕ್ಷಿತವಾಗಿರಲಿಲ್ಲವಾದರೂ ಈ ಎಲ್ಲ ಹಗರಣಕ್ಕೆ ತಾನೇ ಕಾರಣ ಎಂದು ಹಳಿಹಳಿಯೆನಿಸಿತು. ಆದರೆ ತನ್ನ ನೆಗೆಣ್ಣಿ ನಿಷ್ಕಾರಣವಾಗಿ ಮಾತು ಬೆಳೆಸುತ್ತಿದ್ದಳೆಂಬುದನ್ನು ನೆನೆದಾಗ ರಾಧಕ್ಕನಿಗೆನಿಸಿತು, ತಾನು ಮಾಡಿದ್ದೇನು ! ಕರೆದುಕೊಂಡು ಹೋಗುತ್ತೇನೆಂದವರಿಗೆ ಸುಸೂತ್ರವಾಗಿ "ಆಗಬಹುದು" ಎಂದಿದ್ದರೆ ಮಾತೇ ಮುಗಿದು ಹೋಗುತ್ತಿತ್ತು.

ತಾನೆಂದರೆ ಈಕೆಯು ಊಳಿಗದ ಆಳಂತೂ ಅಲ್ಲವಲ್ಲ ? ಎಂದು ಸಮಾಧಾನ ತಂದುಕೊಂಡರು.

ಮೂರು ನಾಲ್ಕು ನಿಮಿಷ ಎಲ್ಲರೂ ಸ್ತಬ್ಧರಾದರು. ಯಾರು ಏನು ಮಾತನಾಡಬೇಕೆಂಬುದೇ ತಿಳಿಯದೆ ಎಲ್ಲರೂ ಸುಮ್ಮನಾಗಿದ್ದರೂ ಯಾರಾದರು ಮಾತನಾಡಿ ಎಲ್ಲರಿಗೂ ಅಸಹನೀಯವಾದ ನೀರವತೆಯನ್ನು ಮುರಿಯ ಬೇಕೆಂದು ಎಲ್ಲರಿಗೂ ಅನಿಸುತ್ತಿತ್ತು. ಕೊನೆಗೆ ಭೀಮಣ್ಣನೇ ಧೈರ್ಯವಾಗಿ, ಯಾರಿಗೊ – ಎಲ್ಲರಿಗೂ— ಕೇಳಿದರು:

"ಹಾಗಾದರೆ ಕೊನೆಗೆ ಏನಾದಂತಾಯಿತು ?" ಎಂದು.

ಆ ಪ್ರಶ್ನೆಯಿಂದ ಕೋಣೆಯಲ್ಲಿಯ ಶಾಂತತೆಯ ಅರಿವು ಮಾತ್ರ ಎಲ್ಲ ರಿಗೂ ಆಯಿತು. ಉತ್ತರವೇನೂ ಬರಲಿಲ್ಲ. ರಾಮರಾಯರಿಗೆ ಉಭಯ ಸಂಕಟ. ಒಂದೆರಡು ನಿಮಿಷ ಯೋಚಿಸಿ ಕೊನೆಗೆ ಅವರೇ ಕೇಳಿದರು.

"ಇನ್ನೂ ಒಂದು ಹತ್ತು ಹದಿನೈದು ದಿವಸ ಬಿಟ್ಟು ಅವರು ಬಂದರೆ ಆಗದೆ ?" ಎಂದು.

ರಾಮರಾಯರ ಮಟ್ಟಿಗೆ ಅದು ಮಧ್ಯಮ ಮಾರ್ಗವಾಗಿತ್ತು. ಆದರೆ ಭೀಮಣ್ಣನವರಿಗೆ ಉತ್ತರ ಹೇಳುವುದು ಕಷ್ಟವಾಯಿತು. ಅವರು ಸುಮ್ಮನಾದ ದ್ದನ್ನು ನೋಡಿ ಒಂದು ಕ್ಷಣ ರಾಧಕ್ಕನಿಗೆ ಕಳವಳವಾಯಿತು. ಆದರೆ ಈ ಬಿಕ್ಕಟ್ಟನ್ನು ಸೀತಾಬಾಯಿಯವರೇ ತಟ್ಟನೆ ಬಿಡಿಸಿದರು.

"ಹೋಗುವುದೇ ಆದರೆ ಈಗೇನು, ಇನ್ನು ಹದಿನೈದು ದಿವಸಕ್ಕೇನು ? ನನ್ನ ಸಲುವಾಗಿ ಯಾರೂ ಮನಸ್ಸಿಲ್ಲದೆ ಇದ್ದುಕೊಂಡು ಉಪಕಾರ ಮಾಡಬೇಕಿಲ್ಲ. ಬೇಕಾದವರು ಹೋಗಲಿ. ಬೇಕಾದರೆ ಈಹೊತ್ತೇ ಹೋಗಲಿ...."

"ನೀವು ಹೀಗೆ ಮಾತನಾಡಿದರೆ ಹೋಗುವವರಾದರೂ ಹೇಗೆ ಹೊರಡ ಬೇಕು, ನೀವೆ ಹೇಳಿರಿ—" ಎಂದು ಭೀಮಣ್ಣ ಸೋಗಿನ ಉಪಚಾರಕ್ಕೆ ಮೊದಲುಮಾಡಿದರು.

"ಅದಕ್ಕೇನಂತೆ ? ಕರೆಯಲಿಕ್ಕೆಂದೇ ನೀವು ಬಂದಿದ್ದೀರಿ. ಹೋಗಲಿಕ್ಕಂತೂ ಅವರು ಯಾವಾಗಲೂ ಸಿದ್ಧ. ಆಂದಮೇಲೇನು ? ನಡುವೆ ಕೆಟ್ಟತನ ಮಾತ್ರ ನನ್ನ ಪಾಲಿಗೆ. ಇಲ್ಲಿ ಇದ್ದಾದರೂ ಅವರು ಮಾಡುವುದೇನು ? ಬೇಕಾದಾಗ ಹೋಗಲಿ...." ಎಂದು ಸೆಡವಿನಿಂದಲೇ ಹೇಳಿದರು.

ಭೀಮಣ್ಣ ತೀರನೊಂದುಕೊಂಡರು. ಮುಂಜಾನೆಯಿಂದ ಸಾಯಂಕಾಲದ ವರೆಗೆ ಆಳಿಗಿಂತಲೂ ಹೆಚ್ಚಾಗಿ ದುಡಿದು ದೇಹ ಸವೆಯಿಸುತ್ತಿದ್ದ ತಂಗಿಗೆ

ಪುರಸ್ಕಾರವನ್ನು ನೆನೆದು ಸಂಕಟಪಟ್ಟ. ರಾಮರಾಯರಂತೂ ಏನನ್ನೂ ಹೇಳಲಾರದವರಾಗಿದ್ದರು. ಹೆಂಡತಿಯನ್ನು ಸಮಾಧಾನ ಮಾಡುವುದು ಹೇಗೆ ಎಂಬ ಒಂದೇ ಒಂದು ಯೋಚನೆ ಅವರನ್ನು ಕಾಡುತ್ತಿತ್ತು. ಈ ಯೋಚನೆಯಲ್ಲಿಯೇ ಅವರು ಅಲ್ಲಿಂದ ಎದ್ದು ನಡುಮನೆಯ ಕಡೆ ನಡೆದರು. ಭೀಮಣ್ಣ ಪಡಸಾಲೆಗೆ ತೆರಳಿದರು. ಮಾಧವ ಹೊರಗೆ ಹೊರಡುವ ಸಿದ್ಧತೆಯಲ್ಲಿದ್ದುದನ್ನು ನೋಡಿ,

"ಇದೇನು ? ಇದೀಗ ಒಂಬತ್ತೂವರೆ. ಈಗಲೇ ಹೊರಟುಬಿಟ್ಟೆಯಾ ?" ಎಂದು.

"ಹುಂ. ಇಂದು ನಮ್ಮಲ್ಲಿ ವಾರ್ಷಿಕೋತ್ಸವ. ಕೈತುಂಬ ಕೆಲಸ."

"ಹಾಗಾದರೆ ಊಟ ?"

"ಆಯಿತು ! ಊಟ ಮಾಡುತ್ತ ಕುಳಿತರೆ ಹನ್ನೆರಡು ಗಂಟೆಯಾಗುತ್ತದೆ. ಅಲ್ಲಿಯೇ ಏನಾದರೂ ಫಲಹಾರ ತೆಗೆದುಕೊಳ್ಳುತ್ತೇನೆ."

"ತಿರುಗಿ ಬರುವುದು ಯಾವಾಗ !"

"ನೋಡಬೇಕಪ್ಪ. ಸಂಜೆಗೆ ಕಾರ್ಯಕ್ರಮ. ಎಲ್ಲವನ್ನೂ ಮುಗಿಯಿಸಿ ಬರಬೇಕಾದರೆ ಏನಿಲ್ಲೆಂದರೂ ಹತ್ತು ಗಂಟೆಯಾಗಬಹುದು."

"ರಾತ್ರಿ ಹತ್ತು ಗಂಟೆಯೆ ?"

"ಹೂಂ...ಯಾಕೆ?"

"ಸಾಧ್ಯವಾದರೆ ಇಂದು ಸಾಯಂಕಾಲ ರೈಲಿನಿಂದ ಹೊರಡಬೇಕೆಂದಿದ್ದೆ."

"ಇಂಥದೇನವಸರ ? ನಾಳೆ ಹೊರಡುವಿಯಂತೆ. ಇಂದು ಸಾಯಂಕಾಲ ಕಾಲೇಜಿನ ಕಡೆಗೆ ಬಂದು ಬಿಡು...."

"ಬೇಡಪ್ಪ. ನಮಗೇನು ಮಾಡುವುದು, ನಿಮ್ಮ ಕಾಲೇಜು ! ಹಳ್ಳಿಯ ಮಿಕ ಎಲ್ಲಿಯದು ಎಂದು ನಕ್ಕಾರು ನಿಮ್ಮ ಹುಡುಗರು! ...."

"ಒಳ್ಳೇ ಚೇಷ್ಟೆಮಾಡುವವ ಬಿಡು ! ಆರು ಆರೂವರೆಗೆ ಬರುತ್ತಿಯಾ?"

"ನಿಶ್ಚಯವಾಗಿ ಹೇಳಲಾರೆ, ಬಂದರೆ ಬಂದೆ. ಊರಲ್ಲಿಯೂ ಹೋಗಬೇಕಾಗಿದೆ. ಆಪತಿಯಲ್ಲಿ ಒಂದಿಷ್ಟು ಕೆಲಸವೂ ಇದೆ. ಕೆಲಸ ಬೇಗ ಮುಗಿದರೆ ಬರುವೆ...."

"ಅಮ್ಮ ಬರುವುದು ಏನಾಯಿತು?"

"ಆಗುವುದೇನು ? ಕೇಳಲಿಲ್ಲವೆ ಇಷ್ಟು ಹೊತ್ತು?"

"ಕೇಳಿದೆ. ಆದರೆ ಕೊನೆಗೆ?"

"ಕೊನೆಗೇನು? ಅವರು ಹೀಗೇಂದಾಕೆನ್ನುವುದನ್ನು ಸಾವು ನಿನ್ನೆಯೇ ಮಾತನಾಡಿದ್ದಿಲ್ಲವೆ? ಹೊರಡುವುದೆಂದರೆ ಹೊರಟುಬಿಡುವುದು, ಅಷ್ಟೆ!"

"ಗುಡ್!...."

ಒಳಗಿನಿಂದ ರಾಮರಾಯರು ಬಂಮುದ್ದರಿಂದ ಮಾತು ಅಲ್ಲಿಗೆ ನಿಂತಿತು. ಆದರೆ ಮಾಧವನ ಕೊನೆಯ ಒಂದೇ ಒಂದು ಮಾತಿನಲ್ಲಿ ಅವನಿಗಾದ ಸಮಾಧಾನ ವ್ಯಕ್ತವಾಗುತ್ತಿತ್ತು. ಒಂದು ಜೀವವಾದರೂ ಜೀವನ ನರಕ ದಿಂದ ಪಾರಾಯಿತು ಎಂಬ ಸಮಾಧಾನವಿತ್ತು, ಆತನ ಶಬ್ದದಲ್ಲಿ. ಆತ ಬೈಸಿಕಲ್ ತೆಗೆದುಕೊಂಡು ಹೊರಗೆಹೊರಟದ್ದನ್ನು ನೋಡಿಯೂ ರಾಮ ರಾಯರು ಯಾಕೆ, ಎಲ್ಲಿ? ಎಂದು ಏನನ್ನೂ ವಿಚಾರಿಸದೆ ಇದ್ದದ್ದು ಭೀಮಣ್ಣ ನವರಿಗೆ ವಿಚಿತ್ರವೆನಿಸಿತು. ಅದಕ್ಕೆ ಬದಲಾಗಿ ಅವರ ಬಾಯಿಂದ ಬಂದ ಮಾತು ಎಂದರೆ: "ನೋಡಿದಿರಾ? ಯಾರೂ ಹೇಳುವವರು ಕೇಳುವವರು ಇಲ್ಲದ ಹಾಗೆ ಬೇಕಾದ ಹಾಗೆ ಹೊರಟುಹೋಗುತ್ತಾನೆ. ಹೋಗುವುದು ಹೀಗೆಯೇ, ಬರುವುದೂ ಹೀಗೆಯೇ" ಎಂದು. ಭೀಮಣ್ಣ ಯಾವ ಉತ್ತರ ವನ್ನೂ ಹೇಳಲಿಲ್ಲ.

## 3

ಕಾಲೇಜಿನ ಸಭಾಂಗಣದಲ್ಲಿ ಉತ್ಸವಕ್ಕಾಗಿ ರಂಗಸ್ಥಳದ ಏರ್ಪಾಡಾಗಿತ್ತು. ಎಲ್ಲ ಕಡೆಯಲ್ಲಿಯೂ ಚೊಕ್ಕಟ ವ್ಯವಸ್ಥೆ. ವಿದ್ಯಾರ್ಥಿ ವಿದ್ಯಾರ್ಥಿನಿಯರು ಒಬ್ಬೊಬ್ಬರಾಗಿ ಬರತೊಡಗಿದರು. ಕಾರ್ಯಕ್ರಮ ಆರೂವರೆಗೆಂದು ಗೊತ್ತಾ ಗಿತ್ತು. ವೇಳೆ ಆರೂವರೆಗೆ ಸಮೀಪಿಸುತ್ತಿದ್ದರೂ ಹೇಳಿಕೊಳ್ಳುವ ಹಾಗೆ ಜನಸಂದಣಿಯಿರಲಿಲ್ಲ. ಮುಖ್ಯ ಅತಿಥಿಗಳು ಹೊರತಾಗಿ ಈ ಕಡೆ ಯಾರ ಲಕ್ಷ್ಯವೂ ಇದ್ದಂತಿರಲಿಲ್ಲ. ಕಾರ್ಯಕರ್ತರಿಗೆ ಇದರಲ್ಲಿ ಹೊಸದೇನೂ ಇರಲಿಲ್ಲ. ಕಾರ್ಯಕ್ರಮದ ಪಟ್ಟಿಯಲ್ಲಿ ಮೊದಲು ಭಾಷಣಗಳು, ಪಾರಿತೋಷಕ ವಿತರಣಾದಿಗಳು, ಕೊನೆಯಲ್ಲಿ ಮನರಂಜನೆ, ಎಂದು ತೋರಿಸಿದ್ದರಿಂದ ಜನ ಬರುವುದು ಭಾಷಗಳು ಮುಗಿದ ಮೇಲೆಯೇ ಎಂಬುದು ಮಾಧವನಂತೆ ಸಂಘದ ಅಧ್ಯಕ್ಷರಿಗೂ ಗೊತ್ತು. ಆದರೆ ಇದನ್ನು ಮುಖ್ಯ ಅತಿಥಿಗಳಿಗೆ ಹೇಳು ವುದು ಹೇಗೆ? ಹೀಗೆಂದುಕೊಂಡು ಹಾಗೂ ಹೀಗೂ ಎಲ್ಲಿಲ್ಲದ ವಿಷಯಗಳನ್ನೆತ್ತಿ ಅಧ್ಯಕ್ಷರು ಅತಿಥಿಗಳನ್ನು ಹರಟೆಗೆ ಸೂಕಿ ಕಾಲದೂಡುತ್ತಿರುವಂತಿತ್ತು. ಬಂದು ಕುಳಿತುಕೊಂಡಿದ್ದ ವಿದ್ಯಾರ್ಥಿಗಳಿಗೆ ಮಾತ್ರ ವೇಳೆ ಕಳೆಯುವುದು ಕಷ್ಟ

ನಾದಂತಿತ್ತು. ಆದ್ದರಿಂದ ಆಗಾಗ ಸಿಕ್ಕ ಸಂದರ್ಭಗಳನ್ನು ಅವರೇನು ಪುಕ್ಕಟೆ ಹೋಗಗೊಡುತ್ತಿರಲಿಲ್ಲ. ವಿದ್ಯಾರ್ಥಿನಿಯೊಬ್ಬಳು ಒಳಗೆ ಬಂದ ಕೂಡಲೆ ವಿದ್ಯಾರ್ಥಿವೃಂದವೆಲ್ಲವೂ ಆಕೆಗೆ ಸ್ವಾಗತದ ಸುರಿಮಳೆಮಾಡಿ ಆಕೆ ಮುದ್ದೆ ಯಾಗಿ ಎಲ್ಲಿಯಾದರೊಂದು ಕುರ್ಚಿ ಬೇಗನೆ ಸಿಕ್ಕೀತೆ ಎಂದು ಕಾತರಗೊಳ್ಳು ವಂತೆ ಮಾಡುತ್ತಿದ್ದರು. ನಡುನಡುವೆ ಪ್ರಾಧ್ಯಾಪಕ ವರ್ಗದಿಂದ ಯಾರಾ ದರೂ ಬಂದರೆ ಅವರಿಗೂ ಅವರವರ ಯೋಗ್ಯತೆ, ಅಯೋಗ್ಯತೆಗಳಿಗೆ ಸರಿ ಯಾದ ಸನ್ಮಾನವನ್ನು ಒದಗಿಸುತ್ತಿದ್ದರು. ಅವರವರಿಗೆ ವಿದ್ಯಾರ್ಥಿವೃಂದವು ದಯಪಾಲಿಸಿದ ಬಿರುದಾವಲಿಯ ಪ್ರಯೋಗವು ನಿಃಸ್ಪೃಹವಾಗಿ ನಡೆಯು ತ್ತಿತ್ತು ! ನಡುನಡುವೆ ವಿದ್ಯಾರ್ಥಿನಿಯರ ವಿಭಾಗದಲ್ಲಿಯ ಸ್ಥಿತಿಗತಿಗಳೇನೆಂಬು ದನ್ನು ತಿಳಿಯಲು ಕಾಗದ ವಿಮಾನಗಳ "ರಿಕನಾಯಿಸನ್ಸ್" ನಡೆಯುತ್ತಿತ್ತು. ಈ ವಿಮಾನಗಳಿಂದ ಸರಿಯಾದ ಸಮಾಚಾರ ದೊರಕದೆ ಇದ್ದಾಗ ಅಚ್ಚು ಕಟ್ಟಾಗಿ ವೇಷಭೂಷಣ ಮಾಡಿದ ವಿದ್ಯಾರ್ಥಿಗಳು ಯಾವ ಕೆಲಸವಿಲ್ಲ ದೆಯೂ ಆ ವಿಭಾಗದೆದುರಿನಲ್ಲಿ ಅತ್ತಿತ್ತ ಅಡ್ಡಾಡಿದ್ದೂ ಉಂಟು. ಇಂಥವರಿ ಗಂತೂ ಎರಡೂ ಕಡೆಯಿಂದ ಕೇಕೆ-ಕೂಗಾಟಗಳ ಉತ್ತೇಜನ !

ಕೊನೆಗೊಮ್ಮೆ ಕಾರ್ಯಕ್ರಮಕ್ಕೆ ಪ್ರಾರಂಭವಾಯಿತು— ನಾಡಗೀತೆ ಯೊಡನೆ. ಐದುಜನ ವಿದ್ಯಾರ್ಥಿನಿಯರು "ಉದಯವಾಗಿದೆ" ಎಂಬ ಮಾರ್ಪಾಡನ್ನು ಮಾಡಿ, ನಾಡಹಾಡನ್ನು ಹೇಳುತ್ತಿದ್ದರು ಐದುಜನ ಸೇರಿ ಆ ಹಾಡನ್ನು ಹೇಳಿದ್ದು ಅದೇ ಮೊದಲಸಲವಾಗಿರಬೇಕೆನ್ನಿಸುವಷ್ಟು ಹೊಂದಿಕೆ ಅವರ ಆ ಹಾಡುಗಾರಿಕೆಯಲ್ಲಿ ಕ ಂ ಡು ಬ ರು ತ್ತಿ ತ್ತು. ಪಕ್ಕ ವಾದ್ಯವಾಗಿದ್ದ ಹಾರ್‌ಮೋನಿಯಂ, ಸಂಗೀತಕ್ಕೂ ತನಗೂ ಸಂಬಂಧವೇನು ಎನ್ನುವಂತೆ ತನ್ನ ಮಾರ್ಗದಲ್ಲಿಯೇ ನಡೆದಿತ್ತು ಅದಕ್ಕೆಯೇ, ಹಾಡನ್ನು ಹಾಡಿದರೆನ್ನುವುದಕ್ಕಿಂತ, ಹೇಳಿದರು ಎನ್ನುವುದೇ ಸರಿಯಾದದ್ದು. ಅಪಸ್ವರ ಕ್ಕೊಮ್ಮೆ ಚಪ್ಪಾಳೆ, ಹೊಂದಿಕೆ ತಪ್ಪಿದಾಗೊಮ್ಮೆ ಕೇಕೆ, ಈ ರೀತಿಯಲ್ಲಿ ಸನ್ಮಾನಿತರಾಗಿ ಹಾಡು ಯಾವಾಗ ಮುಗಿದೀತೆಂದು ಹಾತೊರೆಯುತ್ತಿದ್ದ ವಿದ್ಯಾರ್ಥಿನಿಯರು ಕೊನೆಗೊಮ್ಮೆ ಗೀತೆಯನ್ನು ಮುಗಿಸಿದರು.

ಸ್ವಾಗತ ಗೀತದ ನಂತರ ಭಾಷಣಗಳ ಸುರಿಮಳೆ ! ವೇದಿಕೆಯ ಮೇಲೆ ಮುಖ್ಯ ಅತಿಥಿಗಳು, ಅವರ ಬದಿಯಲ್ಲಿ ಸಂಘದ ಅಧ್ಯಕ್ಷರು, ಇನ್ನೊಂದು ಬದಿಯಲ್ಲಿ ಸ್ಥಳೀಯ ಕಾಂಗ್ರೆಸ್ ಕಾರ್ಯಕರ್ತರೊಬ್ಬರು ಉದ್ಘಾಟಕರಾಗಿ ಬಂದವರು, ಕೊನೆಯಲ್ಲಿ ಕಾರ್ಯದರ್ಶಿ ಈ ರೀತಿ "ವಿರಾಜಮಾನ"ರಾಗಿದ್ದರು.

ಅಲ್ಲದೆ ಮುಖ್ಯ ಅತಿಥಿಗಳ ಪರಿಚಯವನ್ನು ಮಾಡಿಕೊಡುವ ಕೆಲಸವನ್ನು ಒಪ್ಪಿಕೊಂಡ ವಿದ್ಯಾರ್ಥಿಯೊಬ್ಬ ಅತ್ತಿತ್ತ ಸುಳಿದಾಡುತ್ತಿದ್ದ.

ಅಧ್ಯಕ್ಷರು ಪ್ರಾಸ್ತಾವಿಕ ಭಾಷಣಕ್ಕೆಂದೆದ್ದರು. ಸ್ವಾಗತದ ಎರಡು ಮಾತುಗಳನ್ನು ಹೇಳುತ್ತೇನೆಂದವರು ಸುಮಾರು ಅರ್ಧಗಂಟೆ ಪ್ರಪಂಚವನ್ನು ಸುತ್ತಿಬಂದರು. ಅವರ ಭಾಷಣ ಮುಗಿಯುತ್ತಿರುವಾಗಲೇ "ಸ್ವಾಗತವನ್ನಂತೂ ಹೊಂದಿದ್ದಾಯಿತು. ಹೊರಗಡೆ ಹೋಗಿ ಸಿಗರೇಟಾದರೂ ಸೇದಿ ಬರುವಾ" ಎಂದು ವಿದ್ಯಾರ್ಥಿಗಳ ಸಣ್ಣ ಗುಂಪೊಂದು ಹೊರಗೆ ಹೋಯಿತು. ಸ್ವಾಗತ ಭಾಷಣ ಸಭಿಕರಿಗೆ ಬೇಸರವಾಗಿದೆ ಎಂಬುದನ್ನು ತಿಳಿದ ಉದ್ಘಾಟಕರು ತಾವು ಮೂರು ನಿಮಿಷಗಳಿಗಿಂತಲೂ ಹೆಚ್ಚಾಗಿ ವೇಳೆ ತೆಗೆದುಕೊಳ್ಳುವುದಿಲ್ಲ ವೆಂದು ಆಶ್ವಾಸನೆ ಕೊಟ್ಟು, ಮೂವತ್ತೈದು ನಿಮಿಷಗಳವರೆಗೆ ಉದ್ಘಾಟನಾ ವನ್ನು ಮಾಡಿಯೇ ಮಾಡಿದರು ! ಕೆಲವು ವಿದ್ಯಾರ್ಥಿಗಳಿಗಂತೂ ಈ ಉದ್ಘಾ ಟನೆ ಮುಗಿಯುವ ಲಕ್ಷಣ ಕಾಣಲಿಲ್ಲವಾದ್ದರಿಂದ ಕುಳಿತಲ್ಲಿಯೇ ಬೇರೊಂದು ಚರ್ಚೆಗೆ ಮೊದಲು ಮಾಡಿದರು. ಈ ಚರ್ಚೆಗೆ ಮೊದಲಾದಾಗ ಉದ್ಘಾಟನೆ ಮುಗಿಯಿತು. ತಾವು ಹೇಳಬೇಕಾದುದು ಬೇಕಾದಷ್ಟಿದ್ದರೂ ಮೂರುನಿಮಿಷ ಗಳ ಮಿತಿಯ ಮೂಲಕ ತಾವು ಅಲ್ಲಿಗೆ ನಿಲ್ಲಿಸುವುದಾಗಿ ಹೇಳಿದಾಗ ವಿದ್ಯಾರ್ಥಿ ಗಳು ಜೋರಾಗಿ ಚಪ್ಪಾಳೆ ತಟ್ಟಿದರು. ಉದ್ಘಾಟಕರು ಸಮಾಧಾನ ಹೊಂದಿ ಬೊಜ್ಜುಹೊಟ್ಟೆಗಿಂತಲೂ ಹೆಚ್ಚಾಗಿ ಎದೆಯನ್ನುಬ್ಬಿಸಿ ಕುರ್ಚಿಯಲ್ಲಿ ಉದ್ದ ವಾಗಿ ವೈಚೆಲ್ಲಿದರು. ಅಂತೂ ಒಮ್ಮೆ ಭಾಷಣ ಮುಗಿಯಿತೆಂದು ನೂರಾರು ಜನ ನಿಟ್ಟುಸಿರೆಳೆದರು. ಈ "ವಿಸ್ತಾರಭಯ"ವಿದ್ದುದರಿಂದಲೇ ಮಾಧವ ತನ್ನ ವರದಿಯನ್ನು ಸಾಕಷ್ಟು ಚಿಕ್ಕದಾಗಿಯೇ ಬರೆದಿದ್ದ. ಒಂದೆರಡು ನಿಮಿಷ ಗಳಲ್ಲಿಯೇ "ವರದಿವಾಚನ"ವನ್ನು ಮುಗಿಸಿ ಪರಿಚಯಕಾರನಿಗೆ ಎಡೆಕೊಟ್ಟ. ಪರಿಚಯ ಪ್ರಾರಂಭವಾಯಿತು "ನಿಜವಾಗಿಯೂ ಅತಿಥಿಗಳ ಪರಿಚಯದ ಅಗತ್ಯವೇ ಇಲ್ಲ" ಎಂಬ ಮಾತಿನಿಂದ. ಆದರೂ ಸಂಪ್ರದಾಯ ನಡೆಯಲೇ ಬೇಕೆಂಬ ಹಟದಿಂದ ಉಪಚಾರದ ಮಾತಿಗೆ ಮೊದಲಾಯಿತು. ಅತಿಥಿಗಳು ಬರೆದ ಪುಸ್ತಕಗಳ ವಿಮರ್ಶೆಯಾಯಿತು. ಅತಿಥಿಗಳಿಗಿಂತ ಹೆಚ್ಚಾಗಿ ತನ್ನ ವಿಷಯಕ್ಕೆಯೇ ಮಾತು ನಡೆಯಿತು. ಇಂದ್ರಚಂದ್ರರೊಡನೆ ಅತಿಥಿಗಳ ಹೋಲಿಕೆಯಾಯಿತು. ಇಂಥವರು ಸಂಘಕ್ಕೆ ಬಂದದ್ದು ಎಲ್ಲರ ಸುದೈವ ವೆಂದು ಘೋಷಿಸಿಯೂ ಆಯಿತು. ಈ ಮಾತಿನ ಭಾರಕ್ಕೆ ದಣಿದು ಅತಿಥಿ ಗಳು ಮುಖ ತಗ್ಗಿಸಿದ್ದರು. ಅದರ ಮೇಲಿಂದ ಅವರು ಎಷ್ಟು ವಿನಯಶೀಲರು

ಎಂಬುದನ್ನು ವರ್ಣಿಸಿಯಾಯಿತು. ಇಷ್ಟಾದರೂ ಕೊನೆಯಲ್ಲಿ ಎಷ್ಟು ಹೇಳಿದರೂ ತೀರದು ಎಂಬ ಅಸಮಾಧಾನದ ಮಾತಿನಲ್ಲಿಯೇ ಪರಿಚಯ ಮುಗಿಯಿತು! ಕುಳಿತವರಿಗೆ ಮಾತ್ರ ಯಾವ ಪರಿಚಯವೂ ಆಗಲಿಲ್ಲ. ಮುಖ್ಯ ಅತಿಥಿಗಳು ಮಾತ್ರ ಆಗಾಗ ನಸುನಗುತ್ತಿದ್ದರು—"ಈಗಾಗಲೇ ಒಂದೂವರೆ ಗಂಟೆಯಾಯಿತು. ನನ್ನ ಕೆಲಸ ಎಷ್ಟೋ ಸುಲಭವಾಯಿತು—" ಎಂದು. ಒಂದೂವರೆ ಗಂಟೆಯಾಯಿತೆಂದಮೇಲೆ ಮನರಂಜನೆಯ ವೇಳೆಯಾಯಿತೆಂದು ಬಂದ ವಿದ್ಯಾರ್ಥಿಗಳು ಅತಿಥಿಗಳ ಭಾಷಣವೇ ಇನ್ನೂ ಆಗಿಲ್ಲವೆಂಬುದು ತಿಳಿದಾಗ ಕಳವಳಗೊಂಡರು!

ಮುಖ್ಯ ಅತಿಥಿಗಳು ಭಾಷಣಕ್ಕೆಂದು ಎದ್ದು ನಿಂತರು. ವಿದ್ಯಾರ್ಥಿವೃಂದ ಚಪ್ಪಾಳೆ ತಟ್ಟಿತು-ನಿರುಪಾಯವಾಗಿ! ಅತಿಥಿಗಳು ಸುತ್ತಲಿನ ಪರಿಸ್ಥಿತಿಯನ್ನು ತಿಳಿಯಬಲ್ಲ ಅನುಭವಸ್ಥರಾಗಿದ್ದರು. ತಾವೂ ಒಂದು "ಉದ್ದಾಮ" ಭಾಷಣವನ್ನು "ಬಿಗಿದು" ಕೃತಕೃತ್ಯರೆಂದೆನಿಸಿಕೊಳ್ಳಬೇಕಾಗಿರಲಿಲ್ಲ ಅವರಿಗೆ. ಅಂತೆಯೇ ನಯವಾಗಿ ನಗೆಯಾಟಕ್ಕೆ ಮೊದಲು ಮಾಡಿದರು. "ಸಭಿಕರೆ—ನೀವು ದಣಿದಿದ್ದೀರಿ [ನಗು] ತುಂಬ ದಣಿದಿದ್ದೀರಿ. ನನಗೆಗೊತ್ತು. [ಮತ್ತೆ ನಗು] ಆದ್ದರಿಂದ ಮೂರೆಂದು ಹೇಳಿ ಮೂರುಸಾವಿರ ಮಾತುಗಳನ್ನು ಹೇಳುವುದಿಲ್ಲ." ನಡುವೆಯೇ ಯಾವನೋ ವಿದ್ಯಾರ್ಥಿ "ನಿಜವಾಗಿಯೂ?" ಎಂದು ಪ್ರಶ್ನೆಯನ್ನು ತೂರಿದ. "ಹೌದು, ನಿಜವಾಗಿಯೂ. ಈಗಾಗಲೇ ಎಷ್ಟೋ ಮಾತುಗಳನ್ನು ಕೇಳಿದ್ದೀರಿ. ಇದಾದಮೇಲೆ ನಡೆಯಲಿದ್ದ ಮನರಂಜನೆಯ ಕಾರ್ಯಕ್ರಮಕ್ಕಾಗಿ ಆತುರಪಡುತ್ತಿದ್ದೀರಿ." ಮತ್ತೆ ನಡುವೆಯೇ ಇನ್ನೊಬ್ಬ ವಿದ್ಯಾರ್ಥಿ "ಹೌದು ಸರ್" ಎಂದು ಕರುಣವಾಗಿ ಒಪ್ಪಿಕೊಂಡ. ಎಲ್ಲ ಕಡೆಯಿಂದಲೂ ಕೇಕೆ ಚಪ್ಪಾಳೆಗಳು. "ಹೀಗೆ ನಿರ್ದಾಕ್ಷಿಣ್ಯವಾಗಿ ಹೇಳಿದ ವಿದ್ಯಾರ್ಥಿಯನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಹೀಗೆಯೇ ಎಲ್ಲರೂ ಇಂದು ನಮಗೆ ಬೇಕಾದುದನ್ನು ಧೈರ್ಯವಾಗಿ ಬೇಡಬೇಕಾಗಿದೆ. ನಮಗೆ ಬೇಕಾದದ್ದು ಯಾವುದೆಂಬುದನ್ನು ಕಣ್ದೆರೆದು ಯೋಚಿಸಿ ತಿಳಿದುಕೊಳ್ಳುವ ಬುದ್ಧಿಯ ಪ್ರಾಮಾಣಿಕತನ ಬೇಕಾಗಿದೆ. ಕೊಟ್ಟದ್ದರಿಂದ ಸಮಾಧಾನ ಹೊಂದುವ ಅಲ್ಪಸಂತೋಷದ ವೃತ್ತಿ ನಮ್ಮ ನಾಡಿಗೆ ಇಂದು ಬೇಡವಾಗಿದೆ...." ಇತ್ಯಾದಿಯಾಗಿ ಮಾತನಾಡಿ ಬೇಸರದ ವಾತಾವರಣವನ್ನು ಕಳೆದರು. ಹೆಚ್ಚಾಗಿ ಅವರು ಮಾತನಾಡಿರದಿದ್ದರೂ ಅವರ ಮಾತಿನ ಸಂಯೋಚಿತವಾದ ರೀತಿ ವಿದ್ಯಾರ್ಥಿವೃಂದವನ್ನು ಸೆರೆಹಿಡಿದಿತ್ತು. ಭಾಷಣ ಮುಗಿದಾಗ ತಟ್ಟಿದ

ಚಪ್ಪಾಳೆ ನಿಜವಾಗಿಯೂ ಕೇಳಿದವರ ಹೃದಯದಲ್ಲಿಯ ಭಾವನೆಗಳಿಗೆ ಪ್ರತೀಕವಾಗಿತ್ತು.

ಮನರಂಜನೆಯ ಕಾರ್ಯಕ್ರಮದ ಪೂರ್ವಸಿದ್ಧತೆಗಳು ನಡೆದವು. ತಂಡ ತಂಡವಾಗಿ ವಿದ್ಯಾರ್ಥಿಗಳು ಬಂದು ಸ್ಥಳಗಳನ್ನು ಆಕ್ರಮಿಸತೊಡಗಿದರು. ಸಭಾಂಗಣ ಉತ್ಸಾಹದಿಂದ ತುಂಬಿ ತುಳುಕುತ್ತಿತ್ತು.

ತೆರೆಯ ಮರೆಯಲ್ಲಿ ಸರೋಜಿನಿ ಸಿದ್ಧವಾಗಿ ಅತ್ತಿತ್ತ ಅಡ್ಡಾಡುತ್ತಿದ್ದಳು. ಪಕ್ಕವಾದ್ಯದವರ ಕೂಡ ಸಂಧಾನ ನಡೆಸಿದ್ದಳು. ಯಾವುದಕ್ಕಾಗಿಯೋ ಮಾಧವ ಅಲ್ಲಿಗೆ ಬಂದ. ಅದುವರೆಗೆ ಹತ್ತು ಕೆಲಸಗಳಲ್ಲಿ ತೊಡಗಿದವನಾದ್ದರಿಂದ ಸರೋಜಿನಿಯ ಕಡೆಗೆ ನೋಡಿರಲೇ ಇಲ್ಲ. ಆಕೆಯನ್ನು ನೋಡಿ ತಟ್ಟನೆ ನಿಂತ—ಬೆಕ್ಕಸ ಬೆರಗಾಗಿ! "ಈಕೆ ಸರೋಜಿನಿಯೇ ?" ಎಂದುಕೊಂಡ. ದಿನದ ಬೆಳಕಿನಲ್ಲಿ ನೋಡಿದಾಗ ಸರೋಜಿನಿ ಸಾಮಾನ್ಯವಾಗಿ ಕಾಣುತ್ತಿದ್ದಳು. ಆದರೆ ಆ ಬಣ್ಣ, ಆ ಬೆಳಕು, ಎರಡೂ ಸೇರಿ ಯಾರನ್ನೂ ಮರುಳು ಹಿಡಿಸುವಂತೆ ಸರೋಜಿನಿಯ ಮುಖಕ್ಕೆ ಚೆಲುವನ್ನು ತಂದು ಕೊಟ್ಟಿದ್ದವು ನೃತ್ಯಕ್ಕೆ ಅನುಕೂಲವಾದ ವೇಷಭೂಷೆ ಬೇರೆ. ಅಂಗಾಂಗಗಳ ಸೌಷ್ಠವವೂ ಎದ್ದುನಿಂತು ಸಂಯಮಿಯನ್ನೂ ಆಹ್ವಾನಿಸುವಂತೆ—ಸೆರೆ ಹಿಡಿದೇ ಹಿಡಿಯುವೆನೆಂದು ಧೈರ್ಯವಾಗಿ ಹೇಳುವಂತೆ—ಸ್ಪಷ್ಟವಾಗಿ ಕಾಣುತ್ತಿತ್ತು. ಮಾಧವ ಒಂದು ಕ್ಷಣ ಮೈಮರೆತ. ತಾನು ಅಲ್ಲಿಗೆ ಯಾತಕ್ಕಾಗಿ ಬಂದಿದ್ದೇನೆಂಬುದರ ಅರಿವೂ ಉಳಿಯಲಿಲ್ಲ. ಮಾಧವ ಬಂದದ್ದನ್ನು ನೋಡಿ ಸರೋಜಿನಿ ಒಂದು ಕುಣಿತದ ಠೀವಿಯಲ್ಲಿಯೇ ಅವನೆಡೆಗೆ ನಗೆದು ಬಂದಳು : "ಇದು ನೋಡು, ನಾನು ಸರೋಜಿನಿ" ಎಂದು ಹೇಳುತ್ತಿರುವಂತೆ. ಮಾಧವನಾದರೂ ಆ ಭಾವವನ್ನೇ ತಿಳಿದವನಂತೆ ಕೇಳಿದ :

"ಸರೋಜಿನಿಯೆಂದರೆ ನೀವೇ ಏನು ?"

"ಸರೋಜಿನಿ ನಾನಲ್ಲ—" ಎಂದು ನಕ್ಕು ಹೇಳಿದಳು.

"ಸ್ಪ್ಲೆಂಡಿಡ್ ಆಗಿದೆ ಮೇಕಪ್ !"

"ಆಗಿದೆಯೆ ?"

"ವಂಡರ್‌ಫುಲ್ ! ಮೇಕಪ್ ಯಾರು ಮಾಡಿದರು ?"

"ಸರೋಜಿನಿ ಎಂತ ಗೆಳತಿಯೊಬ್ಬಳಿದ್ದಾಳೆ, ಆಕೆ."

"ಅವರನ್ನು ನಾನು ಅಭಿನಂದಿಸಬೇಕಾಗಿದೆ. ಎಲ್ಲಿದ್ದಾರೆ ಅವರೀಗ ?"

"ಅವರೀಗ ಸಿಕ್ಕುವಂತಿಲ್ಲ !"

"ಯಾವಾಗ ಸಿಕ್ಕಬಹುದು ?"

"ಕಾರ್ಯಕ್ರಮ ಮುಗಿದನಂತರ !"

"ಅವರನ್ನಷ್ಟು ನನಗೆ ಭೆಟ್ಟಿ ಮಾಡಿಸುತ್ತೀರಾ ?"

"ಓ ಎಸ್. ಅದಕ್ಕೇನಂತೆ?...."

"ನಿಜವಾಗಿಯೂ ?"

"ಖಂಡಿತವಾಗಿ. ಆದರೆ ಒಂದು ಶರ್ತು "

"ಏನದು ?"

"ಆಕೆಗೆ ಮುಖ್ಯ ಅತಿಥಿಗಳ ಪರಿಚಯವಾಗಬೇಕಂತೆ. ಅದಕ್ಕಾಗಿ ಇಷ್ಟು ಹೊತ್ತು ಆಕೆ ಕಾರ್ಯದರ್ಶಿಯನ್ನು ನೋಡಬೇಕು ಎಂದು ಕಾಯ್ದು ಕಾಯ್ದು ಬೇಸತ್ತುಹೋದಳು !"

"ಹೀಗೆಯೇ? ನನಗೇನು ಗೊತ್ತು. 'ಹೇಳಿಕಳುಹಿಸಿದರೆ ಆಗಲೇ ಬಂದು ಬಿಡುತ್ತಿದ್ದೆ."

"ವೇದಿಕೆಯ ಮೇಲಿಂದ ?"

"ಹುಂ ಅದೇನು ಹೆಚ್ಚು ? ಇಷ್ಟು ವಂಡರ್‌ಫುಲ್ ಮೇಕಪ್ ಮಾಡು ವವರು ಕರೆಯುವುದು ಹೆಚ್ಚೋ....ನಾನು ಬರುವುದು ಹೆಚ್ಚೋ....?"

"ಇನ್ನೊಂದು."

"ಮತ್ತೇನು."

"ಆಕೆಗೆ ತುಂಬ ದಣಿವಾಗಿದೆಯಂತೆ. ತಿರುಗಿ ಹೋಗುವಾಗ ಯಾರಾದರೂ ಜತೆಯಲ್ಲಿ ಹೋಗಿ ವಸತಿಯವರೆಗೆ ತಲುಪಿಸಿ ಬರಬೇಕಂತೆ...."

"ಅದು ಕಾರ್ಯದರ್ಶಿಯ ಕೆಲಸವಲ್ಲ!" ಎಂದು ಹೇಳಿ ಮಾಧವ ನಸುನಕ್ಕ.

"ಕಾರ್ಯದರ್ಶಿಯೇ ಆ ಕೆಲಸಮಾಡಿದರೆ ಆಕೆಗೆ ಅದು ಗೌರವವಲ್ಲವೇ ?"

"ಆಲ್‌ರಾಯಿಟ್ !" ಎಂದ ಮಾಧವ, ತೀರ ಉತ್ಸಾಹಿತನಾಗಿ.

ಹೊರಗಡೆ ರಂಗಭೂಮಿಯ ಮೇಲೆ ಯಾವುದೊ ಒಂದು ಪ್ರಹಸನ ನಡೆದಿತ್ತು. ಜನ ನಗೆಗಡಲಿನಲ್ಲಿ ತೇಲಾಡುತ್ತಿತ್ತು. ರಂಗಸ್ಥಲದ ವ್ಯವಸ್ಥಾಪಕ ಬಂದು ಸರೋಜಿನಿಗೆ ಹೇಳಿದ, ಮುಂದಿನ ಕಾರ್ಯಕ್ರಮ ಆಕೆಯದೇ ಎಂದು. ಮಾಧವ ಹೊರಗಡೆ ಹೊರಡಲು ಅನುವಾದ.

"ಎಲ್ಲಿಗೆ ಹೋಗುತ್ತೀರಿ ?" ಎಂದಳು ಸರೋಜಿನಿ.

"ಹೊರಗಡೆ ಕುಳಿತುಕೊಂಡು ನೋಡುತ್ತೇನೆ."

"ವಿಂಗ್ಸ್‌ನಲ್ಲಿಯೇ ಉಳಿಯಬಹುದಲ್ಲಾ...."

"ವಿಂಗ್ಸ್‌ನಲ್ಲಿ ಅಷ್ಟು ಚೆನ್ನಾಗಿ ಕಾಣುವುದಿಲ್ಲ."

"ನನಗೇಕೋ ತುಂಬ ಹೆದರಿಕೆಯಾಗುತ್ತಿದೆ."

"ಹೆದರಿಕೆಯೆ? ನಾನ್‌ಸೆನ್ಸ್..."

"ನಿಜವಾಗಿಯೂ...."

"ಅದೇನು, ಒಂದೆರಡು ನಿಮಿಷ ಮಾತ್ರ. ಎಲ್ಲವೂ ಸರಿಯಾಗುತ್ತದೆ. ಡೋಂಟ್ ವೊರಿ...."

"ನನಗಿಂತಲೂ ಹೆಚ್ಚಾಗಿ ವಿಶ್ವಾಸ ನಿಮಗೆಯೇ ಇದ್ದ ಹಾಗಿದೆ!"

ಸರೋಜಿನಿ ನಸುನಕ್ಕಳು. ಅಂಥ ರೂಪವಿಲಾಸವನ್ನು ಎಲ್ಲಿಯೂ ನೋಡಲು ಸಿಗಲಿಕ್ಕಿಲ್ಲ ಎಂದುಕೊಂಡ ಮಾಧವ. ಸರೋಜಿನಿಯನ್ನು ಮತ್ತೊಮ್ಮೆ ಉತ್ತೇಜಿಸಿ ಹೊರಗಡೆ ಬಂದು ಕುಳಿತ. ಅದೇ ಆಕೆ ಆಡಿದ ಮಾತು, ಅದರ ವಕ್ರರೀತಿ, ಆ ರೀತಿಯ ಹಿಂದಣ ವಿಭ್ರಮ, ಮಾಧವನ ಹೃದಯವನ್ನು ನೋವಿಲ್ಲದೆ ಕೊರೆಯುತ್ತಿದ್ದವು —ಕೊರೆದು ಅಲ್ಲಿಯೇ ಮನೆ ಮಾಡಿಕೊಳ್ಳುತ್ತಿದ್ದವು.

ನಿಮಿಷಾರ್ಧದಲ್ಲಿ ತೆರೆಯು ಮರೆಯಾಯಿತು. ರಂಗಭೂಮಿಯು ತುಂಬ ತಿಳಿಗುಲಾಬಿಯ ಬಣ್ಣ ತುಳುಕುತ್ತಿತ್ತು. ಹಿನ್ನೆಲೆಯ ಸಂಗೀತ ಮೃದುವಾಗಿ ಬೆಳಗಿನ ಸುಳಿಗಾಳಿಯಂತೆ ತೇಲಿಬರುತ್ತಿತ್ತು. ಆ ಗಾಳಿಯಕಿಂತಲೂ ನಯವಾಗಿ, ಆ ಸಂಗೀತಕ್ಕಿಂತಲೂ ಮೃದುವಾಗಿ ಪ್ರವೇಶಿಸಿದಳು ಸರೋಜಿನಿ ಉಷಃಕಾಲವೇ ಮೂರ್ತಿವೆತ್ತಂತೆ! ಜೀವನಕಲಹವೆಂಬ ನೃತ್ಯಕ್ಕೆ ತೊಡಗಿದಳು.

ಸರೋಜಿನಿ ರಂಗಸ್ಥಳದ ಮೇಲೆ ಬಂದಾಗ ಜನವೆಲ್ಲ ಕಣ್ಣಾಗಿ ನೋಡುತ್ತಿತ್ತು. ಮಾಧವನಿಗೆ ವಿಚಿತ್ರವೆನಿಸಿತು. ಸಾಮಾನ್ಯವಾಗಿದ್ದ ಸರೋಜಿನಿಗೆ ರಂಗಸ್ಥಳದ ಮೇಲೆ ಈ ಗಂಭೀರ ಪ್ರಶಾಂತ ಸೌಂದರ್ಯವೆಲ್ಲಿಂದ ಪ್ರಾಪ್ತವಾಯಿತೊ ಎಂದು. "ಸರೋಜಿನಿಯಲ್ಲ" ವೆಂದು ಆಕೆ ಹೇಳಿದ್ದು ನಿಜವೆನಿಸಿತು. ರಂಗಸ್ಥಲದ ಮೇಲಿದ್ದವಳು ಸರೋಜಿನಿಯಲ್ಲವೇ ಅಲ್ಲ. ನೃತ್ಯದ ನಯುಲಯುಗಳಲ್ಲಿ ಮೈದೋರಿ ನಿಂತಂತಿತ್ತು. ಸರೋಜಿನಿ ನೃತ್ಯಕ್ಕೆ ಪ್ರಾರಂಭಿಸಿದಳು. ಆಕೆಗೆ ಸುತ್ತಲಿನ ಪ್ರಪಂಚದ ಅರಿವಿದ್ದಂತೆ ಕಾಣಲಿಲ್ಲ.

ಉಳಿದವರಂತೆ ಮಾಧವನಿಗೆ ಸುತ್ತಲಿನ ಪರಿವೆ ಉಳಿದಿರಲಿಲ್ಲ ಕಲೆಯ ಕನಸಿನ ಪ್ರಪಂಚವನ್ನು ಸೇರಿತ್ತು ಆತನ ಚೇತನ. ನೃತ್ಯ ಮುಗಿದಾಗಲೇ ಎಚ್ಚರ.

ಮುಂಜಾವಿನ ಸಮಯ. ಬಾನು, ಬೆಟ್ಟ, ಬಯಲುಗಳೆಲ್ಲವೂ ಹೊನ್ನ

ಬಣ್ಣದ ಹೊದ್ದಿಕೆಯನ್ನು ಹೊತ್ತು ದಿನಪತಿಗೆ ಧನ್ಯವಾದಗಳನ್ನರ್ಪಿಸಲು ಶಾಂತವಾಗಿ ನಿಂತಂತಿವೆ. ಜೀವನದ ಆಸೆ ಹೂವಾಗಿ ಅರಳಿ ನಿಂತಿದೆ ಸುಳಿ ಗಾಳಿ ಧನ್ಯತೆಯ ಗೀತವನ್ನು ಹಾಡುತ್ತಿದೆ. ಎತ್ತರವಾದ ಹಚ್ಚಹಸಿರು ಗಿಡಗಳು ತಲೆದೂಗುತ್ತಿವೆ. ಅಲೆಗಳನ್ನರಿಯದ ಕೊಳದ ನೀರು ನಿರಭ್ರವಾದ ನೀಲಾಕಾಶವನ್ನು ಕನ್ನಡಿಯಲ್ಲಿಯಂತೆ ಬಿಂಬಿಸುತ್ತಿದೆ. ನೀರ ಬುಡದಲ್ಲಿ ಮರಿ ಮೀನುಗಳು ಜೀವ ತುಂಬಿದ ಮಲ್ಲಿಗೆಗಳಂತೆ ಸುಳಿದಾಡುತ್ತಿವೆ. ಕಮಲಪತ್ರ ಗಳ ಮೇಲಿನ ಮಂಜುಹನಿಗಳು ಮುತ್ತುಗಳನ್ನು ಅಣಕಿಸುತ್ತಿವೆ—"ಸಮುದ್ರ ದಿಂದ ಬಂದನೆಂದು ಸೆಡವುಮಾಡಬೇಡ" ಎಂದು.

ಅಂಥ ಬೆಳಗಿನಲ್ಲಿ ಮೀನುಗಾರನೊಬ್ಬ ಬಂದ—ಗುಣುಗುಣು ಹಾಡುತ್ತ. ಎಲ್ಲಕ್ಕೂ ಮೊದಲಿಗೆ ಬಂದವನೆಂದು ಆಸೆ ಉಕ್ಕೇರುತ್ತಿತ್ತು ಆತನಲ್ಲಿ. ಸುತ್ತಲೂ ನೋಡಿದ. ಪ್ರಕೃತಿಯ ದಿವ್ಯ ನೋಟ ಆತನ ಹೃದಯವನ್ನು ಸೇರಲಿಲ್ಲ. ಕೊಳದ ಅಂಚಿನಲ್ಲಿ ಕುಳಿತುಕೊಂಡ. ಚಿಕ್ಕದಾದರೂ ಗಟ್ಟಿಯಾಗಿ ದಾರ ಕಟ್ಟಿದ ತನ್ನ ಕಟ್ಟಿಗೆಯನ್ನು ಎತ್ತಿ ಹಿಡಿದು ಆಮಿಷ ತೇಲಿಬಿಟ್ಟ. ನೀರು ಕದಡಿತು. ಅಲೆ ಅಲೆಯಾಗಿ ನೋವಿನಿಂದೆಂಬಂತೆ ಒದ್ದಾಡಿತು. ದಾರದ ಗುಂಟ ಮೀನವೊಂದು ಮೇಲಕ್ಕೆ ಹೋದಾಗ ಅಯ್ಯೋ ಎಂದು ನಿಟ್ಟುಸಿರೆಳೆ ಯಿತು. ಪ್ರಾತಃಕಾಲದ ಅರುಣಸೌಂದರ್ಯ ಈ ನೋಟವನ್ನು ನೋಡಲಾ ಗದ್ದಕ್ಕೆ ಮುಖವನ್ನು ಮುದುಡಿಕೊಳ್ಳುವಂತಿತ್ತು. ಮೀನುಗಳ ನೋವನ್ನು ನೋಡಲಾರದೆ ಬಿಸಿಲು ಬೆಚ್ಚಗಾಗತೊಡಗಿತು—ಆಮೇಲೆ ನಿರ್ದಯವಾಗಿ ಉರಿಯತೊಡಗಿತು. ಬಯಲುಬೆಟ್ಟಗಳೆರಡೂ ಹುಬ್ಬುಗಂಟಿಕ್ಕಿದುವು. ಯಾರು ಮಾಡುವುದೇನು—ಅದೂ ಜೀವನ—ಎಂದು ಕೈಚೆಲ್ಲಿ ನಿಂತುವು. ಮೀನುಗಾರ ಹಾಡುತ್ತಲಿದ್ದ. ಬುಟ್ಟಿ ತುಂಬುತ್ತ ಬಂದ ಹಾಗೆ ಹಾಡು ಉತ್ತಾನವಾಗು ತ್ತಿತ್ತು. "ನಿನ್ನ ಸಾವು, ನನ್ನ ಬದುಕು" ಎನ್ನುವಂತಿದ್ದ. ಎದುರಿನಲ್ಲಿ ಇದನ್ನು ನೋಡಲಾರದಕ್ಕೆ—ಸೂರ್ಯನಿಗೆ ಮೊರೆಯಿಡುತ್ತಿರುವಂತೆ— ನಾಲ್ಕಾರು ಕಮಲದ ಹೂಗಳು ಅರಳಿ ಸೂರ್ಯನೆಡೆಗೆ ಮುಖದಿರುವಿ ನಿಂತಿದ್ದವು. ಮೀನುಗಾರ ನೀರಿನಲ್ಲಿಳಿದ. ನೀರೆಲ್ಲ ಕಲಕಿಹೋಯಿತು. ನೇರ ವಾಗಿ ಆ ಕಮಲಗಳಿದ್ದೆಡೆಗೆ ಹೋಗಿ ಐದು ಹೂವುಗಳನ್ನೂ ಒಂದೇಟಿಗೆ ಕಿತ್ತುಕೊಂಡ. ಇನ್ನೊಂದೆಡೆಯಲ್ಲಿ ಬೆಳೆದ ಹೂವುಗಳನ್ನೂ ಕಿತ್ತುಕೊಂಡ. ಬೇಡ ಬೇಡ, ಎಂದು ತಾಯಿಬಳ್ಳಿ ಕಾಲಿಗೆ ಅಡ್ಡಬಿದ್ದು ಬೇಡುತ್ತಿತ್ತು. ಅದನ್ನು ತುಳಿದು ಮೀನುಗಾರ ಮುಂದೆ ಸಾಗಿದ. ಕಿತ್ತುಕೊಂಡು ದಂಡೆಗೆ

ಬಂದು ವಿಮಾನುಗಳ ಹೆಣಗಳ ಮೇಲೆ ಗೋಳಿಡುವ ಕಮಲಗಳನ್ನು ಹೇರಿದ. ಗೆಲುವಾಗಿ ನಡೆದು ಹಾಡುತ್ತ, "ನಿನ್ನ ಸಾವು, ನನ್ನ ಬದುಕು....ನಿನ್ನ ಸಾವು ನನ್ನ ಬದುಕು" ಎಂದು ಹೆಜ್ಜೆ ಹಾಕುತ್ತ. ಸರೋಜಿನಿ ಒಳಗಡೆ ಹೋದದ್ದು —ಆಕೆ ರಂಗಸ್ಥಳದ ಮೇಲಿಂದ ಪೂರ್ತಿಯಾಗಿ ಮಾಯವಾದಮೇಲೆಯೇ ಎಲ್ಲರಿಗೂ ಗೊತ್ತಾಯಿತು. ಸಂಗೀತ ತೆರೆಯ ಮರೆಯಿಂದ ಗೋಳಿಡುತ್ತಲೇ ಇತ್ತು. "ಯಾರ ಸಾವು, ಯಾರ ನೋವು" ಎಂದು. "ಸಾವಿಲ್ಲದ ಬದುಕಿಲ್ಲ, ಸಾವಿಲ್ಲದ ಬದುಕಿಲ್ಲ, ನೋವಿಲ್ಲದ ನಲಿವಿಲ್ಲ" ಎನ್ನುತ್ತಿರುವಾಗಲೇ ತೆರೆ ಚಂಗನೆ ಬಿದ್ದಿತು.

ಐದು ನಿಮಿಷಗಳಲ್ಲಿ ಎರಡನೆಯ ನೃತ್ಯ. ಜನ ಮಂತ್ರಮುಗ್ಧರಂತೆ ಕುಳಿತಿದ್ದರು. ಈ ಸಲದ ನೃತ್ಯ ಸಂಗೀತದಿಂದ ಕೂಡಿದ್ದಾಗಿತ್ತು. ಅಭಿನಯ ಸಂಗೀತಗಳೆರಡೂ ಸೇರಿ ಜನರ ಹೃದಯವನ್ನು ಸೆರೆಹಿಡಿದೊಯ್ದಿದ್ದವು.

ತೆರೆ ಸರಿದಾಗ ರಂಗಭೂಮಿಯ ಮೇಲೆಲ್ಲ ತಿಳಿಯಾದ ನೀಲವರ್ಣದ ಬೆಳಕು ಹಬ್ಬಿಕೊಂಡಿತ್ತು. ಅದೇ ಬಣ್ಣದ ಉಡುಗೆಯನ್ನುಟ್ಟ ಸರೋಜಿನಿ ಬೆಳುದಿಂಗಳ ಉಡಿಗೆಯನ್ನುಟ್ಟ ಭೂಮಿಯಂತಿದ್ದಳು. ಆ ಸನ್ನಿವೇಶ ಭೂದೇವಿಗೂ ಬೆಳುದಿಂಗುಳಿಗೂ ನಡೆದ ಒಂದು ಸಂಭಾಷಣೆಯಾಗಿತ್ತು. ಸರೋಜಿನಿ ಬೆಳದಿಂಗಳಾಗಿದ್ದಳು. ನೆರಳಿನೊಡನೆ ಮಾತನಾಡುತ್ತಿರುವಂತಿತ್ತು—ಗೀತದಲ್ಲಿ. ಎಷ್ಟೋ ಹೊತ್ತು ಹಾಡುತ್ತಿದ್ದವಳು ಸರೋಜಿನಿಯೆಂದು ಗೊತ್ತಾಗದ ನಯ ಮೃದುತೆಗಳು ಆ ದನಿಯಲ್ಲಿ ತೇಲಿಬರುತ್ತಿದ್ದವು.

"ಯಾರೇ ನೀನು, ಇಲ್ಲಿಗೇಕೆ ಬಂದೆ ?" ಎಂದು ತೆರೆಯ ಹಿಂದಿನಿಂದ ದನಿ ನಿಷ್ಠುರವಾಗಿ ತೂರಿಬಂದಿತು.

"ಯಾರು ನಾನೆ ? ಏನು ಮರುಳು ನಿನಗೆ ?"

"ಮರುಳು ನಾನಲ್ಲ, ನೀನು."

"ನಿನ್ನ ಮರುಳೇ ನನಗೆ ಬಡಿದುಕೊಂಡಂತಿದೆ. ಯಾತಕ್ಕೆ ಬಂದೆಯೆ, ಮಾಯಾವಿನಿ ?" ಎಂದು ಭೂದೇವಿಯ ಸಿಡುಕಿನ ದನಿ.

"ಸರಿಯಾದ ಮಾತು. ನೀನೂ ಮಾಯೆಯೆಂದು ತಿಳಿಸಲು !"

"ಹುಚ್ಚು ನಿನಗೆ. ಸುಮ್ಮನೆ ಹೋಗು. ನಾನು ಬದುಕು, ನಾನು ಭೂಮಿ —ಮಾಯೆಯಲ್ಲ !"

"ಈಗ ನಿನಗೆ ಹುಚ್ಚು. ಈ ಭ್ರಮೆ "

"ಮತ್ತೆ ಯಾಕೆ ಅದೇ ಮಾತು ? ನಾನು ಜೀವನದ ವಿಭ್ರಮ !"

"ಶ್ರಲೆ! ಯಾರೇ ನೀನು ?"

"ಬ್ರಹ್ಮನ ಕನಸು !"

"ಭೂದೇವಿಯೇ ?"

"ಹೌದು."

"ಅದಕ್ಕೇ ಕೇಳಿದೆ—ನೀನು ಇಲ್ಲಿಗೇಕೆ ಬಂದೆ ಎಂದು."

"ಯಾಕೆ ಬರಬಾರದೆ ?"

"ಬಾರದು !"

"ಈಗ ಕೋಟಿ ವರ್ಷಗಳಿಂದಲೂ ಇಲ್ಲಿಯೇ ಇದ್ದೇನೆ."

"ಆದರೆ ಇದೇನು ವಿಪರೀತ ಕ್ಲೇಶ ನಿನಗೆ ?"

"ಬ್ರಹ್ಮನ ಹಿರಿಯ ಮಗಳು ನಾನು. ನೀನು ತಂಗಿ. ನನಗೆ ತುಂಬ ದುಃಖ, ಈಗ ನಾನು ಹೇಳಿದಂತೆ ಕೇಳುವಿಯಾ ?"

"ಕೇಳಿಯೇನು. ಆದರೆ ಪ್ರಪಂಚದ ಚರಾಚರ ಜೀವವನ್ನು ನಡೆಸುವ ನಿನಗೂ ದುಃಖವೆ ? ನಿನ್ನ ದುಃಖದ ಮಾತು ಸೃಷ್ಟಿಯ ಕ್ರಮಕ್ಕೆ ವಿರುದ್ಧ ವಾಗಿದೆ."

"ಇಂದು ನಾನೇ ಸೃಷ್ಟಿಯ ಕ್ರಮಕ್ಕೆ ವಿರುದ್ಧವಾಗಿದ್ದೇನೆ. ಅದಕ್ಕೆಂದು ಹೇಳಿದೆ."

ಬೆಳದಿಂಗಳು ಭೂದೇವಿಯನ್ನು ನಿರುಕಿಸಿ ನೋಡಿದಳು. ಅಕ್ಕನ ಮುಖ ದಲ್ಲಿ ದುಃಖದೈನ್ಯಗಳು ನೆಲೆಮಾಡಿದ್ದವು. ಸೊಗಸಿನ ತವರಾದ ತಂಗಿ ತನ್ನ ಉದ್ವಿಗ್ನತೆಯನ್ನು ನೋಡದಿರಲೆಂದು ಭೂದೇವಿ ಮುಖ ತಿರುವಿದಳು.

"ಯಾಕೆ, ಏನಾಯಿತು ಅಕ್ಕಾ" ಎಂದು ಹಾಲುಗಡಲಿನ ಅಪ್ಸರೆ ಹಸಿರು ಬಟ್ಟೆಯನ್ನುಟ್ಟ ಅಕ್ಕನನ್ನು ತಬ್ಬಿಕೊಂಡು ಕೇಳಿದಳು ಅಕ್ಕನಿಗೆ ದುಃಖ ತಡೆಯದಾಗಿ ಹೇಳಿದಳು :

"ಒಮ್ಮೆ ನಿನ್ನಂತೆ ನಾನೂ ಸುಖಿಯಾಗಿದ್ದೆ. ನೀನು ಬಂದೊಡನೆ ನಿನ್ನೊಡನೆ ನಲಿಯುತ್ತಲಿದ್ದೆ."

"ಈಗೇನಾಯಿತು ?"

"ಯಾವ ತಾಯಿಯೂ ನೋಡಬಾರದ ದುಃಖವನ್ನು ನಾನು ನೋಡ ಬೇಕಾಗಿದೆ. ನನ್ನ ಮಕ್ಕಳಿಂದು ಯಾದವೀ ಯುದ್ಧಕ್ಕೆ ತೊಡಗಿದ್ದಾರೆ. ನನ್ನ ಮಕ್ಕಳನ್ನು ನನ್ನ ಮಕ್ಕಳೇ ಕೊಲೆ ಸುಲಿಗೆ ಗೆಯ್ಯುತ್ತಿದ್ದಾರೆ. ಅದಕ್ಕೆಂದೇ ನಿನಗೆ ಬರಬೇಡವೆಂದೆ. ನನ್ನ ದುಃಖವನ್ನು ನೋಡಬೇಡವೆಂದೆ."

ಅರೆನಿಮಿಷ ಬೆಳುದಿಂಗಳ ರಾಣಿಯೂ ಚಿಂತಾಕ್ರಾಂತಳಾದಳು—ಅಕ್ಕನ ದೈನ್ಯವನ್ನು ನೆನೆದು ಮರುಗಿದಳು.

"ಎಷ್ಟಾದರೂ ಭೂಮಿತಾಯಿ ನೀನು, ಬುದ್ಧಿ ಹೇಳಬೇಕು."

"ಹೇಳಿದುದನ್ನು ಕೇಳುವವರಿಲ್ಲ. ಕೇಳಿದರೂ ನಡೆಯುವವರಿಲ್ಲ." ಭೂದೇವಿ ನಿಡುಸುಯ್ದಳು.

"ಆಸೆ ತೊರೆಯಬೇಡ, ಅಕ್ಕ. ನಿನ್ನ ಮಕ್ಕಳ ಸತ್ವ ದೊಡ್ಡದು."

"ಸತ್ವ ದೊಡ್ಡದೆಂದೇ ಹಿಂಸೆ ಹಿರಿದಾಗಿದೆ. ದೊಡ್ಡ ಬಾಳು, ದೊಡ್ಡ ಬೀಳು!"

"ಇಂದಿಲ್ಲ ನಾಳೆ ಕಣ್ಣು ತೆರೆದಾರು!"

"ತೆರೆಯಲಿ ಎಂಬ ಬಯಕೆಯೊಂದೇ ನನ್ನ ಸಮಾಧಾನ."

"ನಾನೂ ನಿನಗೆ ಸಹಾಯಮಾಡುವೆ!"

"ನನ್ನ ಸತ್ವ, ನಿನ್ನ ಸೌಂದರ್ಯ ಸೇರಿದರೆ ಮಾನವನ ಮರುಳು ಬಿಡಬಹುದೆ?"

"ಬಹುದು. ಇದೀಗ ನಿಜವಾದ ಮಾತು."

"ನೀನೂ ತಪ್ಪದೆ ಬರುವೆಯಾ?"

"ಎಂದಿಗೂ ತಪ್ಪಲಿಲ್ಲ. ಪ್ರಪಂಚದ ಸುತ್ತಲೂ ತಿರುಗುತ್ತೇನೆ. ಇಲ್ಲಿ ಹೆಚ್ಚು, ಅಲ್ಲಿ ಕಡಿಮೆ ಎಂದಿಲ್ಲ."

"ಇಂದು ನೀನು ಬಂದೆಯೆಂದು ನಾನು ಸುಖಿ. ನಿನ್ನನ್ನು ನೋಡಿಯಾದರೂ ನನ್ನ ಮಕ್ಕಳು ತಮ್ಮನ್ನು ತಾವೇ ತಿಳಿದುಕೊಂಡಾರು!"

"ಅಷ್ಟಾದರೆ ನಾವಿಬ್ಬರೂ ಧನ್ಯರಲ್ಲವೆ?"

"ಬದುಕು ಕನಸಾದೀತು!"

"ಮಾನವನ ಕನಸು ನನಸಾದೀತು!"

"ಆದೀತು, ಆದೀತು!" ಎಂದು ಅಕ್ಕತಂಗಿಯರಿಬ್ಬರೂ ಮೈಮರೆತು ಹಾಡಿ ಕುಣಿಯಲಾರಂಭಿಸುತ್ತಾರೆ. ಸಂಗೀತವು ಉನ್ಮಾದಕಾರಿಯಾಗಿ ಸ್ವರ್ಗಲೋಕದವರೆಗೂ ಕೇಳುವಂತೆ ಗಗನಕ್ಕೇರುತ್ತದೆ. ಕುಣಿಕುಣಿಯುತ್ತಲೆ ಸರೋಜಿನಿ ಮಾಯವಾದಳು. ಸರ್ರೆಂದು ತೆರೆ ಸರಿಯಿತು. ತಟ್ಟನೆ ಜನಕ್ಕೆ ಅರಿವಾಯಿತು—ತಾವು ಇದುವರೆಗೆ ನೋಡುತ್ತಿದ್ದುದು ಒಂದು ಗೀತಮಯ ನೃತ್ಯವೆಂದು!"

ಐದು ನಿಮಿಷಗಳಾದರೂ ಚಪ್ಪಾಳೆಗೆ ತಡೆಯಿಲ್ಲ. 'ಅದ್ಭುತ' ಎಂದರು

ಕೆಲವರು 'ವಿಚಿತ್ರ' ಎಂದರು ಇನ್ನು ಹಲವರು. ಮೈಮರೆತು ನೋಡಿದೆವೆಂದು ಹೇಳುವವರು ಎಲ್ಲರೂ. ಮಾಧವನಂತೂ ಒಂದು ಹೆಜ್ಜೆಯಲ್ಲಿಯೇ ಒಳಕ್ಕೆ ಓಡಿದ. ಸರೋಜಿನಿ ಕುರ್ಚಿಯ ಮೇಲೆ ಕುಳಿತ್ತಿದ್ದಳು ; ಮೋರೆಯ ಮೇಲೆ ವಿಲಕ್ಷಣವಾದ ಗಂಭೀರ ಪ್ರಸನ್ನತೆಯಿತ್ತು. ಆಕೆಯ ಚೇತನ ಇನ್ನೂವರೆಗೆ ವಾಸ್ತವಪ್ರಸಂಚಕ್ಕೆ ಇಳಿದು ಬಂದಂತಿರಲಿಲ್ಲ. ಎದುರಿನಲ್ಲಿ ಮಾಧವ ಬಂದು ನಿಂತುದನ್ನು ನೋಡಿದಾಗ ಮಾತ್ರ ನಸುನಕ್ಕಳು. ಆಕೆ ನಕ್ಕದ್ದು ತನ್ನ ಕೌಶಲ್ಯಕ್ಕೆ ತಾನೇ ಮರುಳಾಗಿ ಇರಬೇಕು. ಕನಸಿನ ಪ್ರಪಂಚವನ್ನು ಬಿಟ್ಟು ಭೂಮಿಗಿಳಿಯುತ್ತಿದ್ದ ಅವಳ ಮನಸ್ಸು ವಿಚಿತ್ರ ಸ್ಥಿತಿಯಲ್ಲಿತ್ತು. ಆ ಸ್ಥಿತಿಯಲ್ಲಿ ಆಕೆಗೆ ಮಾಧವ ಬೇರೆಯಾಗಿಯೇ ಕಂಡ. "ನನ್ನ ಕನಸು ನೀನು!" ಎಂದು ಹೇಳುತ್ತಿತ್ತೇನೊ ಆ ನಸುನಗು. ಅವಳ ನೃತ್ಯಗೀತಗಳಿಗೆ ಸಂಪೂರ್ಣವಾಗಿ ಮಾರುಹೋದ ಮಾಧವನಿಗೆ ಮಾತು ಬರಲಿಲ್ಲ. ಕಣ್ಣಿವೆಯಿಕ್ಕದೆ ಸರೋಜಿನಿಯನ್ನು ನೋಡುತ್ತಲೇ ನಿಂತ.

"ಅದೇನು ಹಾಗೆ ಸುಮ್ಮನೆ ನಿಂತುಬಿಟ್ಟರಿ ?" ಎಂದಳು ಸರೋಜಿನಿ ಕೊನೆಗೆ.

"ಮಾತು ಸಾಲವು" ಎಂದ ಮಾಧವ.

"ಏತಕ್ಕೆ ?"

"ಅಭಿನಂದಿಸಲಿಕ್ಕೆ."

"ಸಾಕು, ಸಾಕು ಈ ಮಾತು."

"ಹಾಗಾದರೆ ಏನು ಬೇಕು ?"

"ಈಗ ನನಗೆ ಮಾತು ಸಾಲದು" ಎಂದು ಮಾತು ತಿರುಗಿಸಿ ನಕ್ಕಳು ಸರೋಜಿನಿ. ನಡುವೆಯೇ ಯಾರೋ ಬಂದು ಮಾಧವನಿಗೆ ಅಧ್ಯಕ್ಷರು ನಿಮ್ಮನ್ನು ಕರೆಯುತ್ತಲಿದ್ದಾರೆ" ಎಂದು ತಿಳಿಸಿದ. ಮಾಧವ ಸರೋಜಿನಿಗೆ "ಆಮೇಲೆ ಬರುವೆ"ನೆಂದು ಹೇಳಿ ಮಾಯವಾದ.

ಮುಖ್ಯ ಅತಿಥಿಗಳು ಸರೋಜಿನಿಯ ನೃತ್ಯಗೀತಗಳನ್ನು ಮುಕ್ತಕಂಠವಾಗಿ ಹೊಗಳಿದರು. ತಮ್ಮ ಭಾಷಣವನ್ನು ಚಿಕ್ಕದಾಗಿಸಿ ಈ ಕಾರ್ಯಕ್ರಮಕ್ಕೆ ಬೇಗನೆ ಅನುವುಮಾಡಿಕೊಟ್ಟದ್ದಕ್ಕಾಗಿ ತಮ್ಮನ್ನು ತಾವೇ ಅಭಿನಂದಿಸಿದರು. ಕಾರ್ಯಕ್ರಮ ಮುಕ್ತಾಯವಾಯಿತು. ಎಲ್ಲರ ಬಾಯಲ್ಲೂ ಸರೋಜಿನಿಯ ಹೆಸರೇ ಹೆಸರು !

ಜನಸಂದಣಿ ಕಡಿಮೆಯಾದಮೇಲೆ ಅತಿಥಿಸಳೊಡನೆ ಉಪಾಹಾರ ನಡೆ

ಯಿತು. ಸದಸ್ಯರ-ಕಾರ್ಯಕರ್ತರ ಪರಿಚಯ ನಡೆಯಿತು. "ಇವರು ಮಿಸ್ ಸರೋಜಿನಿಯವರು, ನೃತ್ಯ ಮಾಡಿದವರು" ಎಂದು ಮಾಧವ ತಿಳಿಸಿಕೊಟ್ಟ. ಅತಿಥಿಗಳು ಸಂತೋಷದಿಂದ ಮುಂದೆ ಬಂದು ಹೇಳಿದರು : "ತುಂಬ ಸಂತೋಷ ವಮ್ಮ, ತುಂಬ ಸಂತೋಷ. ಬಹಳ ಚೆನ್ನಾಯಿತು" ಎಂದು. ಸರೋಜಿನಿಗೆ ಒಂದೆಡೆ ಅಭಿಮಾನ, ಒಂದೆಡೆ ಶಾಲೀನತೆ, ಹೀಗಾಗಿ ಮುಖ ತಗ್ಗಿಸಿದಳು. ಆ ಸ್ಥಿತಿಯಲ್ಲಿ ಮಾಧವನಿಗೆ ಆಕೆಯ ಮುಖದಲ್ಲಿ ಎಂದಿಗೂ ಇಲ್ಲದ ಚೆಲುವು ಕಂಡಿತು. "ಎಲ್ಲಿ ಅಮ್ಮ, ನೀವು ಪಾಠ ಹೇಳಿಸಿಕೊಂಡದ್ದು ?" ಎಂದು ಅತಿಥಿಗಳು ಮುಂದುವರೆದರು. ನಮ್ಮ ಊರಿನಲ್ಲಿ ಒಬ್ಬ ಉಸ್ತಾದ್ ಇದ್ದಾರೆ. ಅವರು ಹೇಳುತ್ತಿದ್ದರು. ಆದರೆ ಇತ್ತೀಚೆಗೆ ಯಾರೂ ಇಲ್ಲ" ಎಂದಳು.

"ಹಾಗಾದರೆ ಈ ಹಾಡು, ಮೇಳ ಸಂಗೀತ ?"

"ಎಲ್ಲವನ್ನು ನಾನೇ ಯೋಚಿಸಿಕೊಂಡೆ."

"ಬಹಳ ಒಳ್ಳೆಯ ಕೆಲಸ, ಬಹಳ ಒಳ್ಳೆಯ ಕೆಲಸ !"

ಮಾಧವನಿಗೆ ಹಿಡಿಸಲಾರದ ಆನಂದ—ಅವರ ಅಭಿನಂದನೆಗಳೆಲ್ಲವೂ ತನ್ನ ಪಾಲಿಗೆ ಬಂದಂತೆ !

"ಇಂಥ ಚಿಕ್ಕ ವಯಸ್ಸಿನಲ್ಲಿ ಇಷ್ಟು ಕೆಲಸ ಮಾಡುತ್ತಿದ್ದೀರಲ್ಲಾ. ಇನ್ನೂ ಅಭ್ಯಾಸ ಮಾಡಿ. ನಿಜವಾಗಿಯೂ ಹೆಸರು ಗಳಿಸುವಿರಿ.... ಸಾಧ್ಯವಾದರೆ ಪಾಠ ಹೇಳಿಸಿಕೊಳ್ಳಿ. ಬಹಳ ಸಂತೋಷ...." ಎಂದು ನಮಸ್ಕರಿಸಿ ಹಿಂದೆ ಸರಿದರು. ಪರಿಚಯಕಾರನ ಪರಿಚಯವಾಯಿತು. ಅತಿಥಿಗಳು ನಕ್ಕುಬಿಟ್ಟು "ಇನ್ನೂ ತುಂಬ ಉತ್ಸಾಹ ಅಲ್ಲವೆ ?" ಎಂದು ಬೆನ್ನುತಟ್ಟಿದರು. "ಬಹಳ ಉತ್ಸಾಹ ಒಳ್ಳೆಯದಲ್ಲ. ಉತ್ಸಾಹ ಎಂದರೆ ಕುದುರೆ ಇದ್ದಹಾಗೆ ಕುದುರೆ ಎಷ್ಟು ಒಳ್ಳೆಯದಾದರೂ ಅದಕ್ಕೆ ನಡಿಗೆ ಕಲಿಸಬೇಕಾಗುತ್ತದೆ. ಅಲ್ಲವೆ ?" ಎಂದು ಹೇಳಿ ನಗೆ ಸೂಸಿದರು. ಉಪಾಹಾರದೊಡನೆ ಆ ಮಾತು ಈ ಮಾತು ನಡೆದು ಕಾರ್ಯಕ್ರಮ ಮುಕ್ತಾಯವಾಯಿತು.

ಬಾಗಿಲಲ್ಲಿಯೇ ಕಾಯುತ್ತಿದ್ದ ಸರೋಜಿನಿ ಮಾಧವನಿಗೆಂದಳು :

"ಒಂದು ಶರ್ತು ನಡೆಯಿತು. ಇನ್ನೊಂದು ?"

"ಏನದು ?"

"ಮೇಕಪ್ ಮಾಡಿದವರನ್ನು ವಸತಿಗೆ ತಲುಪಿಸುವುದು."

"ಯಾಕೆ, ಅವರ ಗೆಳತಿಯರೆಲ್ಲರೂ ಹೊರಟುಹೋದರೆ ?"

"ಹುಂ, ಅವರೆಲ್ಲರಿಗೂ ಇಲ್ಲಿ ಉಪಾಹಾರಕ್ಕೆ ಔತಣವಿರಲಿಲ್ಲ !"

"ನಿಜ. ಆದರೆ ಮೇಕಪ್ ಮಾಡುವವರು ತಾವಾಗಿಯೇ ಹೋಗಬೇಕು. ನೃತ್ಯ ಮಾಡಿದವರು ನಾನು ಬರಬೇಕು ಎಂದು ಹೇಳಿದರೆ ಹೇಗಾದರೂ ಬರಬಹುದು!"

"ಅವರಿಬ್ಬರೂ ಒಂದೇ ಆದರೆ?"

"ಅವರಿಬ್ಬರೂ ಒಂದೇ ಆದರೂ ಬೇರೆ ಬೇರೆ. ನೃತ್ಯ ರಂಗಭೂಮಿಯ ಮೇಲೆ ಮಾತ್ರ!"

"ಹೊರಗಡೆ?"

"ಅದರ ಕನಸು ಮಾತ್ರ!"

"ಅಷ್ಟಾದರೂ ನಡೆದೀತು!" ಎಂದುವಕ್ಕೆ ಇಬ್ಬರೂ ನಕ್ಕು ಮುಂದಕ್ಕೆ ಸಾಗಿದರು. ಕಾಲೇಜಿನ ಆವಾರ ದಾಟ ಬಂದಾಗ ಚೌತಿಯ ಚಂದ್ರ ಅದೇ ಮುಳುಗುತ್ತಿದ್ದ. ಅವನ ಮುಖ ದಣಿದಂತಿತ್ತು—ಸರೋಜಿನಿಯ ಮುಖದಂತೆಯೇ. ಕತ್ತಲೆ ತನ್ನ ಸಾಮ್ರಾಜ್ಯವನ್ನು ಅವಸರದಿಂದ ಹಬ್ಬಿಸುವುದರಲ್ಲಿತು. ಅಲ್ಲಿಗೊಂದು ಇಲ್ಲಿಗೊಂದು ಮಿನುಗುತ್ತಿದ್ದ ಬೀದಿಯ ದೀಪಗಳು ಹಬ್ಬುತ್ತಿದ್ದ ಕತ್ತಲೆಯೊಡನೆ ವ್ಯರ್ಥವಾಗಿ ಹೋರಾಡುತ್ತಿದ್ದವು. ಈ ಹೋರಾಟ ವ್ಯರ್ಥವೆಂದು ಸುತ್ತಲಿನ ಗಿಡಗಳೆಲ್ಲವೂ ಸುಂಯ್ ಎಂದು ಗಾಳಿಗುಂಟ ತಮ್ಮ ನಿಟ್ಟುಸಿರುಗಳನ್ನು ತೇಲಿಸುತ್ತಿದ್ದವು. ಅಗೋ! ಬಂತು ಕತ್ತಲೆ, ಇನ್ನು ಬೆಳಗಿನವರೆಗೂ ಬೇರೆ ಗತಿಯಿಲ್ಲವೆಂದು ರಾತ್ರಿಯ ಶಾಂತತೆ ಕಿರ್ರೆಂದು ಕಿರುಚಿಕೊಳ್ಳುತ್ತಿತ್ತು. ಆದರೆ ಬೇರೆಯಾದ ಪ್ರಪಂಚದಲ್ಲಿಯೇ ಇದ್ದ ಮಾಧವ-ಸರೋಜಿನಿಯರ ಗಮನ ಇತ್ತ ಯಾವ ಕಡೆಗೂ ಇದ್ದಿರಲಿಲ್ಲ. ಸರೋಜಿನಿಯ ಚಿತ್ತ ನೃತ್ಯಗೀತ ಪ್ರಪಂಚದಲ್ಲಿ ಓಲಾಡುತ್ತಿತ್ತು. ಮಾಧವನ ಚಿತ್ತ ಆ ಪ್ರಪಂಚಕ್ಕೆ ಕೆಲಕಾಲವಾದರೂ ಮೂರ್ತಸ್ವರೂಪವನ್ನು ತಂದುಕೊಟ್ಟ ಸರೋಜಿನಿಯಲ್ಲಿ ಲೀನವಾಗಿತ್ತು. ನಿಧಾನವಾಗಿ ಇಬ್ಬರೂ ಹೆಜ್ಜೆ ಹಾಕುತ್ತಲೇ ಇದ್ದರು. ಇಬ್ಬರ ನೆರಳುಗಳೂ ಹಿಂದಿನಿಂದ ಎಲ್ಲಿಂದಲೋ ಬಂದು ಅವರಿಬ್ಬರ ಪಾದಗಳನ್ನು ಮುಟ್ಟಿ—ಹೀಗೆ ದಯಮಾಡಿಸಿ, ಹೀಗೆ—ಎಂದು ಮುಂದೋಡಿ ಮುಂದಿನ ದೀಪದ ಬೆಳಕಿನಲ್ಲಿ ಮಾಯವಾಗುತ್ತಿದ್ದವು. ಆ ನೆರಳುಗಳನ್ನು ನೋಡಿದಾಗಲೇ ಮಾಧವನಿಗೆ ಸುತ್ತಲಿನ ಕತ್ತಲೆಯ ಅರಿವಾಯಿತು. ರಂಗಭೂಮಿಯ ಕಣ್ಣು ಕುಕ್ಕಿಸುವ, ಮನಸ್ಸನ್ನು ತಣಿಸುವ ಬೆಳಕಿಗೂ ಈ ಕತ್ತಲೆಗೂ ಯಾವ ಸಂಬಂಧ? ಎಂದುಕೊಂಡ. ಪೃಥ್ವಿಯ ನೆಳಲೇ ರಾತ್ರಿ—ನೆಳಲು, ಬೆಳಕು—ಏನು ವಿಚಿತ್ರ ಎಂದುಕೊಂಡ. ಒಂದು ಜೀವನ,

ಇನ್ನೊಂದು ಕಲೆ ! ತನ್ನ ಹತ್ತಿರದಲ್ಲಿ ಹೆಜ್ಜೆಹಾಕುತ್ತಿದ್ದ ಸರೋಜಿನಿ—ರಂಗಭೂಮಿಯ ಮೇಲಿನ ಸರೋಜಿನಿಯ ನೆಳಲು ಮಾತ್ರ. ಆದರೆ ಈಕೆ ಸರೋಜಿನಿ—ಈಕೆ ಆಕೆ ಒಂದೆಯೇ ಎಂದು ಕೇಳಿಕೊಂಡ. ಇವಳೇಕೆ ಆಕೆ, ನಿಜ. ಆದರೂ ಒಬ್ಬರಿಲ್ಲದೆ ಇನ್ನೊಬ್ಬರಿಲ್ಲ. ಯಾರು ಮೇಲು? ಜೀವನವೊ, ಕಲೆಯೊ? ಒಂದಿಲ್ಲದೆ ಇನ್ನೊಂದಿಲ್ಲ. ಏನನ್ನೋ ಯೋಚಿಸುತ್ತಿದ್ದ ಸರೋಜಿನಿ ಕೇಳಿದಳು.

"ಏನು ಯೋಚನೆ ನಡೆಸಿದ್ದೀರಿ ?"

"ಏನೂ ಇಲ್ಲ !"

"ಅಷ್ಟೂ ತಿಳಿಯುವುದಿಲ್ಲವೆ ನನಗೆ ?"

"ಏನು ತಿಳಿಯಿತು ?"

"ನಿಮ್ಮ ಮನಸ್ಸಿನಲ್ಲಿ ನಡೆದದ್ದು."

"ಹಾಗಾದರೆ ಕೇಳಿದಿರಿ ಯಾತಕ್ಕೆ ?"

"ಸುಮ್ಮನೆ ಕೇಳಿದೆ !" ಎಂದು ತನ್ನ ಸೋಲನ್ನು ಮುಚ್ಚಲೆಳಸಿದಳು

"ಒಟ್ಟಿನಲ್ಲಿ ಕಾರ್ಯಕ್ರಮ ಹೇಗಾಯಿತು ?"

"ಆಯಿತು, ಸುಮಾರಾಗಿ...." ಎಂದ ಮಾಧವ, ಬೇಕೆಂತಲೆ.

"ನಿಮಗೆ ಪೂರ್ತಿ ಸಮಾಧಾನವಿಲ್ಲವೆಂದು ಕಾಣುತ್ತದೆ."

"ಪೂರ್ತಿ ಸಮಾಧಾನವೆಂದರೆ ಹೇಗೆ ?" ಎಂದ ಮಾಧವ, ಆಕೆಯನ್ನು ಪೀಡಿಸಬೇಕೆಂದು.

"ನೀವೇ ಹೇಳಿದಿರಿ ಇದೀಗ, ಸುಮಾರಾಗಿ ಆಯಿತು ಎಂದು."

"ಹೌದು, ಮತ್ತೆ ಹೇಗೆ ಹೇಳಬೇಕಾಗಿತ್ತು ?"

"ನನಗೆಲ್ಲಾ ಗೊತ್ತು. ಮನಸ್ಸಿನಲ್ಲಿದ್ದುದನ್ನು ಆಡಿದರೆ ಆಣೆ !"

"ಯಾಕೆ ? ಇದುವರೆಗಿನ ಹೊಗಳಿಕೆ ಸಾಕಾಗಲಿಲ್ಲವೆ ?"

"ಯಾರ ಹೊಗಳಿಕೆ ?"

"ಹೊಗಳದೆ ಇದ್ದವರು ಯಾರಾದರೂ ಉಳಿದರೆ ?"

"ಉಳಿದರು ಖಂಡಿತವಾಗಿ !"

"ಯಾರು ?"

ನೀವೇ ಇದ್ದಿದ್ದೀರಲ್ಲ !"

"ನಾನು ಹೊಗಳುವುದು ಸಾಧ್ಯವೇ ಇಲ್ಲ !"

ಸರೋಜಿನಿಗೆ ತುಸು ಉತ್ಸಾಹಭಂಗವಾಯಿತು. ನಿಜವಾಗಿಯೂ ತನ್ನ ನೃತ್ಯ ಮಾಧವನ ಮನಸ್ಸನ್ನು ಹಿಡಿದಿರಲಿಕ್ಕಿಲ್ಲವೆ ? ಎಂದು ಅನುಮಾನ

ಪಟ್ಟಳು. ಆದರೆ ಅದು ಅರೆನಿಮಿಷ ಮಾತ್ರ. ತನ್ನ ಕಲಾವಂತಿಕೆಯ ಅಭಿಮಾನ ಉಕ್ಕಿಬಂದರೂ ಅದನ್ನು ತಡೆಹಿಡಿದು ಕೇಳಿದಳು :

"ಹೊಗಳುವುದು ಸಾಧ್ಯವೇ ಇಲ್ಲವೆಂದಮೇಲೆ ಏನು ಹೇಳಿ ಏನು ಪ್ರಯೋಜನ ?"

"ಪ್ರಯೋಜನವಿದೆ ಎಂದೇ ಹೊಗಳುವುದಿಲ್ಲ !"

"ಅಸಮಾಧಾನದಿಂದ ಅಲ್ಲವಲ್ಲ ?"

"ನಿಶ್ಚಯವಾಗಿಯೂ ಅಲ್ಲ !"

"ಹಾಗಾದರೆ ಯಾಕೆ ?"

"ಹೊಗಳಿಕೆ ತಲೆಗೇರಿ ನಿಮಗೆ ಹುಚ್ಚು ಹಿಡಿಯಬಾರದು ಎಂದು !"

"ಓಹೋ ! ಹೀಗೊ ?" ಎಂದು ಸರೋಜಿನಿ ಸಮಾಧಾನದ ನಗೆಯನ್ನು ಬೀರಿದಳು. ದೂರದಿಂದ ವಸತಿಗೃಹದ ದೀಪಗಳು ಕಾಣತೊಡಗಿದವು. ಸರೋಜಿನಿಯೆಂದಳು :

"ಇದೇನು ? ಮಾತನಾಡುತ್ತ ಬಂದೇಬಿಟ್ಟೆವಲ್ಲ ?

"ಯಾಕೆ ? ಬರಬಾರದಾಗಿತ್ತೇ ?"

"ಹಾಗಲ್ಲ ! ನೃತ್ಯ ಮುಗಿದಾಗ ನಿಮ್ಮ ಕೂಡ ಎಷ್ಟೋ ಮಾತು ಹೇಳಬೇಕು ಎಂದಿದ್ದೆ !"

"ಹೇಳಬಹುದಲ್ಲ ! ಈಗೇನಾಯಿತು ?"

"ಅವೆಲ್ಲ ಈಗ ಮರೆತುಹೋಯಿತು !"

"ಇಷ್ಟು ಬೇಗ ಮರೆತುಹೋಯಿತೆ ?"

"ಈಗ ಮರೆತರೂ ಮತ್ತೆ ನೆನಪಾಗಬಹುದು !"

"ಅಂತೂ ಆಸೆಯಿದೆ. ಯಾವಾಗ ಹೇಳುತ್ತೀರಿ ?"

"ಹೇಳುವೆ, ಯಾವಾಗಲಾದರೂ."

"ಮತ್ತೆ ಮರೆಯುವುದರೊಳಗಾಗಿ ?"

"ಮರೆಯುವುದು ಸಾಧ್ಯವೇ ಇಲ್ಲ !"

ಮಾಧವನಿಗೆ ಸರೋಜಿನಿಯ ಮಾತು ಮೋಜೆನಿಸಿತು. ಆಕೆಯ ಭಾವವನ್ನು ಗ್ರಹಿಸಿದ್ದರಿಂದ ಉತ್ತೇಜಿತನಾಗಿ ಕೇಳಿದ, ವಸತಿಗೃಹದ ಹೊರಬಾಗಿಲಲ್ಲಿ :

"ಸಂಘದ ಕಾರ್ಯಕ್ರಮವಂತೂ ಮುಗಿಯಿತು. ಇನ್ನುಮೇಲೆ ನಿಮ್ಮ ಭೆಟ್ಟಿಯಾಗುವುದು ಅಪರೂಪವೆ !"

"ಸಂಘದ ಕೆಲಸ ಮುಗಿದರೂ ಕಾಲೇಜಿಲ್ಲವೆ ?"

ಕಾಲೇಜಿದೆ, ಆದರೆ ಪರೀಕ್ಷೆಯೂ ಇದೆ."

"ಹೂಂ....ಪರೀಕ್ಷೆ ಇದೆ. ಆದರೆ ಪರೀಕ್ಷೆಗೇನು ಇಪ್ಪತ್ತುನಾಲ್ಕು ಗಂಟೆ ಓದಬೇಕೆ ?"

"ನೀವೇನೋ ಈಗಾಗಲೇ ಎಲ್ಲ ಓದಿಕೊಂಡಿರಬೇಕು. ನನಗೆ ಮಾತ್ರ ಶ್ರೀಯಿಂದಲೇ ಪ್ರಾರಂಭ."

"ಇನ್ನೂ ಒಂದು ತಿಂಗಳ ಮೇಲಿದೆಯಲ್ಲ ?"

"ಇದೆ. ಆದರೂ...." ಎಂದು ಮಾಧವ ಅನುಮಾನಿಸುತ್ತಿರುವಾಗಲೇ ವಸತಿಯ ಆಳು ದೀಪ ಹಿಡಿದುಕೊಂಡು ಸರೋಜಿನಿ ಇದ್ದ ಕಡೆಗೆ ಬಂದ.

"ನಾಳೆ ಕಾಲೇಜಿಗೆ ಬರುತ್ತೀರಾ ? ಎಂದಳು ಸರೋಜಿನಿ.

"ಒಂದಿಷ್ಟು ತಡವಾಗಿ ಬಂದರೂ ಬಂದೆ."

"ಆಗಬಹುದು. ನಾನೂ ತಡವಾಗಿಯೇ ಬರುತ್ತೇನೆ. ಗುಡ್‌ನೈಟ್...."

"ಗುಡ್‌ನೈಟ್" ಎಂದು ಮಾಧವ ತಿರುಗಿದ. ಸರೋಜಿನಿ ತಿರುಗಿ ನೋಡಿದುದನ್ನು ಮಾಧವನೂ ನೋಡಿದ. ಆಕೆ ಕಣ್ಮರೆಯಾದನಂತರ ಸರಸರನೆ ಹೆಜ್ಜೆ ಹಾಕತೊಡಗಿದ.

ಮನೆಯ ಕಡೆಗೆ ಹೆಜ್ಜೆ ಹೊರಳಿದಹಾಗೆ ಮನಸ್ಸು ಆ ಕಡೆ ತಿರುಗಿತು. ಮಾಧವನಿಗೆ ವಿಚಿತ್ರವೆನಿಸಿತು. ಒಂದೆಡೆ ಸರೋಜಿನಿಯ ನೃತ್ಯ, ಸಂಗೀತ, ಕಲೆಗಾರಿಕೆ. ಅವೆಲ್ಲವನ್ನೂ ಮೀರಿಸುವಂಥ, ಹೃದಯವನ್ನು ತಣಿಸಿ ಎಲ್ಲಿಲ್ಲದ ಶಾಂತಿಯನ್ನು ಕೊಡುವಂಥ, ಆಕೆಯ ಸಹವಾಸ. ಇನ್ನೊಂದೆಡೆ ಬೇಡವಾದ ಆ ಮನೆ. ಅದಕ್ಕೂ ಹೆಚ್ಚಾಗಿ ಬೇಡವಾಗಿದ್ದ ಆ ಮನೆಯ ವಾತಾವರಣ ! ತನ್ನನ್ನು ಪ್ರೀತಿಸದಿದ್ದ ಆ ಕಕ್ಕ, ಕಕ್ಕಿ. ತನ್ನನ್ನು ಪ್ರೀತಿಸುತ್ತಿದ್ದರೂ ಏನನ್ನೂ ಮಾಡಲಸಮರ್ಥರಾದ ತಾಯಿ, ಭೀಮಣ್ಣ ! ಸರೋಜಿನಿಯ ಸಹವಾಸದಲ್ಲಿದ್ದಾಗ ಎಲ್ಲವನ್ನೂ ಮರೆಯುವುದು ಸಾಧ್ಯವೆನಿಸುತ್ತಿತ್ತು. ಮಾಧವ ಮರೆಯುತ್ತಲೂ ಇದ್ದ. ಹೆಜ್ಜೆಹಾಕುತ್ತಿರುವಾಗಲೇ ಯೋಚಿಸುತ್ತಲೂ ಇದ್ದ. ಹೀಗೆ ಯಾಕೆನಿಸಬೇಕು ? ಸರೋಜಿನಿ ಯಾರು ? ಆಕೆಯ ಕುಲಗೋತ್ರಗಳೊಂದೂ ತನಗೆ ಗೊತ್ತಿಲ್ಲದಿದ್ದರೂ ಆಕೆಯ ಬಗೆಯಲ್ಲಿ ಇಷ್ಟೊಂದು ಆತ್ಮೀಯತೆ ಯಾಕೆ ತನಗೆನಿಸಬೇಕು ? ತನ್ನಂತೆ ಸರೋಜಿನಿಗೂ ಅದೇ ತೆರದ ಸಮಾಧಾನವೆನಿಸುತ್ತಿರಬೇಕೆಂಬುದರಲ್ಲಿ ಮಾಧವನಿಗೆ ಸಂದೇಹವೇ ಉಳಿದಿರಲಿಲ್ಲ. ಕ್ಷಣಕ್ಷಣಕ್ಕೂ ಸರೋಜಿನಿ ತನ್ನ ಹತ್ತಿರಕ್ಕೆ ಹೆಚ್ಚಾಗಿ ಬರುವಂತಿತ್ತು. ತನ್ನ ಹತ್ತಿರವಿದ್ದಾಗ ತನ್ನಂತೆ ಆಕೆಗೂ ಮಾತಿಗೆ ನಿಲುಕದ ಯಾವುದೋ

ಒಂದು ಭಾವನೆ ಮೂಕಳನ್ನಾಗಿ ಮಾಡುತ್ತಿತ್ತು. ಸರೋಜಿನಿ ತನ್ನನ್ನು ಪ್ರೀತಿಸುತ್ತಿರಬಹುದೇ ? ಈ ವಿಚಾರ ಸುಳಿದೊಡನೆ ಮಾಧವನ ಮೈ ಜುಮ್ಮೆಂದಿತು. ತನ್ನ ಮನಸ್ಸಿನ ಒಗೆಯನ್ನೇ ಬಿಚ್ಚಿ ನೋಡಲೆತ್ನಿಸಿದ. ಎಷ್ಟು ಯೋಚಿಸಿದರೂ ತಾನು ಆಕೆಯ ಜತೆಯಲ್ಲಿ ಮಾತನಾಡುತ್ತಿದಾಗ ಉಳಿದವ ರಂತೆ ಮಾತನಾಡುತ್ತಿರಲಿಲ್ಲವೆಂಬುದರ ಹೊರತಾಗಿ ಯಾವ ನಿಷ್ಕರ್ಷೆಯೂ ಆಗಲಿಲ್ಲ. ಆಕೆಯ ಬಗೆ ಯೋಚಿಸಿದಾಗ ತನ್ನ ಮನಃಸ್ಥಿತಿ ಬೇರೆ ಯಾಕೆ ಆಗುತ್ತಿತ್ತೆಂಬುದನ್ನು ತಿಳಿಯುವುದು ಸಾಧ್ಯವಾಗಿ ಕಾಣಲಿಲ್ಲ. ಅದನ್ನು ತಿಳಿದಾದರೂ ಏನು ? ಎಂದುಕೊಂಡ. ಎಲ್ಲಿಲ್ಲದಿದ್ದರೂ, ಇಲ್ಲಿಯಾದರೂ— ಒಂದು ಕ್ಷಣದ ಮಟ್ಟಿಗಾದರೂ-ಮನಸ್ಸಿಗೆ ನೆಮ್ಮದಿ ದೊರಕುತ್ತಿದೆ—ದೊರಕ ಬಹುದು ಎಂಬ ಆಸೆ ಉಳಿದ ವಿಚಾರಗಳನ್ನು ತಡೆಹಿಡಿದು ನಿಲ್ಲಿಸಿತು. ಮನೆಯ ಸಮೀಪ ಬರುತ್ತಿರುವಾಗ ಮತ್ತೆ ಸುತ್ತಲಿನ ಕತ್ತಲೆಯ ಅರಿವು ಉಂಟಾ ಯಿತು. ಮನೆಯ ಎದುರಿನ ಸಮೀಪದಲ್ಲಿ ಎಲ್ಲಿಯೂ ದೀಪವಿರಲಿಲ್ಲ. ಈ ಮನೆ ಕತ್ತಲೆ ಮುಸುಕಿದ ಮನೆ! ತಾನು ಬೆಳಕಿಗಾಗಿ ಹಾತ್ರೊರೆಯುತ್ತಿದ್ದೇನೆ ಎಂದುಕೊಂಡ. ತನ್ನ ತಾಯಿಯ ಇತ್ತೀಚಿನ ಬದುಕನ್ನು ನೆನೆದಾಗಲೂ ಅದೇ ವಿಚಾರ ಮತ್ತೆ ಸುಳಿಯಿತು. ಆಶಾಕಿರಣ ಎಲ್ಲಿಯೂ ಕಾಣಲಿಲ್ಲ. ಮನೆಯ ಬಾಗಿಲು ತಟ್ಟುತ್ತಿರುವಾಗ ಸರೋಜಿನಿಯ ನೆನಪಾಯಿತು. ಸರೋಜಿನಿಯ ನೆನಪಾದೊಡನೆ ಆಕೆ ತನ್ನ ಜೀವನದಲ್ಲಿಯ ಆಶಾಕಿರಣ ಯಾಕಗಬಾರದು ? ಎಂದುಕೊಂಡ. ಹಾಗಾದರೆ ತಾಯಿಗೆ ? ತಟ್ಟನೆ ಭೀಮಣ್ಣನ ವಾತ್ಸಲ್ಯದ, ಸಮಾಧಾನದ ಮಾತು ನೆನಪಾಯಿತು. ಹೌದು. ಯಾಕಾಗಬಾರದು ? ಭೀಮಣ್ಣ ತಮ್ಮ ತಂಗಿಯನ್ನು ಸುಖಿಯಾಗಿ ಮಾಡಬಲ್ಲರು. ಸರೋಜಿನಿ ತನ್ನ ಮನಸ್ಸಿನ ಅಶಾಂತಿಯನ್ನು ಕಳೆಯಬಲ್ಲಳು !

ಮಾಧವ ಮನೆಯನ್ನು ಸೇರಿದಾಗ ವೇಳೆ ಹತ್ತೂವರೆಯಾಗಿ ಹೋಗಿತ್ತು. ಎಲ್ಲರ ಊಟ ಉಡಿಗೆಗಳೂ ಮುಗಿದುಹೋಗಿದ್ದವು. ರಾಧಕ್ಕ ಮಾತ್ರ ಮಗನು ಬರುವುದನ್ನೇ ಇದಿರುನೋಡುತ್ತ ಅಣ್ಣನೊಂದಿಗೆ ಏನನ್ನೋ ಮಾತ ನಾಡುತ್ತ ಕುಳಿತ್ತಿದ್ದರು. ಕಕ್ಕ ಕಕ್ಕಿಯರು ನಿದ್ರೆಹೋದಂತಿತ್ತು. ಮಾಧವ ಶರ್ಟು ಕಳೆಯುತ್ತಿರುವಾಗಲೇ ರಾಧಕ್ಕ ಕೇಳಿದಳು.

“ಎಷ್ಟು ಹೊತ್ತಪ್ಪಾ ಇದು ? ಮುಂಜಾನೆಯೂ ಊಟಮಾಡಿ ಹೋಗ ಲಿಲ್ಲ— ” ಎಂದರು.

“ಊಟ ಮಾಡದಿದ್ದರೆ ಉಪವಾಸವೇ ಇದ್ದಿದ್ದೇನೇನಮ್ಮಾ ?”

"ಮಧ್ಯಾಹ್ನ ಏನು ಮಾಡಿದೆ ?"

"ಅಲ್ಲಿಯೇ ಕಾಲೇಜಿನಲ್ಲಿ ಫಲಹಾರ ಮಾಡಿದೆ."

"ಅಷ್ಟರಿಂದ ಏನಾಗಬೇಕು ಇಡೀ ದಿವಸ? ನಡೆ ಬೇಗ. ಊಟಕ್ಕೆ ಬಡಿಸುತ್ತೇನೆ."

ನಿಜವಾಗಿ ಮಾಧವನಿಗೆ ಊಟಮಾಡುವ ಮನಸ್ಸಿರಲಿಲ್ಲ. ಫಲಾಹಾರವು ಯಥಾಸ್ಥಿತವಾಗಿತ್ತು. ಅಲ್ಲದೆ ಸರೋಜಿನಿಯಿಂದ ಸೂರೆಗೊಂಡ ಮನಸ್ಸು ಎಲ್ಲಕ್ಕಿಂತಲೂ ಹೆಚ್ಚಾಗಿ ಹೊಟ್ಟೆ ತುಂಬಿಸಿತ್ತು. ಆದರೆ ತಾಯಿಯ ಮನಸ್ಸನ್ನು ಮುರಿಯಲಾರದ್ದಕ್ಕೆ ಊಟಕ್ಕೆ ಬಂದು ಕುಳಿತು ಉಣ್ಣತೊಡಗಿದ. ಆದರೆ ಆತ ಮನಸ್ಸಿಲ್ಲದೆ ಊಟಮಾಡುತ್ತಿರುವುದು ರಾಧಕ್ಕನಿಗೆ ತಿಳಿಯದಿರಲಿಲ್ಲ. ಅವರಂದರು :

"ನಿನಗೆ ಹಸಿವಾದರೂ ಹೇಗಾಗುವುದಿಲ್ಲ, ದೇವರೇ ಬಲ್ಲ !"

"ಸಾಕಷ್ಟು ತಿಂದಿದ್ದೇನೆಂದರೆ ನಿನಗೆ ವಿಶ್ವಾಸವಿಲ್ಲಮ್ಮ."

"ಏನು ತಿಂದೆಯೋ ಏನೋ, ಬಿಡಪ್ಪ. ಈ ಹೊತ್ತೊಂದು ಬಡಿಸುತ್ತೇನೆ. ನಾಳೆ ನಾನು ಊರಿಗೆ ಹೋದೆನೆಂದರೆ..."ಎಂದು ಅರ್ಧಕ್ಕೆಯೇ ತಡೆದರು.

"ಹೋದರೇನಾಯಿತು ? ಊಟಕ್ಕೆ ಹಾಕುವುದಿಲ್ಲವೆ ?"

"ಹಾಕಿಯಾರು ಬಿಡು, ಆದರೆ..."

"ಎಲ್ಲವೂ ಅಷ್ಟೇ. ಹೆಚ್ಚು ಯೋಚನೆ ಮಾಡಬಾರದು. ಎಲ್ಲವೂ ನಡೆಯುವ ಹಾಗೆ ನಡೆಯುತ್ತದೆ." ಮಗನ ತಿಳಿವಿಗಾಗಿ ರಾಧಕ್ಕ ಅಭಿಮಾನ ಪಟ್ಟರೂ ಮರುಕ್ಷಣದಲ್ಲಿ ಈ ತಿಳಿವಿನಿಂದ ಹೊಟ್ಟೆಗೇನು ಪ್ರಯೋಜನ ಎಂದು ಕರುಳು ಕೊರೆಯಿತು. ಒಂದು ಕ್ಷಣ ಸುಮ್ಮನಿದ್ದು ಕೇಳಿದರು :

"ಇನ್ನೂ ನಿನ್ನ ಪರೀಕ್ಷೆಗೆ ಎಷ್ಟು ದಿವಸ ?"

"ಎಲ್ಲವೂ ಮುಗಿಯಲಿಕ್ಕೆ ಒಂದು ತಿಂಗಳು ಆದೀತು."

"ಮುಗಿದ ಕೂಡಲೆ ಊರಿಗೆ ಬಂದುಬಿಡುತ್ತೀಯಾ ?"

"ನೋಡುವಾ. ಪರೀಕ್ಷೆಯಂತೂ ಮುಗಿಯಲಿ."

"ಅದೇನೂ ಬೇಡಪ್ಪ. ಮುಗಿದ ಕೂಡಲೆ ಬಂದುಬಿಡು. ಭೀಮಣ್ಣನೂ ಅದನ್ನೇ ಹೇಳುತ್ತಿದ್ದಾನೆ. ಆಮೇಲೆ ಏನು ಮಾಡುವುದು ಬಿಡುವುದು ಎಲ್ಲ ಅಲ್ಲಿ ಬಂದನಂತರ ವಿಚಾರಮಾಡೋಣ ಅನ್ನುತ್ತಿದ್ದ."

ತನ್ನ ಮಟ್ಟಿಗೆ ಯಾವ ಕಾರ್ಯಕ್ರಮವೂ ನಿಶ್ಚಿತವಾಗಿರದ್ದರಿಂದ ತಾಯಿಗಾದರೂ ಸಮಾಧಾನವಾಗಲೆಂದು "ಆಗಲಿ, ಹಾಗೆಯೇ ಮಾಡುವೆ" ಎಂದ.

ಊಟ ಮುಗಿದಮೇಲೆ ಮತ್ತೆ ಮೂವರೂ ಎಷ್ಟೋ ವಿಷಯ ಮಾತನಾಡಿದರು. ಮರುದಿವಸ ಬೆಳಿಗ್ಗೆ ಹನ್ನೊಂದರ ರೈಲಿನಿಂದ ತಾವಿಬ್ಬರೂ ಹೊರಡುವುದಾಗಿಯೂ, ಪರೀಕ್ಷೆ ಮುಗಿದ ಕೂಡಲೆ ತಾನೂ ಅಲ್ಲಿಗೇ ಬರಬೇಕಾಗಿಯೂ ಭೀಮಣ್ಣ ತಿಳಿಸಿದ. ಹಾಸಿಗೆಯಲ್ಲಿ ಮಲಗಿಕೊಂಡಲ್ಲಿಂದಲೇ ಮಾಧವ ಕೇಳಿದ:

"ಏನು ಭೀಮಣ್ಣಾ, ಇಂದು ಸಾಯಂಕಾಲ ಬರಲೇ ಇಲ್ಲ ನೀನು? ಎಂಥ ಉತ್ತಮ ನೃತ್ಯ ನೋಡುವುದನ್ನು ತಪ್ಪಿಸಿಕೊಂಡೆ."

"ತೀರ ತಡವಾಗಿಬಿಟ್ಟಿತು. ಅಡತಿಯ ವ್ಯಾಪಾರಸ್ಥರ ಸಹವಾಸ. ದುಡ್ಡು ಕೈಬಿಡುವುದೆಂದರೆ ಅವರಿಗೆ ಜೀವ ಬಿಟ್ಟಕಿಂತಲೂ ಹೆಚ್ಚಾಗುತ್ತದೆ. ಅಲ್ಲಿಯೇ ನೆಲ ಹಿಡಿದು ಕುಳಿತೆ. ಅಂತೇ ಒಂದಿಷ್ಟಾದರೂ ಕೆಲಸವಾಯಿತು ಇಲ್ಲಿಯವರೆಗೆ ಬಂದದ್ದಕ್ಕೆ."

"ಅಂತೂ ವಸೂಲಿ ಆಯಿತೆನ್ನಬಾರದೆ ಹಾಗಾದರೆ ?"

"ಹುಂ....ದುಡ್ಡು ಬೇಕೂ ಇತ್ತು. ರಾಧಕ್ಕನಿಗೆ ಎರಡು ಸೀರೇನೂ ತರಬೇಕಾಗಿತ್ತು. ಅಲ್ಲಿಯಷ್ಟು ವೇಳೆ ಮುರಿಯಿತು. ಹೀಗಾಗಿ ನಾನು ಮನೆಗೆ ಬಂದದ್ದೇ ಒಂಬತ್ತು ಗಂಟೆ."

ದೀಪವನ್ನಾರಿಸಿ ಎಲ್ಲರೂ ಮಲಗಿಕೊಂಡರು. ಮಾಧವನ ವಿಚಾರ ಮೂರೆಡೆಗಳಲ್ಲಿ ಸುಳಿದಾಡುತ್ತಿತ್ತು. ಭೀಮಣ್ಣ—ತಾಯಿ—ಸರೋಜಿನಿ. ಅಕ್ಕರೆಯನ್ನರಿಯದ ಜೀವ ಭೀಮಣ್ಣನವರ ವಾತ್ಸಲ್ಯಕ್ಕಾಗಿ ಹಾತೊರೆಯುತ್ತಿತ್ತು. ತಂದೆಯಿಲ್ಲದಿದ್ದರೂ ತನಗಾಗಿ ತನ್ನ ಯೋಗ್ಯತೆಯ ಮಟ್ಟಿಗೆ ಬೇಕಾದುದನ್ನು ಮಾಡಲು ಸಿದ್ಧನಿದ್ದ ಸೋದರಮಾವ ! ಎಂಥ ಕಷ್ಟವಿದ್ದರೂ ತನಗಿಂತಲೂ ಹೆಚ್ಚಾಗಿ ಪ್ರೀತಿಸಲು ಬೇರೊಂದಿಲ್ಲದ ತಾಯಿ ! ಇದಕ್ಕೂ ಹೆಚ್ಚಿನದು ತನಗೇನು ಬೇಕಾದದ್ದು ? ಎಂದುಕೊಂಡ. ಮನಸ್ಸು ಸರೋಜಿನಿಯ ಕಡೆಗೆ ಓಡಿತು. ಸರೋಜಿನಿ ಇವರಿಬ್ಬರಿಂದಲೂ ಬೇರೆಯಾಗಿದ್ದಳು, ಆಕೆಯಿಂದ ಸಿಕ್ಕುತ್ತಿದ್ದ ಸಮಾಧಾನವೂ ಬೇರೆ ತೆರನಾಗಿದ್ದಿತು. ಸೋದರಮಾವನ ಅಕ್ಕರೆಯಲ್ಲ, ತಾಯಿಯ ಕರುಳ ವಾತ್ಸಲ್ಯವಲ್ಲ. ಇವೆರಡೂ ಅಲ್ಲದೆ, ಇವೆರಡಕ್ಕೂ ಸರಿಸಮಾನವಾದ ಸಮಾಧಾನವನ್ನು ಸರೋಜಿನಿ ಕೊಡಬಲ್ಲವಳಾಗಿದ್ದಳೆಂದು ತೋರಿತು !

ಮಾಧವ ಸರೋಜಿನಿಯನ್ನು ಕುರಿತು ಈ ರೀತಿ ಯೋಚಿಸುತ್ತಿರುವಾಗ ಸರೋಜಿನಿಯೂ ನಿದ್ರೆ ಬಾರದೆ ಹಾಸಿಗೆಯಲ್ಲಿ ಹೊರಳಾಡುತ್ತಿದ್ದಳು. ಕಾರ್ಯಕ್ರಮದ ಮೂಲಕ ದೇಹ ದಣಿದಿದ್ದರೂ ಮನಸ್ಸು ಉಲ್ಲಾಸದಲ್ಲಿತ್ತು.

ಅತಿಥಿಗಳ ಉತ್ತೇಜನಪರವಾದ ಮಾತುಗಳನ್ನು ನೆನೆದಾಗಲಂತೂ ಉತ್ಸಾಹ ಇಮ್ಮಡಿಸಿ ತನ್ನಲ್ಲಿಯ ಕಲೆಯನ್ನು ಬೆಳೆಸಿಕೊಂಡು, ಅದನ್ನೇ ಒಂದು ಸಾಧನೆಯನ್ನು ಮಾಡಿಕೊಳ್ಳಬೇಕೆನ್ನುತ್ತಿದ್ದಳು. ಇಷ್ಟು ಜನ ಈ ರೀತಿ ಹೊಗಳಬೇಕಾದರೆ ತನ್ನಲ್ಲಿ ಏನಾದರೂ ನಿಜವಾದ ಗುಣವಿರಲೇಬೇಕು ಎಂಬ ವಿಚಾರ ಬಂದಾಗ ಅಭಿಮಾನವೆನಿಸುತ್ತಿತ್ತು. ಆದರೆ ಆ ಗುಣದ ಅರಿವು ತನ್ನ ತಾಯಿಗೆ ಎಷ್ಟು ಮಾತ್ರವೂ ಇರಲಿಲ್ಲ ಎಂದು ವ್ಯಥೆಪಡುತ್ತಿದ್ದಳು. ತಾಯಿಯ ನೆನಹು ಬಂದಾಗ ಮನಸ್ಸು ಉದ್ವಿಗ್ನಗೊಳ್ಳುತ್ತಿತ್ತು. ಗೋವಿಂದಗೌಡನ ಚಿತ್ರವನ್ನು ಕಣ್ಣೆದುರು ನಿಲ್ಲಿಸುತ್ತಿತ್ತು. ಒಂದೆಡೆ ತಾಯಿ—ಗೋವಿಂದಗೌಡ. ಇನ್ನೊಂದು ಕಡೆ ಸಾಯಂಕಾಲ ತನ್ನ ಪ್ರಶಂಸೆಯನ್ನು ಮಾಡಿದವರು—ಮಾಧವ! ಜೀವನವನ್ನು ನೋಡುವ ಎರಡು ವಿಪರೀತ ದೃಷ್ಟಿಗಳ ಸಂಕೇತಗಳಂತೆಯೇ ಕಂಡರು ಸರೋಜಿನಿಗೆ. ಆದರೆ ತಾಯಿ! ಎಷ್ಟು ಹತ್ತಿರದವಳು! ಅವಳ ಮೂಲಕ ತನಗೆ ಎಷ್ಟು ಬೇಡವಾದರೂ ಗೌಡನೂ ಸಮೀಪದಲ್ಲಿಯೇ ಇದ್ದ. ಸಾಧ್ಯವಿದ್ದಷ್ಟೂ ಸಮೀಪಕ್ಕೆ ಬರಬೇಕೆನ್ನುತ್ತಿದ್ದ. ಇವರಿಬ್ಬರೂ ಸೇರಿ ತನ್ನಲ್ಲಿ ಒಳ್ಳೆಯದಾಗಿದ್ದುದೆಲ್ಲವನ್ನೂ ಹಾಳುಮಾಡುವ ಹಟ ತೊಟ್ಟಂತೆ ಕಂಡರು. ಇದಕ್ಕೆ ವಿರುದ್ಧವಾಗಿ ತನಗೆ ಉತ್ತೇಜನ ಕೊಡುವವರು ಎಷ್ಟು ದೂರ? ಇಂದಿಗೆ ಬಂದು ನಾಳೆಗೆ ಎಲ್ಲಿಯೋ ಹೊರಟುಹೋಗುವ ಅತಿಥಿಗಳು. ಪ್ರಯಾಣಿಕರಂತೆ ಕೆಲಕಾಲ ಮಾತ್ರ ಒಂದೆಡೆ ಸೇರಿದ ವಿದ್ಯಾರ್ಥಿಗಳು. ದುಷ್ಟ ಶಕ್ತಿಗಳೇ ತನಗೆ ಹತ್ತಿರವಾಗಿದ್ದುದನ್ನು ನೆನೆದಾಗ ಸರೋಜಿನಿಗೆ ವಿಪರೀತ ಸಂಕಟವಾಯಿತು. ಆದರೆ ಮಾಧವ? ದೂರವಾಗಿದ್ದರೂ ಸಮೀಪವಾಗಿದ್ದಂತೆ ಭಾಸವಾಗುತ್ತಿತ್ತು. ಆತನ ನಯ, ಮಾತಿನ ರೀತಿ ಸರೋಜಿನಿಯನ್ನು ಸೆರೆಹಿಡಿದಿದ್ದವು. ಮಾಧವನ ವಿಚಾರ ಬಂದೊಡನೆಯೇ ಉಳಿದುದೆಲ್ಲವೂ ಮಾಯವಾಗಿ ಆಕೆಯ ಹೃದಯ ಎಲ್ಲಿಯದೊ ಒಂದು ಆಸೆಯ ಸುಳಿಯಲ್ಲಿ ತೇಲುತ್ತಿತ್ತು. ಮಾಧವನಿಂದ ಮನಸ್ಸಿಗೊಂದು ನೆಮ್ಮದಿಯೇನೊ ನಿಜ. ಆದರೆ ಆತನ ಮೂಲಕ ತಾನು ತನ್ನ ಸಂಕಟದಿಂದ ಪಾರಾಗಲು ಸಾಧ್ಯವೇ? ಎಂದುಕೊಂಡಾಗ ಮಾಧವನೂ ದೂರದೂರವೆನಿಸಿಬಿಡುತ್ತಿದ್ದ. ಮಾಧವನು ಯಾರು ಎಂಬುದು ಕೂಡ ಪೂರ್ತಿ ತಿಳಿಯದೆ ಇದ್ದಾಗ ತನ್ನ ಉದ್ಧಾರ ಅವನಿಂದ ಸಾಧ್ಯವೆ ಎನ್ನುವ ಪ್ರಶ್ನೆಗೂ ಉತ್ತರಸಿಗಲಿಲ್ಲ ಸರೋಜಿನಿಗೆ ಆದರೆ ಅದೇನಿದ್ದರೂ ತಾಯಿ, ಗೌಡ ದಕ್ಷಿಣಧ್ರುವ. ಆದರೆ ಮಾಧವ ಉತ್ತರಧ್ರುವ! ಅದರಲ್ಲಿ ಸಂದೇಹವಿರಲಿಲ್ಲ. ಮುಸುಕುವ ಕತ್ತಲೆಯಲ್ಲಿ ಮಾಧವನೇ

ಆಶಾತಾರೆಯಾದನು. ಕತ್ತಲೆಗೆ ಹೆದರಿದವನಿಗೆ ದೂರದಲ್ಲಿ ಎಲ್ಲಿಯೋ ಕಾಣುವ ಸೊಡರೂ ಧೈರ್ಯಕೊಡುವಂತೆ ಮಾಧವನ ನೆನಹು ಸರೋಜಿನಿಗೆ ಎಷ್ಟೋ ಧೈರ್ಯತಂದುಕೊಟ್ಟಿತು. ಸಾಯಂಕಾಲದ ಆತನ ಮಾತು, ರೀತಿಗಳನ್ನು ನೆನೆದಾಗ ಒಂದು ಕ್ಷಣ ಅವಳಿಗೆನಿಸಿತು--ಮಾಧವನಿಂದಲೇ ತನ್ನಲ್ಲಿಯ ಗುಣಕ್ಕೆ ಸಾಫಲ್ಯ ದೊರಕಬಹುದು ಎಂದು.

ಆದರೆ ಸಾಧ್ಯವೇ ಅದು ? ಎಂದು ಮತ್ತೆ ಸಂಶಯ. ಎಂಥ ಬಲವತ್ತರವಾದ ಶಕ್ತಿಗಳ ಹಿಡಿತದಲ್ಲಿ ಸಿಕ್ಕವಳು ತಾನು ಎಂಬುದನ್ನು ನೆನೆದು ಇದ್ದ ಆಸೆಯನ್ನೂ ಬಿಡುವಂತಾದಳು. ತಾಯಿಯ ವಿಚಾರಹೀನವಾದ ಹಟವನ್ನು ನೆನೆದು ನಡುಗಿದಳು. ತಾನು ಕಾಲೇಜಿಗೆ ಬರುವ ಮುನ್ನ ಆರು ತಿಂಗಳ ಹಿಂದಿನ ಸನ್ನಿವೇಶವೊಂದು ಕಣ್ಣುಮುಂದೆ ನಿಂತಿತು.

ಊರಲ್ಲಿಯ ಕೃಷ್ಣಪ್ಪ ಕೋಮಟಿಯವರ ಮನೆಯಲ್ಲಿ ಮದುವೆ ನಡೆದಿತ್ತು. ಕೃಷ್ಣಪ್ಪನವರೆಂದರೆ ಊರಿಗೆ ಸಾಹುಕಾರರು. ಲಗ್ನ ಸಮಾರಂಭ ಒಳ್ಳೆ ಉತ್ಸವದಿಂದ ನಾಲ್ಕೈದು ದಿನ ನಡೆದಿತ್ತು. ಮದುಮಗಳ ಮಂಗಲ ಸೂತ್ರವನ್ನು ಪವಣಿಸುವ ಕೆಲಸ ಊರಿಗೆ ಹೆಸರಾದ "ನಿತ್ಯಸುಮಂಗಲೆ" ಯಾದ ರಂಗಸಾನಿಯ ಕಡೆಗೆ ಬಂದಿದ್ದರಿಂದ ಲಗ್ನ ಸಮಾರಂಭದಲ್ಲಿ ಆಕೆಗೂ, ಸರೋಜಿನಿಗೂ ಒಂದುಸ್ಥಾನ ದೊರಕಿತ್ತು. ಆ ಮಂಗಲ ಕೆಲಸಕ್ಕಾಗಿ ರಂಗಸಾನಿಗೆ ಉಡುಗೊರೆಯೂ ದೊರಕಿತ್ತು. ಆದರೆ ಕೃಷ್ಣಪ್ಪನವರಿಗೆ ರಂಗಸಾನಿಗೆ ಕೊಟ್ಟ ಸೀರೆಯಿಂದ ತೃಪ್ತಿಯಾದಂತೆ ಕಾಣಲಿಲ್ಲ. ಸರೋಜಿನಿಗೂ ಏನಾದರೂ ಕೊಡಬೇಕೆಂಬ ದೃಷ್ಟಿಯಿಂದ ಕೊನೆಯ ದಿನ ಆಕೆಯ ನೃತ್ಯದ ಕಾರ್ಯಕ್ರಮವನ್ನು ಏರ್ಪಡಿಸಿದ್ದರು. ರಂಗಸಾನಿಯ ಉತ್ಸಾಹಕ್ಕೆ ಮೇರೆಯೇ ಉಳಿದಿರಲಿಲ್ಲ—ಕೃಷ್ಣಪ್ಪನಂಥ ಸಾಹುಕಾರರು ತಾವಾಗಿಯೇ ಸರೋನಿಜಿನಿಯ ಕಾರ್ಯಕ್ರಮವನ್ನು ಬೇಡಿ ಇಡಿಸಿಕೊಂಡರೆಂದು. ಇದಕ್ಕೆ ಬೇರೆಯಾದ ಕಾರಣವೂ ಒಂದಿತ್ತು. ಸ್ವಭಾವತಃ ಕೃಷ್ಣಪ್ಪನವರು ರಸಿಕರು, ಸಂಗೀತ ಪ್ರಿಯರು. ಯಾವ ಉತ್ಸವ ಪ್ರಸಂಗವಿರದಿದ್ದರೂ ವರ್ಷಕ್ಕೆ ಮೂರು ನಾಲ್ಕು ಬಾರಿಯಾದರೂ ಅವರ ದಿವಾಣಖಾನೆಯಲ್ಲಿ ಸಂಗೀತ ಕಛೇರಿಗಳು ನಡೆಯುತ್ತಿದ್ದವು. ಅವರ ಮನೆಯಲ್ಲಿ ಕಛೇರಿಯಾದರೆ ಊರಿಗೇ ಚೈತನ್ಯವಾಗಿರುತ್ತಿತ್ತಲ್ಲದೆ, ಸಂಗೀತವೂ ಚೈತನ್ಯಕ್ಕೆ ತಕ್ಕುದಾಗಿಯೇ ಇರುತ್ತಿತ್ತು. ಅಂಥಿಂಥ ಸಂಗೀತಗಾರರಿಗೆ ಅಲ್ಲಿ ಪ್ರವೇಶ ದೊರೆಯುವುದೇ ಸಾಧ್ಯವಿರಲಿಲ್ಲ. ಅಂಥವರು ತಾವಾಗಿಯೇ ಸರೋಜಿನಿಯ ಕಾರ್ಯಕ್ರಮವನ್ನು ಇಡಿಸಿದ್ದು

ರಂಗಸಾನಿಗೆ ಅಭಿಮಾನವೆನಿಸಿದ್ದರೆ ಆಶ್ಚರ್ಯವಿರಲಿಲ್ಲ. ಆಕೆಯ ಅಭಿಮಾನವನ್ನು ಸರಿಗಟ್ಟುವಂತೆಯೇ ಸರೋಜಿನಿಯಾದರೂ ಕಾರ್ಯಕ್ರಮವನ್ನು ನಡೆಸಿಕೊಟ್ಟಿದ್ದಳು. ಕೃಷ್ಣಪ್ಪನವರಂತೂ ಕ್ಷಣಕ್ಷಣಕ್ಕೆ 'ಭೇಷ್ !' ಎಂದು ಸಿಫಾರಸು ಮಾಡಿದ್ದರು. ನೃತ್ಯಗೀತಗಳು ಮುಗಿದಾಗ ಕೃಷ್ಣಪ್ಪನವರು ಸರೋಜಿನಿಗಾಗಿ ಸೀರೆಯುಷ್ಟೆ ಏಕೆ ಏನನ್ನೂ ಕೊಡುವ ಮನಃಸ್ಥಿತಿಯಲ್ಲಿದ್ದರು. ಉತ್ಸವಕ್ಕೆ ತಕ್ಕಂತೆ ಅವರು 'ಔಷಧ'ದ ಉತ್ತೇಜನವನ್ನೂ ತೆಗೆದುಕೊಂಡಂತಿತ್ತು.

ಕಾರ್ಯಕ್ರಮ ಮುಗಿದು ಅಭ್ಯಾಗತರುಗಳೆಲ್ಲರೂ ಕೆಳಗಿಳಿದು ಹೊರಟು ಹೋದಾಗ ರಂಗಸಾನಿಯೂ ನಮಸ್ಕರಿಸಿ ಹೊರಡುವುದರಲ್ಲಿದ್ದಳು.

"ಹೊರಟೇಬಿಟ್ಟೆಯಾ? ಇಂಥದೇನವಸರ?" ಎಂದರು ಕೃಷ್ಣಪ್ಪನವರು. ತಾಯಿಯನ್ನು ಕುರಿತು ಅವರ ಸಲಿಗೆಯ ಏಕವಚನ ಸರೋಜಿನಿಗೆ ಅರೆಕ್ಷಣ ವಿಚಿತ್ರವೆನಿಸಿತು. ಅನುಮಾನವೂ ಎನಿಸಿತು. ಆದರೆ ನಡೆದುದನ್ನು ನೋಡುವುದರ ಹೊರತಾಗಿ ಬೇರೆ ಏನನ್ನೂ ಆಕೆ ಮಾಡಲು ಸಾಧ್ಯವಿರಲಿಲ್ಲ.

"ಮಗಳಿಂದ ಇಂಥ ಅದ್ಭುತ ನೃತ್ಯ ಮಾಡಿಸಿದೆ. ನಮಗಷ್ಟು ವೀಳ್ಯ ಕೊಡಿಸುವುದಿಲ್ಲವೆ ?" ಎಂದು ನಗೆಯಾಡಿ ಕೇಳಿದರು. "ಹೋಗುವಿಯಂತೆ ಕುಳಿತುಕೊ, ನಿಮಗಾಗಿ ಸ್ಪೆಷಲ್ಲಾಗಿ ಚಹ ಮಾಡಹೇಳಿದ್ದೇನೆ" ಎಂದರು.

"ಏನು ಸಾಹುಕಾರರೇ, ನೀವೂ ಹೀಗೆ ಆಡಬಹುದೆ? ವೀಳ್ಯ ಬೇಡ ಬೇಕೇ ನೀವು ?"

"ನೀನು ಕೊಡಲೂ ಇಲ್ಲ, ಕೊಡಿಸಲೂ ಇಲ್ಲ. ಅಂದಮೇಲೇನು ಮಾಡುವುದು ?" ಎಂದು ಹುಸಿನಗೆಯನ್ನು ಬೀರಿದರು. ಕೃಷ್ಣಪ್ಪನವರ ಮನೋಗತ ರಂಗಸಾನಿಗೆ ಯಾವಾಗಲೋ ತಿಳಿದಿತ್ತು. ಆದರೆ ಬಿಗಿಹಿಡಿಯದೆ ಕೋಪಪಟ್ಟ ಕೈ ಬಿಚ್ಚುವವನಲ್ಲವೆಂದು ತಿಳಿದವಳಾದ್ದರಿಂದಲೇ ನಗೆಮಾತಿಗೆ ಪ್ರತಿಯಾಗಿ ಸುಳ್ಳು ವಿನಯವನ್ನು ಬೀರುತ್ತಿದ್ದಳು.

ಚಹ ಕುಡಿದಾದಮೇಲೆ ವೀಳ್ಯದ ಉಪಚಾರವಾಯಿತು. ರಂಗಸಾನಿಯ ನಿರ್ಭೀತವಾದ ವೃತ್ತಿ ಸರೋಜಿನಿಯಲ್ಲಿ ಬೆರಗನ್ನು, ನಾಚಿಕೆಯನ್ನು ಹುಟ್ಟಿಸಿದ್ದವು. ದಿಂಬುಗಳ ಮೇಲೆ ಮೈ ಚೆಲ್ಲುತ್ತ ಕೃಷ್ಣಪ್ಪನವರು ರಂಗಸಾನಿಯ ಕಡೆಗೆ ಸೂಚ್ಯವಾಗಿ ನೋಡಿ ಸರೋಜಿನಿಯ ಕಡೆಗೆ ಹುಬ್ಬು ಹಾರಿಸಿದರು. ರಂಗಸಾನಿ ಅಹುದೋ ಅಲ್ಲವೋ ಎನಿಸುವಂತೆ ತಲೆ ಅಲ್ಲಾಡಿಸಿದಳು. ಸರೋಜಿನಿಗೆ ವಿಚಿತ್ರವೆನಿಸುತ್ತಿತ್ತು—ತಾಯಿಯ ವೃತ್ತಿ ಹೇಸಿಕೆಯನ್ನುಂಟು

ಮಾಡುತ್ತಿತ್ತು. ಕೃಷ್ಣಪ್ಪನವರು ತಟ್ಟನೆ ಎದ್ದು ಬದಿಯಲ್ಲಿಯ ಕೋಣೆಯನ್ನು ಸೇರಿದರು. ಅವರಿಂದ ರಂಗಸಾನಿಗೆ ಯಾವ ಸೂಚನೆಯಾಯಿತೊ ತಿಳಿಯಲಿಲ್ಲ, ಅವಳೂ ಹಿಂಬಾಲಿಸಿ ಹೋದಳು. ಬಾಗಿಲ ಮರೆಯಲ್ಲಿ ಏನೇನೋ ಮಾತು ನಡೆದಿದ್ದವು. ಸರೋಜಿನಿಗೆ ಅತ್ತಕಡೆಗೆ ಎಷ್ಟು ಪರಿಯಿಂದ ದುರ್ಲಕ್ಷ್ಯ ಮಾಡಬೇಕೆಂದರೂ ಇದುವರೆಗಿನ ಎಲ್ಲ ಸೂಚನೆ ತನ್ನ ಬಗೆಯಲ್ಲಿಯೇ ನಡೆದಿರಬಹುದೆಂಬ ಸಂಶಯದ ಮೂಲಕ ಕೇಳಬೇಕೆಂಬ ಕುತೂಹಲ ಇಮ್ಮಡಿಸುತ್ತಿತ್ತು. ಆಕೆ ಕೇಳಬಾರದೆಂಬ ಸಂಕೋಚ ರಂಗಸಾನಿಗೆ ಇರದೆ ಇದ್ದುದರಿಂದ ಅರೆಮರ್ಧ ಗಟ್ಟಿಯಾಗಿಯೇ ಮಾತನಾಡುತ್ತಿದ್ದ ಆಕೆಯ ಶಬ್ದಗಳು ಸರೋಜಿನಿಯ ಕಿವಿಯನ್ನು ಸೇರುತ್ತಿದ್ದವು.

"ಹಾಗಾದರೆ ಹೇಗೆ ?'' ಎಂದು ಕೃಷ್ಣಪ್ಪನವರು.

"ಹೇಗೆ ? ಏನು ನೀವು ಹೇಳಿದ ಹಾಗೆ'' ಎಂದು ರಂಗಸಾನಿ.

"ನಾನೇನು ಹೇಳುವುದು ? ನೀನೇ ಹೇಳಬೇಕು.''

"ಆಕೆಗಿನ್ನೂ ಮೊದಲತನ__''

"ಅಂತೆಯೇ ಕೇಳಿದೆ.''

"ಗೋವಿಂದಗೌಡ ಮೂರು ಸಾವಿರ ಎಂದಿದ್ದಾನೆ !''

"ಯಾರು ? ವಕೀಲ ಗೋವಿಂದಗೌಡನೆ ?''

"ಹುಂ__''

"ಅದೇನು ಕೊಟ್ಟೀತು ? ಬರೀ ಮಾತು.''

"ಇಲ್ಲ. ನಿಜವಾಗಿಯೂ ಹೇಳಿದ್ದಾನೆ.''

"ಹೇಳಿರಬಹುದು. ಕೊಡುವನೆಲ್ಲಿಂದ ? ಆತ ಸಾಲ ಒಯ್ಯುವುದು ನನ್ನ ಕಡೆಯಿಂದ; ನನಗೆ ಗೊತ್ತಿಲ್ಲವೆ ಆತನ ಯೋಗ್ಯತೆ ?''

"ಎಷ್ಟಾದರೂ ದೊಡ್ಡ ಗೌಡರು. ಆಸ್ತಿಪಾಸ್ತಿ__''

"ಅದನ್ನೆಲ್ಲ ತೆಗೆದುಕೊಂಡು ನನಗೇನು ? ಆತನ ಕೈಗೆ ಬಂದಾಗ ಅದೆಲ್ಲ. ಅದು ಹೋಗಲಿ. ಮೂರು ಸಾವಿರ ಜಾಸ್ತಿಯಾಯಿತು.''

'ಎಷ್ಟಾದರೂ ಕೋಮಟಿ. ಈತನೇನು ಕೊಟ್ಟಾನು ?'' ಎನ್ನುವಂತೆ ರಂಗಸಾನಿ ತುಸು ನಿರುತ್ಸಾಹಿತಳಾದಳು. ಗೌಡನ ಮನೆತನದ ವಿಷಯದಲ್ಲಿ ಕೃಷ್ಣಪ್ಪನವರಿಗೆ ಆದರವಿರದ್ದನ್ನು ತಿಳಿದ ರಂಗಸಾನಿಯ ಮನಸ್ಸಿನ ಮೇಲೆ ಅವರ ತೆಗಳಿಕೆಯ ಮಾತು ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ.

"ನಿಮ್ಮಂಥವರು ಹೀಗೆ ದುಡ್ಡಿನ ಎಣಿಕೆಹಾಕಿದರೆ ನಾವು ಬದುಕುವು

ವಾದರೂ ಹೇಗೆ? ನೀವು ಮನಸ್ಸು ಮಾಡಬೇಕು" ಎಂದು ಶ್ಲಾಘಿಸಿದಳು.

ಆದರೆ ದುಡ್ಡಿನ ಲೆಕ್ಕ ಕೃಷ್ಣಪ್ಪನವರ ಉತ್ಸಾಹವನ್ನು ತಗ್ಗಿಸಿಬಿಟ್ಟಿತ್ತು. ತಗ್ಗಿದ ಉತ್ಸಾಹದಲ್ಲಿಯೇ ಕೊನೆಯಾಗಿ ಹೇಳಿದ್ದರು "ನೋಡು, ಮತ್ತೊಮ್ಮೆ ವಿಚಾರಮಾಡಿ ತಿಳಿಸು, ಬೇಕಾದರೆ—" ಎಂದು. ಆ ಮಾತಿನೊಡನೆಯೇ ಇಬ್ಬರೂ ಮೊದಲು ಕುಳಿತಲ್ಲಿಗೆ ಬಂದಿದ್ದರು. ಸರೋಜಿನಿಗೆ ಒಳಗಿನಿಂದ ಸಿಟ್ಟು ಜ್ವಾಲಾಮುಖಿಯಾಗಿ ಉರಿಯುತ್ತಿದ್ದರೂ ಅವರಿಬ್ಬರೆದುರು ಸುಮ್ಮನಾಗಿಯೇ ಇರಬೇಕಾಗಿ ಬಂದಿತ್ತು. ಈಗಲಂತೂ ಮೈಮೇಲಿನ ಪ್ರಸಂಗ ಜಾರಿತು ಎಂಬ ಸಮಾಧಾನವೇ ಆಕೆಯನ್ನು ಸುಮ್ಮನಾಗಿರಿಸಿತ್ತು. ಒಂದೆರಡು ನಿಮಿಷ ಯಾರೂ ಮಾತನಾಡಲಿಲ್ಲ. ಕೃಷ್ಣಪ್ಪನವರು ಮತ್ತೆ ಕೋಣೆಯೊಳಕ್ಕೆ ಹೋಗಿ ಕಾರ್ಯಕ್ರಮಕ್ಕಾಗಿ ಗೊತ್ತುಮಾಡಿದ ನೂರು ರೂಪಾಯಿಗಳನ್ನೂ ಒಂದು ಜರದ ಸೀರೆಯನ್ನೂ ತಂದು ಸರೋಜಿನಿಯ ಎದುರು ಹಿಡಿದು "ಇದು ನಿನಗಾಗಿ, ತೆಗೆದುಕೊ" ಎಂದರು. ಸರೋಜಿನಿ ತೆಗೆದುಕೊಂಡು ನಮಸ್ಕರಿಸಿದಳು. ರಂಗಸಾನಿ "ಅವರಿಗೆ ವೀಳ್ಯ ಕೊಡು, ಆಮೇಲೆ ಹೊರಡೋಣ" ಎಂದಳು. ಸಾಧ್ಯವಾದಷ್ಟು ಬೇಗ ಅಲ್ಲಿಂದ ಕಾಲು ತೆಗೆಯಬೇಕೆಂದಿದ್ದ ಸರೋಜಿನಿ ವೀಳ್ಯವೊಂದನ್ನು ಮಡಿಸಿ ಕೃಷ್ಣಪ್ಪನ ಕೈಗಿಟ್ಟು ಎದ್ದುನಿಂತಳು. "ವೀಳ್ಯ ಕೊಡುವುದು ಹೀಗೆಯೇ?" ಎಂದು ಅವರೆಂದುದಕ್ಕೆ ರಂಗಸಾನಿ "ಆಕೆಗೇನು ಗೊತ್ತು? ಇನ್ನೂ ಪಾಠವಾಗಬೇಕು" ಎಂದು ನಕ್ಕು ನುಡಿದಳು. ಅವರಿಬ್ಬರನ್ನೂ ಕೃಷ್ಣಪ್ಪನವರು ಹೊರಬಾಗಿಲವರೆಗೂ ಬಂದು ಬೀಳ್ಕೊಟ್ಟಿದ್ದರು.

ಕೃಷ್ಣಪ್ಪನವರ ಕತೆ ಅಲ್ಲಿಗೇ ಮುಗಿದರೂ ಗೋವಿಂದಗೌಡ ಮಾತ್ರ ನೆರಳಿನಂತೆ ಹಿಂಬಾಲಿಸುತ್ತಿದ್ದ. ಅವನಿಂದ ಎಂದಾದರೂ ಬಿಡುಗಡೆಯಾಗಬಹುದೆ? ಎಂದುಕೊಂಡಳು. ಅವನ ಸಂಬಂಧ ತಪ್ಪಬೇಕಾದರೆ ತಾಯಿಯ ಸಂಬಂಧ ತಪ್ಪಬೇಕು. ತಾಯಿಯ ಸಂಬಂಧವನ್ನು ತಪ್ಪಿಸುವುದು ಸಾಧ್ಯವೆ? ಒಂದು ವೇಳೆ ಅದನ್ನು ಸಾಧ್ಯವಾಗಿಸಿದರೂ ಗೌಡನನ್ನು ತಪ್ಪಿಸುವುದು ಸಾಧ್ಯವಾಗಿ ಕಾಣಲಿಲ್ಲ. ವೇಶ್ಯೆಯಾದ ತನ್ನ ತಾಯಿಯ ಮಗಳಾದುದನ್ನು ಜಗತ್ತು ಮರೆಯುವಂತಾದರೆ ಮಾತ್ರ ಈ ಸಂಕಟದಿಂದ ಪಾರಾಗಾಲಾದೀತು ಎನಿಸಿತು. ಆದರೆ ಅದು ಹೇಗೆ ಸಾಧ್ಯ? ರಂಗನಾಯಕಿ ವೇಶ್ಯೆ. ತಾನು ಆಕೆಯ ಮಗಳು. ಅಬಾಧಿತವಾಗಿದ್ದ ಈ ಕಟುಸತ್ಯ ಆಜನ್ಮವೂ ತನ್ನನ್ನು ಬೆನ್ನಟ್ಟಿ ತನ್ನ ಬದುಕನ್ನು ಹಾಳುಮಾಡುವಂತಾದರೆ—ತಾನು ಹಾಳಾದರೆ—ಅದಕ್ಕೆ ಹೊಣೆ

ಯಾರದು? ಯಾರ ಹೊಟ್ಟೆಯಲ್ಲಿ ಹುಟ್ಟಬೇಕೆಂಬ ಆಯ್ಕೆ ಹುಟ್ಟುವವನ ಕೈಸೇರಿದುದಲ್ಲವಲ್ಲ! ಹುಟ್ಟಿಸಿ ಬದುಕಿಸುವವನ ಮಾತು ಹೇಗೂ ಇರಲಿ. ತಾನು ಹೀಗೆ ಹುಟ್ಟಿ, ಹೀಗೆ ಕಷ್ಟಪಡಬೇಕಾದರೆ ಅದಕ್ಕೆ ಕಾರಣವೇನು? ಸೃಷ್ಟಿ ಈ ರೀತಿಯ ವಿಪರೀತಗಳನ್ನು ಮಾಡಿ ಮನುಷ್ಯನ ಮೋಜು ನೋಡಬೇಕು ಎನ್ನುತ್ತಿರಬಹುದೆ? ಸರೋಜಿನಿಯ ಯೋಚನೆಗೆ ತುದಿ ಮೊದಲಿಲ್ಲವಾಯಿತು. ಸೃಷ್ಟಿಯೇನು ಮಾಡೀತು? ಸುತ್ತಲಿನ ಸಮಾಜ ತಮ್ಮಂಥವರನ್ನು ನೋಡುವುದರಲ್ಲಿಯ ದೋಷ ಇದು. ಮನುಷ್ಯ ಮಾಡಿ ನಡೆಯಿಸುತ್ತಿದ್ದ ಅನ್ಯಾಯಕ್ಕೆ ಸೃಷ್ಟಿಯೇನು ಮಾಡೀತು? ಎಂದುಕೊಂಡಳು. ವೇಶ್ಯಾವೃತ್ತಿಯ ಪರಂಪರೆಯನ್ನು ನಡೆಯಗೊಟ್ಟ ಮನುಷ್ಯನ ಅನ್ಯಾಯದ ಭಾರದ ಕೆಳಗೆ ಸಿಕ್ಕುತ್ತ ತಲೆತಲಾಂತರದಲ್ಲಿ ತನ್ನಂತೆ ಎಷ್ಟು ಜೀವಗಳು ಜರ್ಜರಿತವಾದುವೊ?

ಹೀಗೆ ಯೋಚನೆ ಮುಂದೋಡುತ್ತಿರುವಾಗ ಸರೋಜಿನಿಯ ಹಟವೂ ನಿರ್ಧಾರ ಕಟ್ಟುತ್ತಿತ್ತು. ಇದು ಅನ್ಯಾಯವೆಂದು ತಿಳಿದವರೂ ಯಾಕೆ ಅದಕ್ಕೆ ತಲೆಬಾಗಬೇಕು? ತಾಯಿ ತನ್ನ ಬಗೆಯಲ್ಲಿ ಬಯಸುತ್ತಿದ್ದುದು ಅನ್ಯಾಯ ವೆಂದು ಖಂಡಿತವಾಗಿ ತನಗೆ ಅನಿಸುತ್ತಿದ್ದಾಗ ತಾಯಿಯನ್ನಾದರೂ ತಾನು ಧಿಕ್ಕರಿಸಿ ಯಾಕೆ ಮುಂದೆ ಸಾಗಬಾರದು? ಗೌಡನಿಗೆ—ಗೌಡನಂಥವರಿಗೆ—ಎದುರಾಗಿ ನಿಂತು ಅವರನ್ನು ಪ್ರತಿಭಟಿಸಿ ಅವರು ನಡೆಯಿಸಬೇಕೆನ್ನುತ್ತಿದ್ದ ಅನ್ಯಾಯದ ಅರಿವನ್ನು ಅವರಿಗೇಕೆ ತಂದುಕೊಡಬಾರದು? ಎನ್ನಿಸುತ್ತಿತ್ತು. ಆದರೆ ಇದು ಸಾಧ್ಯವೇ? ತನ್ನ ಹೋರಾಟ ಸಮಾಜದ ಒಂದು ಬುದ್ಧಿಹೀನ ವಾದ ಮನೋವೃತ್ತಿಯ ವಿರುದ್ಧವಾದ ಹೋರಾಟ ಎಂದುಕೊಂಡಳು. ಆದರೆ ಆ ಹೋರಾಟ ನಡೆಯಿಸಿ ಗೆಲ್ಲುವೆನೆಂಬ ವಿಶ್ವಾಸ ಮಾತ್ರ ಹುಟ್ಟಲಿಲ್ಲ. ಮನುಷ್ಯ ತನ್ನ ಭಾಗ್ಯ ಗೋಪುರವನ್ನು ತಾನೇ ಕಟ್ಟುತ್ತಾನೆಂಬ ಮಾತು ಸುಳ್ಳು ಎನಿಸಿತು ಸರೋಜಿನಿಗೆ. ಎಂಥ ಸಾಮರ್ಥ್ಯವಿದ್ದರೂ ಎಂಥ ಯೋಗ್ಯತೆ ಯಿದ್ದರೂ, ಆತನ ಪೂರ್ವಾಪರಗಳು ಈ ರೀತಿಯಾಗಿ ಕಾಡಿ ಬೆನ್ನಟ್ಟುವ ವಾದರೆ ಯಾವ ಯೋಗ್ಯತೆ ಏನು ಮಾಡೀತು ಎಂದುಕೊಂಡಳು. ತನ್ನ ಬದುಕನ್ನು ಭೂತಕಾಲದ ಬೇತಾಳ ಎಂದೆಂದಿಗೂ ಹಿಂಬಾಲಿಸಿ ಹದಗೆಡಿಸ ಬಲ್ಲುದಾದರೆ ತಾನು ಏನು ಮಾಡಿದರೇನು ಎಂದೆನಿಸಿ ನಿರಾಶೆಗೊಂಡಳು. ತನ್ನ ತಾಯಿ ತನ್ನ ಹಿಂದಿನವಳು. ಅವಳ ನೀಚವೃತ್ತಿ ಅವಳಿಗೆ ಸಂಬಂಧ ಪಟ್ಟದ್ದು. ಅವಳ ವೃತ್ತಿಯ, ಅವಳ ಪಾಪದ ಹೊಣೆ ಅವಳದು. ಅದೆಲ್ಲದರ

ವಿಪರೀತ ಪರಿಣಾಮ ತನ್ನ ಬದುಕಿನ ಮೇಲಾಗಬೇಕಾದರೆ ಹಿಂದಿನದೆಲ್ಲವೂ ಅಳಿದುಹೋಯಿತು ; ಇಂದಿನದೇ ಸತ್ಯವೆಂದು ಹೇಳುವುದು ಭ್ರಮವೆನಿಸಿತು. ಇಂದಿನ ಬದುಕಿನಲ್ಲಿ— ಇಂದಿನ ಈ ಕ್ಷಣದಲ್ಲಿ—ಹಿಂದಿನ ಬದುಕು, ಹಿಂದಿನ ಹತ್ತು ಸಾವಿರ ವರ್ಷಗಳೂ ಹುದುಗಿಕೊಂಡಿರಬೇಕು. ಅಂತೆಯೇ ಈ ತೊಂದರೆ. ಈ ಹಿಂದೆ ಹೋದುದನ್ನು ಮರೆಯುವುದು, ಮರೆಸುವುದು ಹೇಗೆ ಸಾಧ್ಯ. ಗತಿಸಿದ ಕಾಲ ಭೂತದಂತೆ ಬೆನ್ನಟ್ಟುವುದೆಂದೇ ಅದಕ್ಕೆ 'ಭೂತ'ಕಾಲವೆನ್ನುತ್ತಿರಬಹುವುದೇ ? ಎಂದುಕೊಂಡಳು. ಅದು ಹೇಗಿದ್ದರೂ ಕೊನೆಗೆ ತಾನು ತಾಯಿಯಿಂದ ದೂರವಾಗಬೇಕು ಎಂದು ಮನಸ್ಸು ಮಾಡಿದಳು. ಒಬ್ಬರ ಸಹಾಯವಿಲ್ಲದೆ ಅದು ಸಾಧ್ಯವಿರಲಿಲ್ಲ. ಮಾಧವ ! ಆತ ಸಹಾಯ ಮಾಡಿಯಾನೆ ? ಯಾರು ಹೇಳಬೇಕು ? ಮಾಧವನ ನೆನಹಿನೊಡನೆ ಯೋಚನೆಯ ಕಹಿಯೆಲ್ಲ ಅಳಿದು ಮಧುರಭಾವನೆಗಳಿಗೆ ಸರೋಜಿನಿಯ ಹೃದಯದಲ್ಲಿ ಎಡೆಯಾಯಿತು. ಮಾಧವ ! ಆತ ಈಗ ಏನು ಮಾಡುತ್ತಿರಬಹುದು? ಓದುತ್ತಿರಬಹುದೇ ? ದಣಿದು ನಿದ್ರೆಹೋಗಿರಬಹುದೆ ? ಅಥವಾ ....ಯೋಚನೆಯ ಚಕ್ರ ತಿರುಗುತ್ತಲೇ ಇತ್ತು. ಆ ಚಕ್ರದ ಗುಂಟ ತಿರುಗುತ್ತಿರುವಾಗಲೇ ಮನಸ್ಸು ಎಲ್ಲೆಲ್ಲಿಯೋ ಹಾಯ್ದು ನಿದ್ರೆಯ ಸಾಮ್ರಾಜ್ಯವನ್ನು ಸೇರಿತು.

## 4

ಹನ್ನೊಂದು ಗಂಟೆಯ ರೈಲಿಗೆ ತಾವೂ ರಾಧಕ್ಕನೂ ಹೊರಡತಕ್ಕವರು ಎಂಬ ಸಮಾಚಾರವನ್ನು ಮುನ್ನಾದಿನ ಭೀಮಣ್ಣ ತಿಳಿಸಿದಾಗಿನಿಂದಲೂ ಸೀತಾಬಾಯಿಯವರ ಹಾರಾಟಕ್ಕೆ ಇತಿಮಿತಿ ಉಳಿದಿರಲಿಲ್ಲ. ಕೊನೆಯ ಗಳಿಗೆಯಲ್ಲಿ ಯಾವ ಅಡ್ಡಿ ಆತಂಕಗಳನ್ನು ಒಡ್ಡಿ ಹೊರಡುವುದನ್ನು ನಿಲ್ಲಿಸುವರೋ ಎಂದು ರಾಧಕ್ಕನಿಗೆ ಒಳಗಿನಿಂದಲೇ ಕುದಿ. ಅಲ್ಲದೆ ಊರಿಗೆ ಹೊರಡುವುದೆಂದು ತಮ್ಮ ಒಂದೆರಡು ಸಾಮಾನುಗಳನ್ನು ಸರಿಯಾಗಿ ಕಟ್ಟಿಕೊಳ್ಳುವುದಕ್ಕೂ ಅವರಿಗೆ ವೇಳೆ ಬೇಕಾಗಿದ್ದರಿಂದ ಅಡುಗೆಯ ಮನೆಯ ಕಡೆಗೆ ಎಂದಿನಂತೆ ಲಕ್ಷ್ಯವನ್ನು ಪೂರೈಸುವುದಾಗಿರಲಿಲ್ಲ. ಸೀತಾಬಾಯಿಯವರಿಗೂ ಅಷ್ಟೇ ಬೇಕಾದಂತಿತ್ತು. ಮುಂಜಾನೆ ಎದ್ದಾಗಿನಿಂದಂತೂ ದುಮುದುಮು ಉರಿಯುತ್ತಲೆ ಇದ್ದರು. ಸಣ್ಣಪುಟ್ಟ ಮಾತಿಗೂ ಆಕ್ಷೇಪಣೆಗಳನ್ನೆತ್ತಿ ಕಿರುಕುಳ ಮಾಡುತ್ತಿದ್ದರು. ಸಾಲದ್ದಕ್ಕೆ ಅಡುಗೆಮನೆಯಲ್ಲಿ ಒಲೆಯ ಮೇಲಿನ ಹಾಲು

ಉಕ್ಕಿಹೋಯಿತು. "ಉಕ್ಕಿಹೋದರೆ ಹೋಗಲಿ. ನನಗೇನು ? ಊರಿಗೆ ಹೋಗುವವರ ಮೋರೆ ಮುಂದಕ್ಕೆಯೇ ! ಹಿಂದೆ ತಿರುಗಿ ಹಾಲು ಹಾಳಾದದ್ದನ್ನು ಯಾತಕ್ಕೆ ನೋಡಿಯಾರು ?" ಎಂದು ಸೀತಾಬಾಯಿಯವರ ಟೀಕೆ. ಆ ಬೆಳಗಿನಲ್ಲಿ ಏನು ತಪ್ಪಿದರೂ ಅದಕ್ಕೆ ಹೊಣೆ ಊರಿಗೆ ಹೊರಟ ರಾಧಕ್ಕನದೇ ! ಮುಸುರೆ ತಿಕ್ಕುವವಳು ತಡಮಾಡಿ ಬಂದದ್ದೂ ರಾಧಕ್ಕನ ಹೊಣೆಯೇ. ಆಳು ದನಗಳಿಗೆ ಹುಲ್ಲು ಹಾಕದೆ ಇದ್ದದ್ದೂ ರಾಧಕ್ಕನ ತಪ್ಪೇ. ರಾಮರಾಯರ ಸ್ನಾನಕ್ಕೆ ನೀರು ಸರಿಯಾಗಿ ಕಾದಿರಲಿಲ್ಲವಂತೆ. ಅದಕ್ಕೂ ರಾಧಕ್ಕನಿಗೆ ಗೌರವ. ಇಷ್ಟೆಲ್ಲ ಸಿಡಿಪಿಡಿ ಮಾಡಿಯೂ ತನಗೂ ತನ್ನ ಅಣ್ಣನಿಗೂ ಊಟ ಬೇಕಾದರೆ ಅಡಿಗೆ ಮಾಡಲಿ ಎಂದು, ತಮಗೆ ತಲೆಶೂಲಿಯೆಂದು ಅಟ್ಟವನ್ನೇರಿದವರು ಒಂಬತ್ತುಗಂಟೆಯಾದರೂ ಮೈ ತೊಳೆಯಲಿಲ್ಲ. ರಾಧಕ್ಕನಿಗೆ ಇದಾವುದೂ ಅನಿರೀಕ್ಷಿತವಾಗಿರದಿದ್ದರೂ ಮನಸ್ಸು ನೊಂದುಕೊಳ್ಳುತ್ತಿತ್ತು, ದುಃಖಪಡುತ್ತಿತ್ತು. ಆದರೂ ನಿರುಪಾಯರಾಗಿ ಎಲ್ಲ ಕೆಲಸಗಳನ್ನು ಪೂರೈಸಿದರು. ವೇಳೆಗೆ ಸರಿಯಾಗಿ ಊರಿಗೆ ಹೊರಡಲನುವಾದರು. ಭೀಮಣ್ಣ ಹೊತ್ತಿಗೆ ಸರಿಯಾಗಿ ಗಾಡಿಯೊಂದನ್ನು ಬಾಗಿಲಿಗೆ ತಂದು ನಿಲ್ಲಿಸಿದರು. ಹೆಂಡತಿಯ ಅಸಮಾಧಾನದಿಂದ ಅಸಮಾಧಾನಗೊಂಡ ರಾಮರಾಯರು ಏನೋ ಕಾಗದಪತ್ರಗಳಲ್ಲಿ ತೊಡಗಿದಂತೆ ಸೋಗುಹಾಕಿದ್ದರು. ಬರುತ್ತೇನೆಂದು ಹೇಳುವ ಉಪಚಾರ ನಡೆಯಿತು. ರಾಮರಾಯರು ತಮ್ಮ ನಿಜ ಮನಃಸ್ಥಿತಿ ಏನಿದ್ದರೂ ಬಹಿರಂಗವಾಗಿ ಯಾವುದನ್ನೂ ತೋರಗೊಡಲಿಲ್ಲ. ಸೀತಾಬಾಯಿಯವರಿಗೆ ಮಾತ್ರ ಆ ತಾಳ್ಮೆಯೂ ಇರಲಿಲ್ಲ, ಔಚಿತ್ಯವೂ ಇರಲಿಲ್ಲ. ರಾಧಕ್ಕ "ಬರುತ್ತೇನೆ" ಎಂದು ಹೇಳಹೋದಾಗ "ಹೋಗಬೇಕೆಂದು ಹೊರಟವರು ಇನ್ನೇನು ಮಣ್ಣು ಬರುತ್ತೀರಿ ? ಎಲ್ಲವೂ ತಿಳಿದದ್ದೇ ಇದೆ" ಎಂದು ತಟಕ್ಕನೆ ಅಂದುಬಿಟ್ಟರು. ರಾಧಕ್ಕನಿಗೆ ವಿಪರೀತ ದುಃಖವಾಯಿತು. ಗದ್ಗದಿತವಾಗಿಯೇ ಹೇಳಿದರು. ಯಾತಕ್ಕಮ್ಮ ಕೆಟ್ಟ ಮಾತು ? ನಾಲ್ಕುದಿನ ಹೋಗಿಬರುತ್ತೇನೆ. ಅಲ್ಲಿಯೂ ಅನಾನುಕೂಲವಂತೆ." ಸೀತಮ್ಮನವರು ಬಿಮ್ಮನೆ ಬಿಗಿದುಕೊಂಡವರು ಯಾವ ಮಾತನ್ನೂ ಆಡಲಿಲ್ಲ. ಸಣ್ಣ ಮೋರೆ ಮಾಡಿಕೊಂಡು ರಾಧಕ್ಕ ಗಾಡಿಯನ್ನೇರಿದರು. ಸೀತಾಬಾಯಿ ಬಾಗಿಲವರೆಗೆ ಬರುವ ಉಪಚಾರವನ್ನೂ ಮಾಡಲಿಲ್ಲ. ಗಾಡಿಯು ಮುಂದುಗಡೆಯಲ್ಲಿ ಮಾಧವ ಏರುತ್ತಿರುವಾಗ ಆತನಿಗೆನಿಸಿತು : ಏನು ಅನ್ಯಾಯವಿದು ? ಈ ಮನೆ ನಮ್ಮದೆ ? ನಮ್ಮದಾಗಿದ್ದರೆ ಅಲ್ಲಿರುವಾಗ ನಡೆಯುವ ಅನ್ಯಾಯ ಅದರಿಂದ ದೂರವಾಗುವಾಗಲೂ ನಡೆಯು

ಬೇಕೆ? ಇಲ್ಲಿಂದ ಹೊರಬೀಳುವಾಗ ಕೂಡ ಹೇಗೆ ಕಳ್ಳರಂತೆ, ಯಾರಿಗೂ ಬೇಡವಾಗಿ, ಯಾರಿಗೂ ದುಃಖವಾಗದೆ, ಹೊರಟಹಾಗಿದೆಯಲ್ಲ? ಹಾಗಾದರೆ ಇದು ನಮ್ಮ ಮನೆಯೆಂದು ಯಾತಕ್ಕೆನ್ನಬೇಕು? ಎಂದು. ಭೀಮಣ್ಣ ರಾಧಕ್ಕ ಇಬ್ಬರಲ್ಲಿಯೂ ಇದೇ ವಿಚಾರ ನಡೆದಂತಿತ್ತು. ಮುಖಗಳೆರಡೂ ಉದ್ವಿಗ್ನ ವಾಗಿದ್ದವು. ಗಾಡಿ ಹೊರಟಿತು. ರಾಧಕ್ಕ ದೊಡ್ಡದಾಗಿ ನಿಟ್ಟುಸಿರುಬಿಟ್ಟರು. ಕಣ್ಣಲ್ಲಿ ನೀರು ಚಿಮ್ಮಿತು.

ಈ ಎಲ್ಲ ತಾಕಲಾಟದಲ್ಲಿ ವೇಳೆಯ ಕಡೆಗೆ ಯಾರ ಲಕ್ಷವೂ ಇರಲಿಲ್ಲ. ಮಾಧವ ಗಡಿಯಾರವನ್ನು ನೋಡಿ ಗಾಡಿಯವನಿಗೆ ಎಚ್ಚರ ಹೇಳಿದ "ಇನ್ನು ಇಪ್ಪತ್ತು ನಿಮಿಷ ಮಾತ್ರ, ನೋಡಪ್ಪಾ ರೈಲು ತಪ್ಪಿಸೀಯ....ಹೋಗುವ ಪಾದೀತೆ?" ಎಂದ. ಗಾಡಿಯವನಿಗೂ ಮಾತನಾಡಲು ತುಸು ಅವಕಾಶ ಬೇಕಾದಂತಿತ್ತು.

"ಇಪ್ಪತ್ತು ಮಿನಿಟ್ ಯಾತಕ್ರೀ? ಹತ್ತು ಮಿನೀಟನ್ಯಾಗ ಹೊಡೀತೀನಿ, ರಾಯರ. ನನ್ನ ಟಾಂಗೇದಾಗ ಹೂಸದಾಗಿ ಕುಂತವರ್ಧಾಂಗೇ ಕೇಳುತೀರಲ್ಲರಿ, ಯಪಾ.. ಮತ್ತ ಹೀಂಗ ಗಾಡಿ ತಪ್ಸಾಕ ಹತ್ತಿದರ ನಮ್ ಈ ಧಂದೇ ಹ್ಯಾಂಗ ನಡದೀತು?"

"ಅದೆಲ್ಲ ನಿಜ. ಆದರೆ ವೇಳೆಯಾಗಿದೆ, ಅದಕ್ಕೆ ಹೇಳಿದೆ."

"ಆಗಿಲಿ ಬಿಡರಿ. ನಾ ಏನ್ ಇಂದ ನಿನ್ನಿನಾವ ಅಲ್ಲರೀ. ದೊಡ್ಡ ಅಪ್ಪಾ ಅವರು ಇದ್ದಾಗೂ ನಂದೇ ಟಾಂಗಾ" ಎಂದು ಹಳೆಯ ನೆನಹನ್ನು ಮುಂದೆ ಮಾಡಿದ. ಆಗಿನ ಕಾಲ ಆತನ ಕಣ್ಣೆದುರು ಅಚ್ಚಳಿಯದೆ ನಿಂತಂತಿತ್ತು. ಕುದುರೆಗೊಂದು ಚಬಕದೇಟನ್ನು ಕೊಟ್ಟು ಹೇಳಿದ :

"ಹದಿನಾರ ವರ್ಸ ಆತುರಿ ಈ ಕುದರಿ ಹೂಡಿ. ಒಂದು ದಿನಾ ಒಬ್ಬರ ಗಾಡಿ ತಪ್ಸಿಲ್ಲರೀ!" ಗಾಡಿ ಜೋರಾಗಿ ಹೊರಟಿತ್ತು. ರೈಲು ತಪ್ಪುವುದು ಸಾಧ್ಯವಿಲ್ಲವೆಂಬ ಭರವಸೆ ಮಾಧವನಲ್ಲಿ ಬೆಳೆಯುತ್ತಿದ್ದುದರಿಂದಲೇ ಗಾಡಿ ಯವನನ್ನು ತಾನಾಗಿಯೇ ಮಾತನಾಡಿಸತೊಡಗಿದ.

"ಒಂದು ದಿನವೂ ರೈಲು ತಪ್ಪಿಸಲಿಲ್ಲವೆ?"

"ಆಗಾಣರಿ ಎಲ್ಲಿಯಾರ? ಇಲ್ಲ ಅಂದ್ರೂ ಒಂದ ದಿನ ಆಯ್ತರಿ, ರಾಯರ. ನಿಮ್ಮ ದೊಡ್ಡರಾಯರಿಗೇ ಅದೂ ಮತ್ತ, ಎಲ್ಲಿಯೋ ಹೋಗಾವರ ಇದ್ದರರಿ' ನನಗ್ಯಾಕೊ ಮೈಯಾಗ ಅಷ್ಟು ಛಲೋ ಇರಾಕಿಲ್ಲ ಅಂತ ನಮ್ಮ ಅಳಿಯಾ ರಹಿಮಾನಗ ಟಾಂಗ ಹೊಡಕೊಂಡು ಹೋಗು ಅಂದೆ. ಈ ಕುದುರಿ, ನಾ ಇದ್ರನ

ಸಾದ ಇರತೈತಿ. ರಹಿಮಾನಗೂ ಅದಕ್ಕಂತೂ ಒಂದ ಹಾದಿ ನಡಿಯೂದಿಲ್ಲ. ರಾಯರಿಗೆ ಗಾಡೀಗೆ ಹೊತ್ತಾಗೇತಿ, ಏನು ಮಾಡಿದರೂ ರಹಿಮಾನಗ ಕುದರಿ ಆಟೋಪದಾಗ ಬರವಲ್ಲದು. ಟೇಸನ್ನು ಹಾಂಗೂಹೀಂಗೂ ಮಾಡಿ ಹೋಗೋದ ರಾಗ ಗಾಡಿ ಯಾತಕ್ಕ ಇರತೈತಿ? ಗಾಡಿ ತಪ್ಪಿತು ; ಆದರೂ ರಾಯರೇನು ಸಿಟ್ಟಗೇಳಲಿಲ್ಲ. 'ಇನ್ನೊಮ್ಮೆ ಟಾಂಗಾ ಹೇಳಿದರ ಇಬ್ರಾಹೀಮ ಇದ್ದರೇನೆ ಟಾಂಗಾ ಹೂಡಿಕೊಂಡು ಬಾ, ಇಲ್ಲಾಂದ್ರ ಬ್ಯಾಡಾ ಅಂತ ಹೇಳಿ' ಕೊಡೋ ಹಾಂಗ ರೂಪಾಯಿ ಕೊಟ್ಟೇ ಬಿಟ್ರಂತ! ಸೊಟ್ಟಮೋತಿ ಮಾಡಿಕೊಂಡ ಬಂದಿತ್ತರಿ ರಹಿಮಾನ್...."

ನಿಲ್ದಾಣ ಬಂದಾಗ ಗಾಡಿಯವ ಕೇಳಿದ : "ನೀವೂ ಹೋಗತೀರೆನ್ರಿ ಊರಿಗೆ?" ಮಾಧವ "ಇಲ್ಲ" ಎಂದು ಹೇಳಿದಾಗ ಆತ ಹೇಳಿದ"ಹಾಂಗಾದ್ರ ತಿರುಗಿ ಹೋಗುವಾಗ ಒಂದು ಸೀಟ ಇಟ್ಟಿರತೀನರಿ ನಿಮ್ಮ ಸಲುವಾಗಿ."

"ಏನು ಬೇಡ. ನಾನು ಕಾಲೇಜಿಗೆ ಹೋಗಬೇಕು" ಎಂದು ಹೇಳಿ ಎಲ್ಲರೂ ನಿಲ್ದಾಣ ಸೇರಿದರು.

"ಗಾಡಿ ಬರಲು ಇನ್ನು ಅರ್ಧಗಂಟೆ ತಡ" ಎಂದು ಭೀಮಣ್ಣ ಟಿಕೆಟ್ಟು ಗಳನ್ನು ತೆಗೆದುಕೊಂಡು ಬಂದು ಹೇಳಿದರು.

"ಗಾಡಿ ಅರ್ಧ ತಾಸು ಲೇಟಂತೆ. ನೀನು ಯಾತಕ್ಕೆ ಇಲ್ಲಿ ಸುಮ್ಮನೆ ಕಾಯುತ್ತೀ ? ಬಿಸಿಲು."

"ಮನೆಗೆ ಹೋಗಿಯಾದರೂ ಏನು ಮಾಡುವುದು ಈಗ? ಅರ್ಧಗಂಟೆ ಯೆಂದು ಇವರು ಹೇಳವುದು, ಮೇಕಪ್ ಮಾಡಬಹುದು. ಎಷ್ಟು ವೇಳೆ ಯಾದೀತು ?" ಎಂದ.

ಮಾಧವ ನಿಲ್ದಾಣದಲ್ಲಿ ಆಚೆ ಈಚೆ ತಿರುಗಾಡಿ ಬಂದ. ರಾಧಕ್ಕ ಭೀಮಣ್ಣನಿಗೆ ಹೇಳುತ್ತಿದ್ದಳು :

"ಸುಮ್ಮನೆ ಊರಿಗೆ ಹೊರಡಲಿಕ್ಕೆ ಅವಸರ ಮಾಡಿದಹಾಗಾಯ್ತು ನೋಡು ಭೀಮಣ್ಣ. ಮಾಧೂನ ಪರೀಕ್ಷೆ ಮುಗಿದ ಕೂಡಲೆ ಬಂದಿದ್ದರೂ ಬರುತ್ತಿದ್ದೆ."

"ಆಯಿತು. ನಾನಿಷ್ಟು ಹಟ ಹಿಡಿದು ನಿಂತೆ ಎಂದು ಹೊರಡಲಿಕ್ಕಾದರೂ ಆಯಿತು. ನಾನು ಬಾರದಿದ್ದರೆ ನಿನಗೆ ಹೊರಡಲಿಕ್ಕಾಗುತ್ತಲೇ ಇರಲಿಲ್ಲ. ಇದು ಗೊತ್ತು ಅಂತೇ ಬಂದುಬಿಟ್ಟೆ." ಅಣ್ಣನ ಮಾತು ನಿಜವೆನಿಸಿತು. ಆದರೂ ರಾಧಕ್ಕನಿಗೆ ಹಿಂದಿನಿಂದ ಹೊರಡಬೇಕಾಗಿತ್ತೆನಿಸಲಿಕ್ಕೆ ಕಾರಣವೆಂದರೆ ಮಾಧವನ ವಿಚಾರದಲ್ಲಿ ಚಿಂತೆ. ಪರೀಕ್ಷೆಯಾಗುವವರೆಗೆ ಆತನದು ಮನೆ

ಯಲ್ಲಿ ಹೇಗೆ ನಡೆದೀತು ಎಂಬ ಚಿಂತೆಯಲ್ಲಿ ಅವರು ಹಾಗೆ ಮಾತನಾಡಿದ್ದರು. ಹಾಗೆ ಅಣ್ಣನೆದುರು ಹೇಳಿದಾಗ ಅವರೆಂದರು :

"ಅವನ್ನೆಲ್ಲಾ ಸುಧಾರಿಸಿಕೊಂಡು ಹೋದಾನು ಬಿಡು. ಗಂಡು ಮಗ. ಅವನಿಗೇನು ಯಾರು ಮಾಡುವುದು? ಎರಡು ಹೊತ್ತು ಊಟ ಮಾಡಿಕೊಂಡು ಆತ ಓದಿನಲ್ಲಿ ತೊಡಗಿಕೊಂಡರೆ ಆಯಿತು" ಎಂದು ಸಮಾಧಾನ ಹೇಳಿದರು. ಸಮೀಪದಲ್ಲಿಯೇ ಇದ್ದ ಮಾಧವನನ್ನು ಉದ್ದೇಶಿಸಿ,

"ನೀನಾದರೂ ವೃಥಾ ತೊಂದರೆ ಮಾಡಬೇಡ. ಹೇಳಿದ ಹಾಗೆ ಕೇಳಿಕೊಂಡು ಇದ್ದುಬಿಡು. ಎಲ್ಲಕ್ಕೂ ಮುಖ್ಯ ನಿನ್ನ ಓದು. ಅದನ್ನು ದುರ್ಲಕ್ಷಿಸಬೇಡ" ಎಂದು ಮುಂತಾಗಿ ಉಪದೇಶ ಮಾಡಿದರು. ಮಾಧವ ಹೂಂಗುಡುತ್ತಿದ್ದ. ಒಂದೆರಡು ನಿಮಿಷ ತಡೆದು ಕೇಳಿದರು :

"ದುಡ್ಡೇನಾದರೂ ಬೇಕೇನು ?"

"ಹುಂ....ನಿನ್ನ ಹತ್ತಿರ ಈಗ ಇದ್ದರೆ...."ಎಂದು ಮಾಧವ ಅನುಮಾನಿಸಿದ.

"ನನ್ನ ಹತ್ತಿರದ ಯೋಚನೆ ನೀನು ಮಾಡಬೇಡ. ನಮ್ಮದೇನು, ಊರಲ್ಲಿ ಹೇಗೂ ನಡೆಯುತ್ತದೆ."

"ಹಾಗೇನೂ ನನಗೆ ಬೇಕು ಎಂದು ಅಲ್ಲ. ಇದ್ದರೆ ಒಳ್ಳೆಯದು. ಮತ್ತೆ ಎಲ್ಲಿ ಕಾಸೆರಡು ಕಾಸಿಗಾಗಿ ಅಕ್ಕನೆದುರು ನಿಂತು ಬೇಡಲಿ ? ಅದಕ್ಕೆಂದೆ."

"ಏನಡ್ಡಿಯಿಲ್ಲ. ನಾನೂ ಅದಕ್ಕೇ ಕೇಳಿದೆ. ಕೇಳಿದರೆ ಅವರೇನೂ ಸುಸೂತ್ರ ಕೊಡುವವರಲ್ಲ—" ಎಂದು ಜೇಬಿನೊಳಗಿನಿಂದ ಇಪ್ಪತ್ತೈದು ರೂಪಾಯಿ ತೆಗೆದು ಮಾಧವನ ಕೈಗಿಟ್ಟ. ಭೀಮಣ್ಣನ ವಾತ್ಸಲ್ಯವನ್ನು ನೆನೆದು ಮಾಧವನಿಗೆ ದುಃಖವಾಯಿತು. ಕುತ್ತಿಗೆಯ ನರಗಳು ಬಿಗಿದು ಬಂದವು. ಬಾಯಿಗೆ ಮಾತು ಬಾರದಾಗಿತ್ತು; ಆದರೂ ಹೇಳಿದ:

"ಇಂಥ ಪ್ರಸಂಗ ಬರಬಾರದಾಗಿತ್ತು, ಭೀಮಣ್ಣ...." ಎಂದು ತಡೆದ. ಪಳಕ್ಕನೆ ಕಣ್ಣೊಳಗಿನಿಂದ ಎರಡು ಹನಿ ಉದುರಿದವು. ರಾಧಕ್ಕನೂ ಮಗನ ಸ್ಥಿತಿಯನ್ನು ನೋಡಿ ಕಣ್ಣಿಗೆ ಸೆರಗನ್ನಿಟ್ಟದ್ದರು. ಭೀಮಣ್ಣನಿಗೂ ಕೆಡಕೆನಿಸಿತು. ಮಾಧವನ ಬೆನ್ನ ಮೇಲೆ ಕೈಯಾಡಿಸಿ ಹೇಳಿದರು :

"ಹೀಗೆಲ್ಲ ಮಾಡಬಾರದು, ಮಾಧೂ....ನನ್ನ ಕಡೆಯಿಂದ ದುಡ್ಡು ತೆಗೆದುಕೊಳ್ಳಲಿಕ್ಕೆ ಇಷ್ಟು ಸಂಕೋಚವೆ ನಿನಗೆ ?"

ಕಣ್ಣೀನಂಚನ್ನು ತಿಕ್ಕಿಕೊಂಡು ಮಾಧವ ಹೇಳಿದ :

"ಅದಲ್ಲ ಭೀಮಣ್ಣಾ. ಈ ರೀತಿ ನಾವು ಮನೆ ಬಿಟ್ಟು ಬರುವ ಪ್ರಸಂಗ

ನನಗೆ ತುಂಬ ಕೆಡಕೆನಿಸಿತು. ಅದಕ್ಕೆಂದೆ...."

"ಅದಕ್ಕೇನು ಮಾಡುವುದು? ಬರಬಾರದು ನಿಜ....ನಿಮ್ಮ ಕಕ್ಕನಿಗೆ ಸ್ವಂತ ಬುದ್ಧಿಯಿದ್ದರೆ ಇಷ್ಟು ಕಷ್ಟವಾಗುತ್ತಿರಲಿಲ್ಲ. ಕಕ್ಕಿಯ ಕೈಗೆ ಸಿಕ್ಕುಬಿದ್ದ ಅವನಿಗಾದರೂ ಏನು ಸುಖವಿದೆ? ಅಷ್ಟು ಒಳ್ಳೆಯ ಮನುಷ್ಯ ಹೀಗಾದಾನೆಂದು ಅಂದುಕೊಂಡಿರಲಿಲ್ಲ ನಾನು."

ಏನೇನೊ ಮಾತು ನಡೆಯಿತು ಗಾಡಿ ಬರುವವರೆಗೂ. ಗಾಡಿ ಹೊರಡುವ ಮುಂದೆ ರಾಧಕ್ಕ ಮತ್ತೊಮ್ಮೆ ನೂರನೆಯ ಬಾರಿ ಮಾಧವನಿಗೆ ಹೇಳಿದರು: "ಜಪ್ಪಿಸಿಕೊಂಡಿರಪ್ಪಾ. ಯಾವ ರೀತಿಯಲ್ಲೂ ತೊಂದರೆ ಮಾಡಿಕೊಳ್ಳಬೇಡ" ಎಂದು. ತಮ್ಮ ಹತ್ತಿರದ ಹತ್ತು ರೂಪಾಯಿ ನೋಟನ್ನೊಂದು ಆತನ ಕೈಯಲ್ಲಿಟ್ಟು "ಇದೂ ನಿನ್ನ ಹತ್ತಿರ ಇರಲಿ. ನನ್ನ ಹತ್ತಿರ ಇಟ್ಟುಕೊಂಡಾದರೂ ಏನು?" ಎಂದು ಹೇಳಿದರು. ರೈಲು ಹೊರಟಾಗ ಮಾಧವನಿಗೆ ಬಿಕ್ಕು ತಡೆಯುವುದಾಗಲಿಲ್ಲ.

ರೈಲು ಕಣ್ಮರೆಯಾದನಂತರ ಶೂನ್ಯಮನಸ್ಕನಾಗಿ ಮಾಧವ ನಿಲ್ದಾಣದಿಂದ ಹೊರಬಿದ್ದ. ಪ್ರಪಂಚವೆಲ್ಲವೂ ಬರಿದಾಗಿ ಕಾಣುತ್ತಿತ್ತು. ತಾಯಿ! ಆಕೆ ಇದ್ದಳೆಂದು ಕಕ್ಕನ ಮನೆಯ ಕಿರುಕುಳವನ್ನು ಸಹಿಸುವುದು ಸಾಧ್ಯವೆನಿಸಿತ್ತು. ಇನ್ನು ಮುಂದೆ? ಅವಳಿದ್ದಳೆಂದು ಆ ಮನೆ ತನ್ನದು ಎಂದುಕೊಳ್ಳುವಂತಿತ್ತು. ಆಕೆ ಹೊರಟುಹೋದಳು. ಅದೇ ಮನೆ ಈಗ ತನಗೆ ಬೇಡವಾದ ಕಕ್ಕನ ಮನೆಯಾಗಿಬಿಟ್ಟಿತು. ಅದು ತನಗೊಂದು ತಾತ್ಪೂರ್ತಿಕವಾದ ಆಶ್ರಯಸ್ಥಾನ-ಧರ್ಮಶಾಲೆ! ಅದಕ್ಕೂ ಹೆಚ್ಚಿನದೇನೂ ಅಲ್ಲ—ಎನಿಸಿತು. ಹೌದು, ಧರ್ಮಶಾಲೆಯೆ! ಅವರು ಹಾಕುವ ಅನ್ನ ವಾತ್ಸಲ್ಯದ್ದಲ್ಲ. ಧರ್ಮದ ಕೂಳು! ನಿರುಪಾಯವಾಗಿ ನೀಡಿದ್ದು! ಇನ್ನೇನನ್ನು ಮಾಡಲಾಗದಿದ್ದರೂ ಮನೆಗೆ ಬಂದರೆ ಮಾತನಾಡಿಸಲಾದರೂ ತಾಯಿ ಇರುತ್ತಿದ್ದಳು. ಊಟ ಮಾಡುವುದಿಲ್ಲವೆಂದರೆ ಯಾಕೆ ಎಂದು ಕೇಳುತ್ತಿದ್ದಳು. ಮಾಡದಿದ್ದರೆ ಮಾಡಲಿಲ್ಲವಲ್ಲಾ ಎಂದು ಮರುಗುತ್ತಿದ್ದಳು. ಎಂಥ ಸಮಾಧಾನ! ಇನ್ನು ಒಂದು ತಿಂಗಳು—ಐದು ವಾರ! ಆ ಸಮಾಧಾನದ ಆಶ್ರಯವಿಲ್ಲದೆ ಬದುಕಬೇಕು ಎಂದು ಕಳವಳಗೊಂಡ. ಪ್ರತಿ ಕ್ಷಣಕ್ಕೂ ತನ್ನಿಂದ ದೂರವಾಗುತ್ತಿದ್ದ ತಾಯಿ ಕ್ಷಣಕ್ಷಣಕ್ಕೂ ಹೃದಯಕ್ಕೆ ಹತ್ತಿರವಾಗುತ್ತ ಬಂದಳು. ಸ್ವಂತದ ಕಷ್ಟಗಳೆಲ್ಲವನ್ನು ಮರೆತು ತನ್ನ ಸುಖಕ್ಕಾಗಿಯೇ ಬದುಕಿದ ಇನ್ನೊಬ್ಬರು ಯಾರಾದರೂ ತನಗೆ ಇದ್ದಾರೆಯೆ? ಎಂದುಕೊಂಡ. ಕಣ್ಣಲ್ಲಿ ಮತ್ತೆ ನೀರು

ಚಿಮ್ಮುವುದರಲ್ಲಿತ್ತು. ಕುದುರೆಗಾಡಿಯು ಇಬ್ರಾಹೀಮನ ಕರೆ ಅದನ್ನು ತಡೆ ಹಿಡಿಯಿತು.

"ಬರ್‍ರೀ, ರಾಯರ. ಕಾಲೇಜಿನತನಕಾ ಬಿಟ್ಟು ಹೋಗುತೀನಿ ಬರ್‍ರಿ...." ಎಂದು.

ಬೇರೆ ಸವಾರಿ ಸಿಕ್ಕಿರಲಿಲ್ಲವೆಂದೊ, ತನ್ನ ಮನೆತನದ ವಿಷಯದಲ್ಲಿಯ ಆತನ ಅಭಿಮಾನಕ್ಕೆಂದೊ, ಇಬ್ರಾಹೀಮನ ಗಾಡಿಯು ತೆರವಾಗಿಯೇ ಇತ್ತು. ಮಾಧವ ಕೇಳಿದ :

"ಯಾಕೆ, ಬೇರೆ ಯಾವ ಸವಾರಿ ಸಿಕ್ಕಲಿಲ್ಲವೇನೊ ?"

"ಯಾರ ಬರತಾರರೀ ಈಗಿನ ದಿನದಾಗ? ಒಬ್ಬರು ಬಂದಿದ್ದರು. ಶುಕ್ರವಾರ ಪೇಟೆಗೆ ಒಯ್ಯಬೇಕಂತ. ತಲೀಗೆ ನಾಕಾಣೆ ಕೊಡಲಿಕ್ಕ ತಯಾರ ಇಲ್ಲ. ನಾನೇ ಆಗೋದಿಲ್ಲ ಅಂದ್ಯೆ...."

"ಅಷ್ಟಾವರೂ ಆಗತ್ತಿತ್ತಲ್ಲಪ್ಪಾ. ಬರುವ ನಾಲ್ಕೆಂಟಾಣೆ ಸುಮ್ಮನೆ ಬಿಟ್ಟು ಬಿಟ್ಟಿ" ಎನ್ನುತ್ತ ಮಾಧವ ಗಾಡಿಯನ್ನೇರಿದ.

"ಆವು ಯಾತರ ಗಿರಾಕಿರಿ? ನಿಮ್ಮಂಥವ್ರು ಟಾಂಗೆದಾಗ ಕುಂತ್ರ ಟಾಂಗಾಕ್ಕ ಶೋಭಾ. ಅವೇನ್ರಿ ? ಎಂದಾದರೆ ಟಾಂಗೇದಾಗ ಕುಂಡ್ರೂ ಜಾತೇನ್ರಿ....?" ಎಂದು ಕುದುರೆಯ ಮುಂದಿನ ಹುಲ್ಲನ್ನು ಕಲೆಹಾಕಿ ಮುಂದಿನ ಬದಿಯಲ್ಲಿ ಇಟ್ಟುಕೊಂಡು, ಚಬಕವನ್ನು ಚಲಾಯಿಸಿದ. ಮಾಧವನಿಗೆ ಈ ಮುದುಕ ನನ್ನು ನೋಡಿ ವಿಚಿತ್ರವೆನಿಸುತ್ತಿತ್ತು. "ಕೆಲಸ ಸಣ್ಣದಾದರೂ ಮನಸ್ಸು ದೊಡ್ಡದು" ಎಂದುಕೊಂಡ. ಈತ ಎಲ್ಲಿಯಾದರೂ ಒಬ್ಬ ಹಳೆಯ ಮುಸಲ್ಮಾನ ಸರದಾರರ ವಂಶಜನಾಗಿದ್ದರೂ ಆಗಿರಬಹುದೆಂಬ ವಿಚಾರ ಬಂದಾಗ ನಸು ನಕ್ಕ ತನ್ನ ವಿಚಿತ್ರ ಊಹೆಗಾಗಿ. ನಕ್ಕುದನ್ನು ಇಬ್ರಾಹೀಮ ನೋಡಿಕೇಳಿಯೇ ಬಿಟ್ಟ :

"ಯಾಕರೀ ಯಪ್ಪಾ ನಗತೀರಿ, ನನ್ನ ಮಾತಿಗೆ ? ಹೌದೇಳ್ರಿ. ಟಾಂಗೇ ದಾಗ ಕುಂಡ್ರೂದಕೂ ದೊಡ್ಡಿಸ್ತನಾ ಬೇಕಾಗ್ತೈತಿ ಮನಸ್ಯಾಗ...."

"ಹಾಗಾದರೆ ನೀನು ಬರೀ ದೊಡ್ಡವರನ್ನಷ್ಟೇ ಕೂರಿಸಿಕೊಳ್ಳುವವ ಅಂತ ಅನ್ನು...." ಎಂದು ಮಾಧವ ನಗೆಯಾಡಿದ.

"ನೀವೇನ್ ಬೇಕಾದ್ದನ್ರಿ; ಹುಚ್ಚನ್ರಿ ಬೇಕಾದ್ರ. ನಾ ಅಂತೂ ಮಂದೀ ಮಾರೀ ನೋಡಿ ಸವಾರಿ ಹಿಡೀತೀನ್ರಿ. ಅಂತೇ ದೊಡ್ಡ ಅಪ್ಪಾವ್ರಿಗೆ ನನ್ನ ಟಾಂಗಾ ಪಾಸ್ ಆಗಿತ್ತು. ನನ್ನ ಟಾಂಗಾದ ಹೊರತು ಅವರು ಬ್ಯಾರೆ

ಟಾಂಗಾನೇ ಹತ್ತಿರಾಕಿಲ್ಲ. ಅವರು ಟಾಂಗೇದಾಗ ಕುಂತರ ನನಗೂ ಅಷ್ಟು ಉಬ್ಬು...." ಎಂದು ಮತ್ತೆ ಹತ್ತು ವರ್ಷ ಹಿಂದೆ ಜಿಗಿದ ಇಬ್ರಾಹೀಮ. ಮಾಧವನಿಗೆ ವಿಚಿತ್ರವೆನಿಸುತ್ತಿತ್ತು. ತನ್ನ ತಂದೆಯ ಬಗೆಯಲ್ಲಿ ತನಗಿಲ್ಲದ ಆದರ ವಿಶ್ವಾಸಗಳು ಈ ಮುದುಕ ಗಾಡಿಯವನಲ್ಲಿವೆಯಲ್ಲಾ ಎಂದು. ಹೀಗೆಯೇ ಇನ್ನೆಷ್ಟೋ ಕಡೆಯಲ್ಲಿ ನೋಡಿದ್ದ. ಊರಲ್ಲಿಯ ಯಾವ ಸಣ್ಣ ಪುಟ್ಟ ಹಳೆಯ ವ್ಯಕ್ತಿಯೂ ತನ್ನ ತಂದೆಯ ವಿಷಯದಲ್ಲಿ ಗೌರವ ಭಾವ ವನ್ನಲ್ಲದೆ ಏನನ್ನೂ ಪ್ರದರ್ಶಿಸುತ್ತಿರಲಿಲ್ಲ. ತನಗೆ ಮಾತ್ರ ಆ ತಂದೆಯ ನೆನಹು ಕೂಡ ಬೇಡವಾಗಿದ್ದಿತು.

"ದೊಡ್ಡ ಅಪ್ಪಾ ಅವರದೂ ನಿನ್ನದೂ ವಿಶೇಷ ವಹಿವಾಟು ಇತ್ತು ಅನ್ನು ಹಾಗಾದರೆ...." ಎಂದು ಮಾಧವ ಮತ್ತೆ ಕೆಣಕಿದ, ಬೇಕಂತಲೆ. ಆತನ ಗೌರವಕ್ಕೆ ಕಾರಣವೇನಾದರೂ ಇದ್ದಿರಬಹುದೆ ? ಎಂಬುದನ್ನು ತಿಳಿಯೋಣ ವೆಂದು. ಇಬ್ರಾಹೀಮನಿಗೂ ಪುಟುವು ಕೊಟ್ಟಂತಾಯಿತು. ಒಳ್ಳೆ ಹುರುಪಿ ನಿಂದ ಮಾತನಾಡುತ್ತಿದ್ದ :

"ವಹಿವಾಟಂತೀರಾ ? ಹೇಳಿದೆನಲ್ಲ ಈಗ, ನನ್ನ ಟಾಂಗೇದ ಹೊರತೂ ಅವರು ಬ್ಯಾರೆ ಟಾಂಗಾನೇ ಹಿಡೀತಿದ್ದಿಲ್ಲ....ದೇವರಂಥಾ ಮನಸ್ಯಾ....ಒಂದು ದಿನ ಒಂದು ಕೆಟ್ಟ ಮಾತಿಲ್ಲಾ. ಒಂದು ಸಾರೇನೂ ಒಂದು ರೂಪಾಯಿಗಿಂತ ಕಡಿಮೆ ಬಾಡಿಗೆ ಕೊಡಲಿಲ್ಲ, ಮಹಾರಾಯಾ. ಅಂಥಾ ಮಂದಿ ಎಲ್ಲಿ ಸಿಕ್ಕೀ ತರೀ ಈಗಿನ ದಿನದಾಗ....?"

"ಅದು ಯಾಕೊ ? ಸಣ್ಣರಾಯರಿಗೆ ಟಾಂಗಾ ತೆಗೆದುಕೊಂಡು ಬರುತ್ತೀ ಯಲ್ಲೊ ?"

"ಥೂ ! ಬಿಡರಿ. ಅದೆಲ್ಲಾ ಸುಮ್ಮಗ ಮಾತಾಡಬಾರದು. ಏನೋ ಹಳೇ ವಹಿವಾಟೊಂತ ಬರತೇನ್ರಿ...."

ಕುದುರೆ ವೇಗವಾಗಿ ಓಡುತ್ತಿತ್ತು. ಆ ವೇಗವೇ ಮಾಧವನ ಲಕ್ಷ್ಯವನ್ನು ಕುದುರೆಯ ಕಡೆಗೆ ಸೆಳೆದಿತ್ತು. ಒಳ್ಳೆ ಅಚ್ಚುಕಟ್ಟಾಗಿ ಓಡುತ್ತಿತ್ತು. ಬಿಸಿಲಲ್ಲಿ ಮಿರುಗುವ ಮೈ; ಹೆಜ್ಜೆ ತಪ್ಪದ, ಕ್ರಮಬದ್ಧವಾದ ಓಟ; ನಿಮಿರಾಗಿ ನಿಂತಿ ದ್ದರೂ ಸುತ್ತಲಿನ ಸಪ್ಪಳದೊಂದಿಗೆ ಅಲುಗಾಡುತ್ತಿದ್ದ ಆ ಕಿವಿಗಳು ಮಾಧವ ನಿಗೆ ಮೋಹಕವಾಗಿ ಕಂಡವು. ಸಂಯಮ-ಶಕ್ತಿ ಇವೆರಡನ್ನೂ ಅಲ್ಲಿ ಕಾಣ ಬಹುದು ಎಂದುಕೊಂಡ. ಏನು ಚೆಲುವು ? ತನಗೆ ತಿಳಿಯದಲೇ ಇಬ್ರಾಹೀಮ ನನ್ನು ಕೇಳಿಬಿಟ್ಟ :

"ಕುದುರೆಯನ್ನು ಚೆನ್ನಾಗಿಟ್ಟದ್ದೀಯ. ಎಷ್ಟು ದಿನವಾಯಿತು ಇದನ್ನು ತೆಗೆದುಕೊಂಡು ?"

"ಈ ಕುದರಿ ಅಂದ್ರ ಜೀವಾ ಕೊಟ್ಟೇನ್ರಿ ! ಹನ್ನೊಂದು ವರ್ಷ ಆಯ್ತುರಿ ಇದನ್ನು ತಂದು: ಬೇಕಾದವರು ಬೇಕಾದಷ್ಟು ಕೊಡತೇನಂದ್ರೂ ಕೊಟ್ಟಿಲ್ಲರಿ."

"ಎಲ್ಲಿ ಕೊಂಡೆ ಇದನ್ನು ?"

"ಹುಂ....ಅದು ಒಂದು ಕತೀನ. ಇದಕ್ಕೂ ಮೊದಲ ಒಂದು ಕುದರಿ ಇತ್ತರಿ. ಅದು ಮುದುಕ ಆಗಿತ್ತು. ಒಂದು ದಿನಾ ಹೀಂಗ್ಗೆ ಅಪ್ಪಾ ಅವರು ಟಾಂಗೇದಾಗ ಕೂತಾಗ ಅಂದರ್ರಿ: 'ಯಾಕೊ ಇಬ್ರಾಹಿಮು,ಕುದುರಿ ಮುದುಕ ಆತು. ಅದಕ್ಕ ಪಿಂಚಣಿ ಕೊಡಲ್ಲಾ' ಅಂತ.

"ಹೌದರಿ, ಮುದುಕ ಆಗೇತಿ. ಆದರ ಹೊಸಕುದರಿ ಅಂದರ ದುಡ್ಡೆಲ್ಲಿಂದ್ರೀ ತರೋದು ? ಅಂದೆ ನಾ. ರಾಯರು ಅಂದರು : 'ಚಲೋ ಕುದುರಿ ತರತೇನಂದರ ದುಡ್ಡು ಕೊಡುತ್ತೇನಿ. ದುಡ್ಡಿಗ್ಯಾಕ ಚಿಂತಿ' ಅಂದರರಿ. ಹಾಂಗ ನೋಡತಾನ ಇದ್ದೀನಿ,ಆ ಒಡ್ಡರಹಳ್ಳಿಯ ದೇಸಾಯ್ರುಕುದುರಿ ಮಾರತಾರಅಂತ ಯಾರೋ ಹೇಳಿದರು. ಥಟ್ಟನೆ ಹೋದಾವ್ನೆ ನುನ್ನೂರಕ್ಕ ಗೊತ್ತುಮಾಡಿ ಕೊಂಡೇ ಬಂದ್ನಿ. ರಾಯರಿಗೆ ಹೇಳಿದ್ರ ಕೂತಪಟ್ಟಿಗೆ ಮೂರುನೂರು ರೂಪಾಯಿ ಕೊಟ್ಟುಬಿಟ್ರು! ಮುಂದ ವರ್ಸಾರತಿಂಗಳದಾಗ ನೂರುರೂಪಾಯಿ ಕೂಡಿಹಾಕಿ ರಾಯರಿಗೆ ಕೊಡಾಕ ಹೋದ್ರ, ರೂಪಾಯ ಮುಟ್ಟಲಿಲ್ಲರಿ ಮಹಾರಾಯು!....ನಮ್ಮನ್ನಷ್ಟ ಯಾವಾಗರ ಟಾಂಗೇದಾಗ ಒಯ್ಯುತ ಬಾ ಅಂದರ ಸಾಕು ಅಂದರರಿ. ಅದಕ್ಕೇ ಅವರು ಇರೂತನಕಾ ನನ್ನ ಟಾಂಗಾ ಅಂದರ ಅವರದೇ__ದೇವರಂಥಾ ಮನಸ್ಯಾ ಬಿಡಿರಿ...." ಎಂದು ಸುಮ್ಮನಾದ.

ಕಾಲೇಜಿನ ಹೆಬ್ಬಾಗಿಲಲ್ಲಿ ಮಾಧವ ಇಳಿದಾಗ ಎಷ್ಟು ಒತ್ತಾಯಪಡಿಸಿದರೂ ಇಬ್ರಾಹೀಮು ಬಾಡಿಗೆಯನ್ನು ತೆಗೆದುಕೊಳ್ಳಲೊಪ್ಪಲಿಲ್ಲ. "ಚಹವನ್ನಾದರೂ ಕುಡಿ" ಎಂದು ಹೇಳಿದಾಗ ಮಾತ್ರ ಎರಡಾಣೆ ತೆಗೆದುಕೊಂಡ. ಸಾವಟಿಗೆಗಳನ್ನೇರುತ್ತಿರುವಾಗ ಮಾಧವನಿಗೆ ಮತ್ತೆ ಮತ್ತೆ ಅದೇ ವಿಚಾರ ಕಾಡುತ್ತಿತ್ತು. ತನ್ನ ತಂದೆಯು ಊರಲ್ಲಿ ದೊಡ್ಡವನಾಗಿ, ದೊಡ್ಡವನೆನಿಕೊಂಡು ಬಾಳಿದವರು. ನೂರು ಜನರಿಗೆ ನೂರು ರೀತಿಯಲ್ಲಿ ಸಹಾಯ ಮಾಡಿ ಒಳ್ಳೆಯವರು, ಉಪಕಾರಿಗಳು ಎನಿಸಿಕೊಂಡವರು. ಆದರೆ ಆ ಹೆಗ್ಗಳಿಕೆಯೆಲ್ಲವೂ ಅಪಹಾರ ಮಾಡಿದ ಹಣದಿಂದ ಸಾಧ್ಯವಾಗಿದ್ದಿತು. ಅದಕ್ಕೆ ಮೊದಲು ಮನೆತನದ ಸ್ಥಿತಿಗತಿಗಳೆಲ್ಲವೂ ಸಾಮಾನ್ಯವೆ ಆಗಿದ್ದುವು. ಊರೆಲ್ಲ ಅವರನ್ನು

ಪುಣವಂತರೆನ್ನುತ್ತಿದ್ದರೂ ಅವರ ಆ ಪುಣ್ಯವೆಲ್ಲ ಊರಿಗೆ ಗೊತ್ತಿರದ ಪಾಪ ದಲ್ಲಿ ಮೂಲವಾಗುತ್ತಿತ್ತು. ಇದಕ್ಕೆ ಯಾವ ಉತ್ತರ ? ಈ ವಿಚಾರ ಬಂದಾಗ ಲೆಲ್ಲ ಮಾಧವನಿಗೆನಿಸುತ್ತಿತ್ತು: ತನ್ನ ತಂದೆಯವರ ಹಿರಿಮೆ-ಹೆಗ್ಗಳಿಕೆ-ಹೆಸರು ಗಳೆಲ್ಲವೂ ತಿಪ್ಪೆಯಲ್ಲಿ ಬೆಳೆದ ಹೂವು ; ಗೋರಿಯ ಮೇಲೆ ಬೆಳೆದ ಗುಲಾಬಿ ಎಂದು. ಮಾಧವನ ವಿಚಾರಗಳಮಟ್ಟಿಗಾದರೂ ಅವರ ಸಾವು ಅವರ ಬದುಕಿನ ಹಿರಿಮೆಯನ್ನೆಲ್ಲ ಕುಗ್ಗಿಸಿಬಿಟ್ಟಿತ್ತು. ಅವರಿಂದ ಸಹಾಯ ಪಡೆದವರು ಅವರ ಪುಣ್ಯದ ಗೋಪುರ ಕಟ್ಟಿದರು ! ಆದರೆ ಅಪಹಾರ-ಆತ್ಮಹತ್ಯೆಗಳ ಪಾಪ ಆ ಪುಣ್ಯದ ಗೋಪುರವನ್ನು ನೆಲಕ್ಕುರುಳಿಸಿತು ! ಜನರ ಲಕ್ಷ್ಯ ಅವರ ಬಾಳಿನ ಕಡೆಗಿತ್ತು : ಮಾಧವನ ಲಕ್ಷ್ಯ ಆ ಬಾಳು ಪಾಳಾದ ರೀತಿಯ ಕಡೆಗಿತ್ತು.

ಕೊನೆಯ ಪಾವಟಿಗೆಯನ್ನೇರುತ್ತಿರುವಾಗ ವಿದ್ಯಾರ್ಥಿನಿಯರ ವೃಂದ ವೊಂದು ಕಿಲಕಿಲನೆ ನಗುತ್ತ ಬಂದಿತು. ಅವರು ಪಾವಟಿಗೆಗಳನ್ನಿಳಿಯುವಂತೆ ಎಡೆಗೊಟ್ಟ. ಎಲ್ಲರೂ ಮಾಧವನನ್ನು ನೋಡಿ ತಮ್ಮತಮ್ಮೊಳಗೆಯೇ ಪಿಸು ಗುಟ್ಟುವವರೇ. ಇದಕ್ಕೆ ಕಾರಣವೆಂದರೆ ನಿನ್ನೆ ದಿನದ ಕಾರ್ಯಕ್ರಮ. ಸರೋಜಿನಿಯನ್ನು ಕುರಿತು ಚರ್ಚೆಮಾಡುತ್ತಲೇ ಆ ಗುಂಪು ಇಳಿದು ಹೋಯಿತು. ಮಾಧವನಿಗೆ ಎಲ್ಲಿ ಹೋದರೂ ಅವಳ ವಿಷಯವಾಗಿ ಮಾತು ಕೇಳಿಬರುತ್ತಿತ್ತೇ ವಿನಹ, ಸರೋಜಿನಿ ಮಾತ್ರ ಎಲ್ಲಿಯೂ ಕಾಣಲಿಲ್ಲ. ತಾನು ತಡವಾಗಿಯೇ ಬರುತ್ತೇನೆಂದು ಹೇಳಿದ್ದರಿಂದ ಇನ್ನೂವರೆಗೆ ಆಕೆ ಬಂದಿರ ಲಿಕ್ಕಿಲ್ಲವೆಂದುಕೊಂಡು ಅತ್ತಿತ್ತ ಅಲೆದಾಡಿ ಬಂದ. ನೋಟಿಸ್ ಬೋರ್ಡು ಗಳೆಲ್ಲವನ್ನು ನೋಡಿ ಬಂದಾಯಿತು. ಪುಸ್ತಕಾಲಯದಲ್ಲಿಯಾದರೂ ನೋಡೋಣವೆಂದು ಆ ಕಡೆ ತಿರುಗಿದ. ಬದಿಯಲ್ಲಿಯೇ ಇದ್ದ 'ವಿದ್ಯಾರ್ಥಿನಿ ಯರ ಕೋಣೆ'ಯೆದುರು ಎರಡು ಮೂರು ಬಾರಿ ಹಾಯ್ದು ಬಂದದ್ದೂ ಆಯಿತು. ಎಲ್ಲಿಯೂ ಕಾಣಲಿಲ್ಲವಾದ್ದರಿಂದ ರೀಡಿಂಗ್ ರೂಮಿಗೆ ಹೋಗಿ ಯಾವುದೋ ಮಾಸಿಕ ಪತ್ರವನ್ನು ತೆಗೆದುಕೊಂಡು ಕುಳಿತ. ಮನಸ್ಸನ್ನು ಮಾತ್ರ ಅದು ಹಿಡಿಯಲಿಲ್ಲ. ಅದನ್ನೆಸೆದು ಇನ್ನೇನನ್ನೋ ಎತ್ತಿಕೊಂಡ. ಅದೂ ಅಷ್ಟೆಯೇ. ಒಳಮನಸ್ಸು ಸರೋಜಿನಿಯ ಬರವನ್ನು ಎದಿರುನೋಡು ತ್ತಿತ್ತು. ಇನ್ನೂ ಯಾತಕ್ಕೆ ಬರಲಿಲ್ಲ ಎಂದು ಕೇಳುತ್ತಿತ್ತು. ಕುಳಿತು ಬೇಸರ ವಾಯಿತೆಂದು ಪುಸ್ತಕಗಳನ್ನು ಕೊಡುವ ಮೇಜಿನವರೆಗೂ ಅಲೆದಾಡಿ ಬಂದ. ತಿರುಗಿ ಬರುತ್ತಿರುವಾಗ ಎದುರಿಗೆ ನಾಲ್ಕಾರು ಗೆಳೆಯರು ಇದಿರಾದರು: ಒಬ್ಬ ನಂತೂ ಒಳ್ಳೇ ಉತ್ಸಾಹದಿಂದ,

"ಕಾಂಗ್ರಾಚುಲೇಶನ್ಸಪ್ಪಾ....ಕಾಂಗ್ರಾಟ್ಸ್...."ಎಂದ.

"ಯಾತಕ್ಕೊ ? ನನಗೇತಕ್ಕೆ ಕಾಂಗ್ರಾಚುಲೇಶನ್ಸು ?" ಎಂದು ಮಾಧವ.

"ಯಾತಕ್ಕೆ ಎಂದು ಕೇಳುತ್ತೀಯಾ ?"

"ಹೌದು. ಏನೂ ಇಲ್ಲದೆ ಸುಮ್ಮನೆ ಕಾಂಗ್ರಾಟ್ಸ್ ಅಂದರೆ ?"

"ಏನೂ ಇಲ್ಲವೇಕೆ ? ಎಲ್ಲವೂ ಇದೆ. ಅಂತೇ ಕಾಂಗ್ರಾಟ್ಸ್...."ಎಂದು ಎರಡನೆಯುವ.

"ಏನು ಅದ್ಭುತ ಕಾರ್ಯಕ್ರಮ ಮಾಡಿಸಿದೆಯಪ್ಪಾ ನಿನ್ನೆ. ಆಹ್ ! ಸಿಂಪ್ಲಿ ಸ್ಪೆಲ್ಲಂಡಿಡ್...." ಎಂದು ಮೂರನೆಯುವ.

"ಹೇ ! ಅದೇನು ದೊಡ್ಡ ಮಾತು ? ನನಗೆ ಎಲ್ಲಕ್ಕಿಂತಲೂ ಹೆಚ್ಚಾಗಿ ಮನಸ್ಸು ಹಿಡಿದದ್ದಂದರೆ ಉದ್ಘಾಟಕರ ಭಾಷಣ....ಇಟ್ ವಾಸ್ ವಂಡರ್ ಫುಲ್. ನಾನಂತೂ ಸಂಪೂರ್ಣ ಮೈಮರೆತಿದ್ದೆ...." ಎಂದು ಮೊದಲನೆಯುವ.

"ಮೈಮರೆತಿದ್ದೆಯೊ ಮೂರ್ಛೆಹೋಗಿದ್ದೆಯೊ ?"

"ಎರಡೂ ಒಂದೇ ಅಲ್ಲವೆ? ಎಚ್ಚರಇಲ್ಲದೆ ಇರೋದು ಮುಖ್ಯ"ಎಂದು ನಕ್ಕ.

"ನನಗೆ ಅವರ ಭಾಷಣ ಅಷ್ಟೇನೂ ಹಿಡಿಯಲಿಲ್ಲಪ್ಪಾ....ನಮ್ಮ ಅಧ್ಯಕ್ಷರ ಭಾಷಣ....ಓಹ್....ಸ್ವಾಗತಾ ಅಂದ್ರೆ ಆ ತರಹ ಮಾಡಬೇಕು...."

"ಬಂದಿದ್ದವರು ಎದ್ದು ಹೋಗುವ ಹಾಗೆ !"

"ಎದ್ದು ಹೋಗುವ ಹಾಗೆ ಅಲ್ಲ, ಮಹಾರಾಯಾ ! ಎದ್ದು ಹೋಗದ ಹಾಗೆ. ಏಳಲೂ ಬಾರದ ಹಾಗೆ !" ಎಂದು ಗಹಗಹಿಸಿ ನಕ್ಕ.

"ನನಗಂತೂ ಸಾಕಾಗಿ ಹೋಗಿತ್ತು ನೋಡು, ಮಾಧವಾ. ಏನೋ ನೋಡುವಾ ಎಂದು ಮುಂದಿನ ಕುರ್ಚಿಯಲ್ಲಿ ಕುಳಿತದ್ದೇ ಮೂರ್ಖತನ ವಾಗಿತ್ತು. ಒಮ್ಮೆಯಂತೂ 'ಸಾಕು ಮಾಡಿರಿ' ಎಂದು ಅರಚಬೇಕೆಂದೂ ಮಾಡಿದ್ದೆ. ಆದರೆ ಯಾವುದಕ್ಕೂ ನನ್ನ ಜಾಗ ಅಡ್ಡಿಯಾಗಿತ್ತು."

"ಆ ಉದ್ಘಾಟಕರಂತೂ....ಎಲ್ಲಿಂದ ತಂದಿದ್ದೆಯೊ ಆ ಮಿಕನನ್ನ ?"

"ಮಿಕವೇ ? ನಿನ್ನ ಬಾಯಿಗೆ ತಾಳವಿಲ್ಲ, ಮೇಳವಿಲ್ಲ !" ಎಂದ ಮಾಧವ.

"ಅವರು ನಮ್ಮ ಡಿಸ್ಟ್ರಿಕ್ಟ್ ಕಾಂಗ್ರೆಸ್ ಲೀಡರಂತಪ್ಪಾ !"

"ಸರಿ ಹೋಯಿತಲ್ಲ ಮತ್ತೆ. ಲೀಡರ್ ಅಲ್ಲವೆ ? ಭಾಷಣ ಬಿಗಿಯದೆ ನಡೆದೀತಾದರೂ ಹೇಗೆ ?"

"ಸಾಕು ಮಾಡಿರೊ ನಿಮ್ಮ ಚೇಷ್ಟೆಯನ್ನ. ಯಾರು ಬಂದರೂ ನೀವು ಇಷ್ಟು ಮಾತಾಡುವವರೇ...."

"ಹಾಗಾದರೆ ಮೂರು ನಿಮಿಷ ಅಂತ ಮಾತು ಕೊಟ್ಟು ಮುಕ್ಕಾಲು ಗಂಟೆ ಗ್ಯಾಸ್ ಹೊಡೆಯಬೇಕೆ?" ಎಂದು ಒಬ್ಬ ನೆಗೆದು ಬಂದ.

"ಸ್ವಾಗತ ಅಂದರೆ ಸಮಾರೋಪವೆ?" ಎಂದು ಎರಡನೆಯವ ತೂರಿ ಬಂದ.

"ಪರಿಚಯ ಅಂದರೆ ಪರ್ಯವಸಾನ ಭಾಷಣವೆ" ಎಂದು ಮೂರನೆಯವ ಜಿಗಿದು ಬಂದ. ಮಾಧವ ಎರಡೂ ಕಿವಿಗಳನ್ನು ಮುಚ್ಚಿಕೊಂಡು ನಿಂತ. ನಸುನಕ್ಕು ಕಣ್ಣು ಮುಚ್ಚಿದ. ಅರೆನಿಮಿಷದನಂತರ ಕಣ್ಣು ಕಿವಿಗಳೆರಡನ್ನು ತೆರೆದು "ಮುಗಿಯಿತೆ?" ಎಂದ. "ಹಾಳಾಗಿ ಹೋಯಿತು. ನಡೆ. ಭಾಷಣ ಕೇಳಿ ಕೇಳಿ ಹೆಣವಾಗಿ ಹೋಗಿದ್ದೇವೆ. ಗಂಟಲಕ್ಕೇನಾದರೂ ಬಿಸಿ ತಗಲಿಸಿ ಬದುಕಿಸುವ ಹಾಗಿದ್ದರೆ ನಡೆ, ಕಾಫಿಗೆ...." ಎಂದು ಅರ್ಧಮರ್ಧ ಎಳೆದುಕೊಂಡೇ ನಡೆದರು.

ಸರೋಜಿನಿಗಾಗಿ ಕಾಯಬೇಕೆಂದಿದ್ದವ ವಿಧಿಯಿಲ್ಲದೆ ಅವರ ಜತೆಯಲ್ಲಿ ಹೊರಡಲೇಬೇಕಾಯಿತು. ಅವಳಿಗಾಗಿ ಕಾಯಬೇಕಾಗಿದೆ ಎನ್ನುವುದು ಈ ಭಂಡರಿಗೆ ತಿಳಿದರಂತೂ ಮಾತೇ ಮುಗಿಯಿತೆಂದುಕೊಂಡು ಸುಮ್ಮನೆ ಹೊರಟ. ಎಲ್ಲಿ ಆಕೆ ಬಂದು ಹೊರಟುಹೋಗುವಳೊ ಎಂದುಕೊಳ್ಳುತ್ತಿದ್ದ. ಆದರೆ ಬೇರೆ ಯಾವ ಮಾರ್ಗವೂ ಅನುಕೂಲವಿರಲಿಲ್ಲ. ಏನು ನೆಪ ಹೂಡಿದರೂ ಇವರು ಚೇಷ್ಟೆ ಮಾಡುವವರೇ ಅಲ್ಲದೆ, ಬಿಡುವ ಮಾತೇ ಇರಲಿಲ್ಲ.

"ಅಲ್ಲಪ್ಪ, ಕಾಂಗ್ರಾಟ್ಸ್ ಅಂದೆ. ಯಾತಕ್ಕಾಗಿ ಎಂಬುದನ್ನು ಹೇಳಲಿಲ್ಲವಲ್ಲೊ?" ಎಂದ ಮಾಧವ. ಅವರು ಹಾಗೆ ಹೇಳಿದ್ದು ಸರೋಜಿನಿಯ ನೃತ್ಯಕ್ಕಾಗಿ, ನೃತ್ಯಕ್ಕಿಂತ ಹೆಚ್ಚಾಗಿ ಆಕೆಯ ಸಾಮೀಪ್ಯದ 'ಚಾನ್ಸ್'ನ್ನು ಹೊಡೆದುದಕ್ಕಾಗಿ ಎಂಬುದು ತಿಳಿದಿದ್ದರೂ ಬೇಕೆಂತಲೇ ಕೇಳಿದ.

"ಗೊತ್ತಿದ್ದೂ ಗೊತ್ತಿಲ್ಲದವರಂತೆ ನಟಿಸುವವರನ್ನು ಕಂಡರೆ ನಾನಂತೂ ಬೆಂಕಿಯಾಗುತ್ತೇನೆ ನೋಡು, ಮಾಧವಾ...."

"ಬೆಂಕಿಯಾಗುತ್ತೀಯಾ? ಒಳ್ಳೆಯದೇ ಆಯಿತು. ಅದನ್ನೇ ಗಂಟಲಿಗೆ ತಗಲಿಸಿಕೊ, ಬಿಸಿಯಾಗುತ್ತದೆ" ಎಂದು ನಕ್ಕುಬಿಟ್ಟ ಮಾಧವ.

"ನಿಜವಾಗಿಯೂ ಗೊತ್ತಿಲ್ಲವೆ ನಿನಗೆ, ನಾವು ಹಾಗೆ ಯಾತಕ್ಕೆ ಅಂದದ್ದು?"

"ನಿಜವಾಗಿಯೂ ಗೊತ್ತಿಲ್ಲ."

"ಆಣೆಯಿಟ್ಟು ಹೇಳುತ್ತೀಯಾ?"

"ಆಣೆಯಿಟ್ಟು ಹೇಳುತ್ತೇನೆ. ಯಾರ ಆಣೆ ಇಡಲಿ?"

"ಮಿಸ್ ಸರೋಜಿನಿಯ ಆಣೆಯಿಟ್ಟುಹೇಳು!" ಎಂದು ಮೂರನೆಯವ

ಹೇಳಿದುದಕ್ಕೆ ಎಲ್ಲರೂ ಬಿದ್ದುಬಿದ್ದು ನಕ್ಕರು.

"ಪುಚ್ಛು, ನಿಮಗೆಲ್ಲ. ತಲೆ ಕೆಟ್ಟದೆ."

"ನಿನ್ನದು ಕೆಟ್ಟಿರಬೇಕು....ನಮ್ಮದೇಕೆ ಕೆಡಬೇಕು ಸುಮ್ಮಸುಮ್ಮನೆ ?"

"ನೃತ್ಯ ನೋಡಿ ?"

"ಅಷ್ಟರಮಟ್ಟಿಗೇನೊ ಹೌದು. ಆದರೆ...."

"ಆದರೇನು, ನಿನ್ನ ತಲೆ ?"

"ನೃತ್ಯ ನೋಡಿದವರಕಿಂತಲೂ ಅದನ್ನು ಮಾಡಿಸಿದವರದು ಎಷ್ಟು ಪಾಲು ಕೆಟ್ಟಿರಬೇಕು ಎಂಬುವ ಲೆಕ್ಕ ಬಗೆಹರಿಯದಾಗಿದೆ ನನಗಂತೂ !"

"ಹಾಕು ತ್ರೈರಾಶಿಕ...." ಎಂದು ಮಾಧವ.

"ತ್ರೈರಾಶಿಕ ಅಲ್ಲ, ಇದು ದ್ವಿರಾಶಿಕ !...."

"ಅಂದರೇನೊ ?"

"ಅಂದರೆ—ಇಬ್ಬರ ರಾಶಿಯ ಪ್ರಶ್ನೆ ಅಂತ !"

"ರಾಶಿಯದೊ, ಗೋತ್ರದ್ದೊ ?"

"ಆಯಿತು, ಯಾವುದೂ ಅನ್ನು. ರಾಶಿಯೇನು, ಗೋತ್ರವೇನು ?"

"ಮೊನ್ನೆಯೇ ನಾನು ಮಾಧವನ 'ವಾರದ ಭವಿಷ್ಯ' ನೋಡಿದ್ದೆ !" ಎಂದು ಮೊದಲನೆಯವ.

"ನನ್ನ ರಾಶಿ ನಿನಗೆ ಹೇಗೆ ಗೊತ್ತು ?"

"ಎಲ್ಲವನ್ನೂ ನೋಡಿದೆ. ಒಂದರಲ್ಲಿ 'ಸ್ತ್ರೀಸುಖ ಉತ್ತಮ' ಎಂದಿತ್ತು. ಅದೇ ನಿನ್ನದಾಗಿರಲಿಕ್ಕೆ ಬೇಕು ಎಂದುಕೊಂಡೆ."

"ತಲೆ ನಿನ್ನದು ! ನಿನ್ನ ಭವಿಷ್ಯ ಏನಿತ್ತು ?"

"ನನ್ನದೆ ! 'ಪತ್ರಕ್ಕಿಂತಲೂ ಭೆಟ್ಟಿ ಅನುಕೂಲ. ಮಿತ್ರನಿಂದ ಮೃಷ್ಟಾನ್ನ' ಎಂದಿತ್ತು. ನಿನ್ನ ಭೇಟಿಯೂ ಆಯಿತು. ಮೃಷ್ಟಾನ್ನವೂ ಆಗುತ್ತಲಿದೆ !"

"ಆಯಿತು. ನಿಮ್ಮನ್ನು ನೋಡಿ 'ನಾಲ್ವರು ಧೂರ್ತರು' ಕತೆ ನೆನಪಾಗುತ್ತಿದೆ ನನಗೆ. ಯಾವುದಾದರೂ ಮಂಕು ನಿಮ್ಮ ಕೈಗೆ ಬಿದ್ದರೆ ಆತ ಬದುಕುವುದೇ ಕಷ್ಟ" ಎಂದ ಮಾಧವ.

"ನೀನಂತೂ ಬದುಕಿದೀಯಲ್ಲ ? ಅಷ್ಟೇ ಸಾಕು ನಮಗೆ...."

ದುಡ್ಡು ಕೊಡುವವ ಮಾಧವನಾದ್ದರಿಂದ ಮುಕ್ತಕಂಠವಾಗಿ ಆರ್ಡರ್ ಹೋಗುತ್ತಿತ್ತು. ಗೆಳೆಯರೆಲ್ಲರಿಗೂ ಸಮಿಾಚೀನವಾದ ಉಪಹಾರವಾಯಿತು. ಕೊನೆಗೆ ಮಾಧವ ಕೇಳಿದ :

"ಆಯಿತಲ್ಲಪ್ಪ—ಕರುಳು ತಣಿಯುವ ಹಾಗೆ?"

"ಆಗದೇನು? ಭವಿಷ್ಯ ಸುಳ್ಳಾಗುವುದೆ?" ಎಂದು ಭವಿಷ್ಯವಾದಿ ತೃಪ್ತಿಯನ್ನು ಸೂಚಿಸಿದ.

"ಇಲ್ಲವೆಂದರೆ ಕೇಳುವವರು ಯಾರು? ಇಂದಿಲ್ಲ ನಾಳೆ ಇಷ್ಟು ಆಗ ತಕ್ಕದ್ದೇ ಇತ್ತು."

"ಆಗತಕ್ಕದ್ದೇ ಅಂತೆ. ನನಗೇನು ಸಾಲ ಕೊಟ್ಟವರ ಹಾಗೆ ಹೇಳುತ್ತಿದ್ದೀಯಲ್ಲೋ?"

"ಸಾಲ? ಸಾಲ ಯಾತಕ್ಕೆ ಕೊಡಬೇಕು? ನಿನ್ನೆ ಎಲ್ಲ ಮುಗಿದಮೇಲೆ ಹೇಗೆ ಹೊಡೆದಿ? ನೀನೋ, ನಿಮ್ಮ 'ಕಾ.ಕಾ. ಸಮಿತಿಯೊ' ನಿಮ್ಮ ಅಧ್ಯಕ್ಷರೊ, ನಿಮ್ಮ ಅತಿಥಿಯೊ....ಅಲ್ಲದೆ ನಿನ್ನ 'ಫ್ರೆಂಡೊ', ಎಲ್ಲರೂ ಸೇರಿ ಬಕ್ಕರಿಸುವ ಮುಂದೆ ನಾವು ನೆನಪಿನಲ್ಲಿದ್ದೆವೊ? ನಮಗೇನು ಹೊಟ್ಟೆಯುರಿ ಇಲ್ಲವೆ? ಕೈಗಾದರೂ ಸಿಗಲಿ ನೋಡುವ ಎನ್ನುತ್ತಿದ್ದೆ. ಅಷ್ಟರಲ್ಲಿಯೇ ಸಿಕ್ಕಿತಲ್ಲಾ 'ಬಕ್ರಾ....!'" ಎಲ್ಲರ ನಗುವೂ ಅಟ್ಟಕ್ಕೇರುತ್ತಿತ್ತು—ಅವರು ಸೇದುತ್ತಿದ್ದ ಸಿಗರೇಟಿನ ಹೊಗೆಯಂತೆಯೇ.

ಗೆಳೆಯರನ್ನು ಬೀಳ್ಕೊಟ್ಟು ಬರುವಷ್ಟಕ್ಕೆ ಮೂರೂವರೆಯಾಗಿ ಹೋಗಿತ್ತು. ತಾನು ಹೋಟಲಿನಲ್ಲಿದ್ದಾಗಲೆ ಸರೋಜಿನಿ ಬಂದು ಕಾಯ್ದು ಹೋಗಿರಬೇಕೆಂಬುದರಲ್ಲಿ ಸಂದೇಹವೇ ಉಳಿದಿರಲಿಲ್ಲ ಮಾಧವನಿಗೆ. ಅವಸರವಸರವಾಗಿ ಎಲ್ಲ ಕಡೆಯಲ್ಲಿಯೂ ಸುತ್ತಾಡಿಬಂದ. ಸರೋಜಿನಿ ಎಲ್ಲಿಯೂ ಇರಲಿಲ್ಲ. ತನ್ನ ಅವಳ ನಡುವೆ ಬಂದ ಗೆಳೆಯರನ್ನು ಶಪಿಸಿದ. ಭೆಟ್ಟಿಯನ್ನು ತಪ್ಪಿಸಿದ್ದರಲ್ಲದೆ ಮೂರು-ನಾಲ್ಕು ರೂಪಾಯಿ ದಂಡ ಹಾಕಿದ್ದರು. ಇಂಥ ವಿಷಯದಲ್ಲಿ ಮನುಷ್ಯ ಸಹಜವಾಗಿ ನಿರಾಶೆಗೊಳ್ಳುವುದಿಲ್ಲವೇನೊ! ಯಾರಿಗೆ ಗೊತ್ತು, ಸರೋಜಿನಿ ಇನ್ನೂವರೆಗೆ ಬಂದಿರದೆ ಇದ್ದರೆ? ಪಾಪ! ಆಕೆ ನಿರಾಶೆಗೊಂಡು ಹೋಗಬಹುದು ಎಂದುಕೊಂಡು ಮತ್ತೆ ಸುಮಾರು ಅರ್ಧಗಂಟೆ ಕಾಲ ಪುಸ್ತಕಾಲಯದಲ್ಲಿಯೇ ಕಳೆದ. ಆತನ ಗಮನವೆಲ್ಲವೂ ಸುತ್ತಲೂ ತುಂಬಿದ ಪುಸ್ತಕಗಳ ಕಡೆಗಿರದೆ ಸರೋಜಿನಿ ಬರಬಹುದಾಗಿದ್ದ ಬಾಗಿಲದ ಕಡೆಗಿತ್ತು! ಕೊನೆಗೂ ಸರೋಜಿನಿ ಬರಲಿಲ್ಲ. ತೀರ ನಿರಾಶೆಗೊಂಡು ಕಾಲೆಳೆಯುತ್ತ ಮನೆಯ ಕಡೆಗೆ ಸಾಗಿದ. ಮನಸ್ಸಿನಲ್ಲಿಯ ನಿರಾಶೆ ಇನ್ನೂ ಹೆಚ್ಚಾಯಿತು. ಮನೆಗೆ ಹೋಗಿ ಮಾಡುವುದಾದರೂ ಏನು? ಮನೆಯಲ್ಲಿ ಮತ್ತಾರೂ ಇರದ್ದರಿಂದ ಕಕ್ಕಿ ಮನೆಯಲ್ಲಿರುವುದೂ ಸಾಧ್ಯವಾಗಿ ಕಾಣಲಿಲ್ಲ. ಪ್ರತಿನಿತ್ಯವೂ

ಇರುತ್ತಿರಲಿಲ್ಲ. ಆಸುಪಾಸಿನ ಯಾರ ಮನೆಯಲ್ಲಾದರೂ ಹರಟೆಯ ಕಾರ್ಯಕ್ರಮ ನಿತ್ಯದ್ದಿತ್ತು. ನಿತ್ಯ ತಾಯಿ ಮನೆಯಲ್ಲಿರುತ್ತಿದ್ದರು. ಆದರೆ ಇಂದು ತಾಯಿ ಮನೆಯಲ್ಲಿಲ್ಲ. ನಿರಾಶೆ ಕಳ್ಳಿಮುಳಲಿನ ಹಾಗೆ! ಅದರಲ್ಲಿ ಸಿಕ್ಕುಬಿದ್ದ ಮನುಷ್ಯ ಇನ್ನೊಬ್ಬನ ಸಹಾಯವಿಲ್ಲದೆ ಮೇಲಕ್ಕೇಳುವುದು ಸಾಧ್ಯವಿಲ್ಲ. ಪಶ್ಚಿಮದಬಿಸಿಲು ಮೋರೆಯನ್ನಡರಿ ಬೆವರಿಬೆವರನ್ನು ಸುರಿಸುತ್ತಿತು. ಹೊರಡುವಾಗ ಟಾಂಗಾದಲ್ಲಿ ಹೋದದ್ದರಿಂದ ಹಿಂದಿರುಗುವಾಗ ಅನಿರ್ವಾಹವಾಗಿ ನಡೆದುಕೊಂಡು ಹೋಗಬೇಕಾಗಿತ್ತು. ಮಾಧವ ಹೆಜ್ಜೆಹಾಕುತ್ತಲೇ ಇದ್ದ. ಹೆಜ್ಜೆಹೆಜ್ಜೆಗೂ ಒಂದಡಿನಿರಾಶೆಯ ತಗ್ಗಿನಲ್ಲಿ ಇಳಿಯುತ್ತಿದ್ದ. ಆದರೆ ಕೂಡಲೆ ಸಾವರಿಸಿಕೊಳ್ಳಲೆತ್ನಿಸಿದ. ಯಾವ ಯೋಚನೆಯನ್ನೂ ಮಾಡದೆ ಓದತಕ್ಕದ್ದು ಎಂದುಕೊಂಡ. ಆ ನಿರ್ಧಾರದಲ್ಲಿ ಜೋರಾಗಿ ಹೆಜ್ಜೆಹಾಕಿದ ; ಮನೆ ತಲುಪಿದ ಆದರೆ ನಿರೀಕ್ಷಿಸಿದಂತೆ ಹೆಬ್ಬಾಗಿಲಿಗೆ ದೊಡ್ಡದಾದ ಕೀಲಿ ! ಆ ದೊಡ್ಡದಾದ ಕೀಲಿ ತನ್ನ ಭವಿಷ್ಯದ ಸಂಕೇತದಂತಿತ್ತು ಎಂದೆನಿಸಿತು. ಒಂದು ಕ್ಷಣ ಮಾಧವನಿಗೆ !

ಕಕ್ಕಿ ಬರಬಹುದೆಂದು ಐದು ಹತ್ತು ನಿಮಿಷ ಕಾಯ್ದು ನೋಡಿದ. ನಿತ್ಯದ ಪದ್ಧತಿಯೋ ಅಂದೂ ನಡೆಯುವಂತಿದ್ದರೆ ಆಕೆ ಸಾಯಂಕಾಲ ಆರರವರೆಗೂ ತಮ್ಮ 'ಕಾನ್‌ಫರೆನ್ಸ್' ಮುಗಿಸುವಂತಿರಲಿಲ್ಲ. ಎಲ್ಲಿ ಹೋಗಬೇಕೆಂದು ತಿಳಿಯದಾಯಿತು. ಇಳಿಬಿಸಿಲಾದರೂ ಚುರುಕಾಗಿ ಉರಿಯುತ್ತಿತ್ತು. ಮನೆಯೆದುರಿನ ಗಿಡ ಕೂಡ ಬಿಸಿಲಿಗೆ ಬೇಸತ್ತು ಆಸೆ ತೊರೆದ ಹೃದಯದಂತೆ ಮ್ಲಾನವಾಗಿ ನಿಂತಿತ್ತು—ಸಂಜೆಯನ್ನು ಎದಿರು ನೋಡುತ್ತ. ಮಾಧವನಿಗೆ ತೀರ ಬೇಸರವೆನಿಸಿತು. ಗೆಳೆಯನ ಮನೆಯ ಕಡೆಗೆ ಕಾಲುಹಾಕತೊಡಗಿದ....ಇತ್ತ ಸರೋಜಿನಿಯೂ ಸಿಗಲಿಲ್ಲ. ಆಕೆ ಸಿಕ್ಕಿದ್ದರೆ ಒಂದು ಗಳಿಗೆಯನ್ನಾದರೂ ಉಲ್ಲಾಸದಲ್ಲಿ ಕಳೆಯಬಹುದಿತ್ತೇನೊ ! ಪಾಪ, ಆಕೆ ಎಷ್ಟು ನಿರಾಶೆಪಟ್ಟುಕೊಂಡಳೊ !

ಸರೋಜಿನಿ ನಿರಾಶೆಪಟ್ಟಿದ್ದು ನಿಜ—ಆದರೆ ಮಾಧವ ಬಗೆದ ರೀತಿಯಲ್ಲಿ ಮಾತ್ರ ಅಲ್ಲ. ಸರೋಜಿನಿ ಕಾಲೇಜಿಗೆ ಬಂದುಹೋದಳು. ಆದರೆ ಅದು ಮಾಧವ ಕಾಲೇಜನ್ನು ಬಿಟ್ಟನಂತರ ! ಮಾಧವ ಕಾಲೇಜಿನಲ್ಲಿ ಅಷ್ಟು ತಡವಾಗಿ ಇದ್ದಿರಬೇಕೆಂಬ ಭರವಸೆಯಿಂದ ಆಕೆ ಬಂದಿರಲಿಲ್ಲ. ನೋಡೋಣ, ಇದ್ದರೂ ಇರಬಹುದು. ದಾರಿಕಾಯುತ್ತಿದ್ದರೆ ಆತನಿಗೆ ನಿರಾಶೆಯಾಗಬಾರದು ಎಂಬ ವಿಚಾರದಿಂದ ನಾಲ್ಕು ಗಂಟೆಯ ಸುಮಾರಿಗೆ ಬಂದು ಹೋದಳು. ಇದಕ್ಕೆ ಕಾರಣ ಆಕೆಯ ಗೆಳತಿಯರು, ಮುನ್ನಾದಿನವೇ ಸುಮತಿ 'ಪರೀಕ್ಷೆ'

ಗಾಗಿ ಊರಿಗೆಹೋಗಬೇಕಾಗಿತ್ತು. ಆದರೆಗೆಳತಿಯರೆಲ್ಲರೂಸೇರಿ ಸರೋಜಿನಿಯ ನೃತ್ಯದ ನೆಪಹೂಡಿ, ಆಕೆ ಹೊರಡುವುದನ್ನು ಒಂದು ದಿನದ ಮಟ್ಟಿಗೆ ವಿಲಂಬಿಸಿದ್ದರು. ಸುಮತಿಗೆ ಊರಿಗೆ ಹೊರಡುವ ಮನಸ್ಸಿದ್ದರೂ ಸರೋಜಿನಿಯ ಕಾರ್ಯಕ್ರಮಕ್ಕೆ ಎರವಾಗಲು ಮನಸ್ಸಿರಲಿಲ್ಲ. ಹೀಗಾಗಿ ಆಕೆಯೂ ಹೆಚ್ಚು ಒತ್ತಾಯವಿಲ್ಲದೆ ಒಪ್ಪಿದ್ದಳು. ಆಕೆ ಮಧ್ಯಾಹ್ನದ ಮೂರರ ರೈಲಿಗೆ ಹೋಗುವವಳಾಗಿದ್ದಳು. ಮದುವೆಯ ನಾಂದೀ ಪದ್ಯವನ್ನು ಹಾಡಹೊರಟ ಸುಮತಿಯನ್ನು ಬೀಳ್ಕೊಡಲೆಂದು ಗೆಳತಿಯರೆಲ್ಲರೂ ನಿಲ್ದಾಣಕ್ಕೆ ಹೊರಟರು. ಸರೋಜಿನಿಗೆ ಹೋಗಲು ಮನಸ್ಸಿಲ್ಲದಿದ್ದರೂ ಹೋಗಲೇಬೇಕಾಯಿತು. ಕಾಲೇಜಿಗೆ ಹೋಗಬೇಕಾಗಿದೆಯೆಂದರೆ 'ಯಾತಕ್ಕೆ ? ಮಾಧವನನ್ನು ಕಾಣಬೇಕಾಗಿದೆಯೇ ?' ಎಂಬ ಪ್ರಶ್ನೆಯನ್ನು ಎದುರಿಸಬೇಕಾಗಿಬಂದಿತ್ತು. ಏನು ನೆಪ ಹೇಳಿದರೂ ಅವರಿಗೆ ವಿಶ್ವಾಸವಾಗುವುದು ಸಾಧ್ಯವಿರಲಿಲ್ಲ. ಹೀಗಾಗಿ ಗತಿಯಿಲ್ಲದೆ ಸರೋಜಿನಿ ನಿಲ್ದಾಣಕ್ಕೆ ಹೋಗಬೇಕಾಗಿ, ತಿರುಗಿ ಬಂದ ನಂತರ ಕಾಲೇಜಿಗೆ ಬರಬೇಕಾದರೆ ನಾಲ್ಕು ಗಂಟೆಯಾಗಿತ್ತು. ಮಾಧವ ಸಿಕ್ಕಲಿಲ್ಲ. ಆತ ಮನಸ್ಸಿನಲ್ಲಿ ಏನೆಂದುಕೊಂಡಿರಬಹುದು ? ನಾನಾದರೂ ಏನು ಮಾಡಲಿ ? ಇಂಥ ಸಮಯಕ್ಕೆ ಗೆಳತಿಯರಿರುವುದು ಒಂದು ಆತಂಕವೇ ! ಎಂದು ಕೊಂಡಳು ತೀರ ಬೇಸರದಿಂದ ಕಾಲೆಳೆಯುತ್ತ ಕೋಣೆ ಸೇರಿದಳು.

ಒಬ್ಬರೊಬ್ಬರ ಭೆಟ್ಟಿಯಾಗದ್ದರಿಂದ ಇಬ್ಬರನ್ನು ಒಂದೇ ಯೋಚನೆ ಕಾಡುತ್ತಿತ್ತು. ಇಂದಿನದಂತೂ ಹೀಗಾಯಿತು ! ಇನ್ನು ಮುಂದೆಯಾದರೂ ಭೆಟ್ಟಿಯಾಗುವುದು ಹೇಗೆ? ಮಾಧವನ ಕ್ಲಾಸುಗಳೆಲ್ಲವೂ ಮುಗಿದು ಹೋಗಿದ್ದವು —ತನ್ನಂತೆಯೇ; ಎಂದಮೇಲೆ ಆತ ಕಾಲೇಜಿಗಂತೂ ಬರುವ ಹಾಗಿಲ್ಲ. ಆತನ ಮನೆಯೂ ತನಗೆ ಗೊತ್ತಿಲ್ಲ, ಎಂದು ಸರೋಜಿನಿ ಯೋಚಿಸುತ್ತಿದ್ದಳಾದರೆ, ಸರೋಜಿನಿಯ ಪರೀಕ್ಷೆಯಂತೂ ಹತ್ತು ದಿನ ಮಾತ್ರ ಉಳಿಯಿತು. ಕಾಲೇಜಿಗೆ ಆಕೆ ಬರುವಂತಿಲ್ಲ. ಆಕೆ ಇರುವುದು ವಸತಿಗೃಹದಲ್ಲಿ ತನಗಂತೂ ಅಲ್ಲಿ ಪ್ರವೇಶವಿಲ್ಲ. ಎಂದಮೇಲೆ ಆಕೆಗೆ ಒಂದು ಮಾತನ್ನು ತಿಳಿಸಬೇಕಾದರೂ ಕಾಗದ ಬರೆಯುದ ಹೊರತು ಬೇರೆ ಮಾರ್ಗ ಕಾಣಲಿಲ್ಲ. ಆದರೆ ಕಾಗದ ಬರೆಯುವಂಥ ಒತ್ತಾಯದ ಕೆಲಸವಾದರೂ ಏನು ? ಭೆಟ್ಟಿಯಾಗಬೇಕಾಗಿದೆಯೆಂದು ಕಾಗದ ಬರೆದರೆ ಆಕೆ ಏನೆಂದುಕೊಂಡಾಳು ? ನೋಡುವ, ಒಂದೆರಡು ದಿನಗಳಲ್ಲಿ ಅಲ್ಲಿ ಇಲ್ಲಿ ಎಲ್ಲಿಯಾದರೂ ಸಿಕ್ಕಬಹುದು ; ಇಲ್ಲದೆ ಹೋದರೆ ಕಾಗದ ಬರೆದರಾಯಿತು. ಇಲ್ಲವೆ ಹೇಳಿಕಳುಹಿಸಿದರಾಯಿತು ಎಂದು

ಕೊಂಡು ಸಮಾಧಾನ ತಂದುಕೊಂಡ. ಆದರೆ ಅದೇ ಸಮಾಧಾನ ಸರೋಜಿನಿಯ ಪಾಲಿಗೆ ಮಾತ್ರ ಬರುವಂತಿರಲಿಲ್ಲ.

ಮಾಧವ ಮನೆಗೆ ಬಂದಾಗ ಮಬ್ಬುಗತ್ತಲಾಗಿತ್ತು. ಕಕ್ಕಿಯ ಸವಾರಿ ಆದೇ ಮನೆಗೆ ಬಂದು ದೀಪಗಳನ್ನು ಉರಿಸುವುದರಲ್ಲಿತ್ತು. ಮುಂಜಾವಿನ ಕೋಪಾವೇಶ ಇಳಿದಂತಿದ್ದರೂ ಬಿಗುಮಾನವೇನೂ ಕಡಿಮೆಯಾಗಿರಲಿಲ್ಲ. ಮಾಧವ ಸಹಜವಾಗಿಯೇ ಕೇಳಿದ :

"ಈಗ ಬಂದಿರೇನು ?"

"ಯಾಕೆ ?" ಎಂದರು ಕಕ್ಕಿಯವರು. ಅವರು ತಿರುಗಿ ಪ್ರಶ್ನೆಯನ್ನು ಕೇಳುವ ರೀತಿಯನ್ನು ನೋಡಿದರೆ ಮಾಧವ ಕೇಳಿದ ಪ್ರಶ್ನೆಯನ್ನು ಅವರು ತಮಗೆ ಬೇಕಾದ ರೀತಿಯಲ್ಲಿಯೇ—ವಿಪರೀತವಾಗಿಯೇ—ಅರ್ಥ ಮಾಡಿ ಕೊಂಡಂತೆ ಕಾಣುತ್ತಿತ್ತು. ಹಾಗೆ ಕೇಳಬಾರದಾಗಿತ್ತು ಎನಿಸಿತು ಮಾಧವ ನಿಗೆ. ಏನಾದರೊಂದು ಉತ್ತರವನ್ನು ಹೇಳಬೇಕೆಂದು ಕೇಳಿದ :

"ಇಲ್ಲ, ಸುಮ್ಮನೆ ಕೇಳಿದೆ" ಎಂದ.

"ನೀನು ಮಧ್ಯಾಹ್ನ ಬಂದಿದ್ದೆ ಏನು ?"

"ಹುಂ....ನಾಲ್ಕು ಗಂಟೆಯ ಸುಮಾರಿಗೆ ಬಂದಿದ್ದೆ. ಕೀಲಿ ಹಾಕಿತ್ತು !"

"ಎಂದಿಗೂ ಬಾರದವ ಇಂದು ಬಂದೆಯಪ್ಪ...." ಬಂದು ಹೋದನೆಂಬ ಕನಿಕರಕ್ಕಿಂತ ಎಂದೂ ಬಾರದವ ಇಂದು ಬೇಗ ಬಂದದ್ದೂ ತಪ್ಪು ಎನ್ನುವ ಆಪಾದನೆಯೇ ಜೋರಾಗಿತ್ತೆಂದೆನಿಸಿತು ಮಾಧವನಿಗೆ. ಮಾತು ಮುಗಿಸ ಲೆಂದು ಮಾಧವ ಹೇಳಿದ :

"ಈಗಾದರೂ ಏನಾಯಿತು ? ಎಲ್ಲಿಯೋ ಗೆಳೆಯನ ಮನೆಗೆ ಹೋಗಿಬಿಟ್ಟೆ, ಆಯಿತು !"

"ಹೀಗೆಂದಿ, ಒಳ್ಳೆಯದು. ಇಲ್ಲವಾದರೆ ಮನೆಗೆ ಬಂದಾಗಲೆಲ್ಲ ಕೀಲಿ ಎಂದು ಬೊಬ್ಬಾಟ ಮಾಡಿದರೆ...." ಎಂದು ಕೊಂಕು ನುಡಿಯುತ್ತಲೇ ದೀಪವನ್ನೆತ್ತಿ ಕೊಂಡು ಒಳಗಡೆ ನಡೆದರು. "ನನಗೇನು ಅದೊಂದೇ ಕೆಲಸವೆ ?" ಎಂದೆನ್ನ ಬೇಕೆಂದಿದ್ದ ಮಾಧವ ಸುಮ್ಮನಾದ. ಬೇರೊಂದು ದೀಪವನ್ನೆತ್ತಿಕೊಂಡು ಬಂದು ತನ್ನ ಕೋಣೆಯನ್ನು ಸೇರಿದ. ರಾಧಕ್ಕನ ವಿಚಾರವಾಗಿ ಕಕ್ಕಿ ಒಂದು ಮಾತನ್ನೂ ಕೇಳದೆ ಇದ್ದದ್ದು ಮಾಧವನಿಗೆ ಒಂದು ಕ್ಷಣ ವಿಚಿತ್ರವೆನಿಸಿತು. ಊಟದ ಮೊದಲು ಅರ್ಧ ಮುಕ್ಕಾಲು ಗಂಟೆ ಕೋಣೆಯೆಲ್ಲವನ್ನು ಸ್ವಚ್ಛ ವಾಗಿಸಿ ಪುಸ್ತಕಗಳನ್ನು ಓರಣವಾಗಿಟ್ಟುಕೊಂಡು ಓದಿನ ಪೂರ್ವಸಿದ್ಧತೆ

ಯನ್ನು ಮಾಡಿಕೊಂಡ. ಇನ್ನು ಒಂದು-ಒಂದೂ ಕಾಲು ತಿಂಗಳು ಕೇವಲ ಓದತಕ್ಕದ್ದು; ಮನೆಯನ್ನು ಬಿಟ್ಟು ಕೂಡ ಕದಲತಕ್ಕದಲ್ಲ ಎಂದುಕೊಂಡ. ಆದರೆ ಮಂಗಮನಸ್ಸು ಅಣಕಿಸುವಂತೆ ಕೇಳಿತು: "ಹಾಗಾದರೆ ಸರೋಜಿನಿಯ ಸಂದರ್ಶನ?" ಎಂದು. "ಹೊ! ಅದೇನು ದೊಡ್ಡ ಮಾತು? ಅಷ್ಟರಮಟ್ಟಿಗೆ ಕದಲಬಹುದು!" ಎಂದು ಉತ್ತರ ಹೇಳಿಕೊಂಡು ಸಮಾಧಾನ ಪಡೆದ. ಸರೋಜಿನಿಯೇ ಕೇಳಿರಲಿಲ್ಲವೆ? "ಓದು ಎಂದರೇನು, ಯಾರಾದರೂ ಇಪ್ಪತ್ತು ನಾಲ್ಕು ಗಂಟೆಯುವರೆಗೂ ಓದುತ್ತಾರೆಯೆ?" ಎಂದು. ಮರುಗಳಿಗೆಯಲ್ಲಿ ಇನ್ನೂ ಒಂದು ವಿಚಾರ ಸುಳಿದುಹೋಯಿತು. ಸರೋಜಿನಿ ಆಗಾಗ ಭೆಟ್ಟಿ ಯಾದರೆ ಓದನ್ನು ಮತ್ತೂ ಉತ್ಸಾಹದಿಂದ ಸಾಗಿಸಬಹುದು ಎನಿಸಿತು. ವಿಚಿತ್ರ! ಹೀಗೇಕೆನಿಸಬೇಕು? ಉತ್ತರ ಹೇಳದೆ ಕೊನೆಯಲ್ಲಂದುಕೊಂಡ: "ಓದು ಮುಖ್ಯ, ಆದರೆ ಸರೋಜಿನಿಯೂ ಮುಖ್ಯವಲ್ಲ! ಎರಡನ್ನೂ ಹೊಂದಿಸಿ ಕೊಂಡು ಹೋಗುವುದು ಸಾಧ್ಯ. ಸಾಧ್ಯ ಮಾತ್ರವಲ್ಲದೆ, ಅಗತ್ಯ....ಉತ್ಸಾಹ ದಾಯಕ!" ಎನ್ನುತ್ತಿರುವಾಗಲೇ ಊಟಕ್ಕಾಗಿ ಕರೆ ಬಂದಿತು.

ಊಟ ಮೌನವಾಗಿಯೇ ನಡೆಯಿತು. ರಾಯರು ಏನೂ ಮಾತನಾಡ ಲಿಲ್ಲ. ತಾನಾಗಿಯೇ ಕೆದರಿ ಮಾತನಾಡಿಸುವುದಂತೂ ದೂರವೆ. ಅವರಿಬ್ಬರ ಮಾತು ನಡೆದೇ ಇತ್ತು—ತವರಿನ ಬಳಗದ ವಿಚಾರದಾಗಿ. ಮಾಧವ ಊಟ ಮುಗಿಸಿ ಕೋಣೆಯನ್ನು ಸೇರಿದ.

ತಾನು ಓದಬೇಕಾದ ಪಠ್ಯಪುಸ್ತಕಗಳಲ್ಲಿಯೂ ಮಾಧವನಿಗೆ ಹ್ಯಾಂಲೆಟ್ ನಾಟಕ ತುಂಬ ಮೆಚ್ಚಿಕೆಯದಾಗಿತ್ತು. ಆದ್ದರಿಂದ ಅದನ್ನು ಆಗಲೇ ಎರಡು ಮೂರು ಸಾರಿ ಓದಿದ್ದ. ಆದರೂ ಅದನ್ನೇ ಮತ್ತೆ ಓದಬೇಕೆನ್ನಿಸಿತು. ಎಷ್ಟು ಸಾರಿ ಓದಿದರೂ ಕಡಿಮೆ. ಓದಿದಷ್ಟು ಸಾರೆಯೂ ಹೊಸದಾದ ಒಂದು ನೋಟವನ್ನು ಒದಗಿಸುವ ಕೃತಿ ಅದು ಎಂದ. ಅಲ್ಲಿ ಇಲ್ಲಿ ಪುಟ ತಿರುವಿ ಹಾಕುತ್ತ ಓದುತ್ತಲೇ ಇದ್ದ. ಓದಿದ ಹಾಗೆಲ್ಲ ಒಂದು ವಿಚಾರ ಮಾಧವನಿಗೆ ಎಂದಿನಂತೆ ವಿಚಿತ್ರವೆನಿಸುತ್ತಿತ್ತು. ಹ್ಯಾಂಲೆಟ್ ಈ ಪರಿ ಯಾತಕ್ಕೆ ಸಂಕಟಪಡುತ್ತಾನೆ? ಯಾಕೆ ಈ ಎಲ್ಲ ಆತನ ಮನೋವ್ಯಥೆ? ಹಿಂದಿನದೆಲ್ಲವನ್ನು ಮರೆಯಲಿಕ್ಕಾಗದಕ್ಕಾಗಿಯಲ್ಲವೆ? ಆ ಮರೆವು ಸಾಧ್ಯ ವಾಗಿದ್ದರೆ ಹ್ಯಾಂಲೆಟ್ ಹ್ಯಾಂಲೆಟ್ ಆಗಿ ಉಳಿಯುತ್ತಿರಲಿಲ್ಲ ಎನಿಸಿತು. ಅದೇ ವಿಚಾರವನ್ನು ಬೆನ್ನಟ್ಟಿ ಮಾಧವನ ಚಿತ್ತ ಪುಸ್ತಕದಿಂದ ದೂರವಾಯಿತು. ಹಿಂದಿನದನ್ನು ಮರೆಯುವುದು ಸಾಧ್ಯವೆ? ಸಾಧ್ಯವಿದ್ದರೆ ತಾನೇಕೆ ಮರೆಯ

ಬಾರದು ? ತನ್ನ ತಂದೆಯ ಜೀವನ-ಅವಸಾನಗಳು ತನ್ನನ್ನೇಕೆ ಕಾಡುತ್ತಿರ ಬೇಕು ? ಕಕ್ಕನಿಂದ ಪಾಲು ಪಡೆದು ಪಾಲಿಗೆ ಬಂದದ್ದು ಪಂಚಾಮೃತ ವೆಂದು ಬಗೆದು ಬಾಳದೆ ಯಾವುದೂ ಬೇಡವೆಂದು ಬೇರೆಯಾದ—ಸಂಪೂರ್ಣ ಸ್ವತಂತ್ರವಾದ—ಬಾಳಿಗಾಗಿ ಯಾಕೆ ಬಾಯ್ಬಿಡಬೇಕು ? ಹಾಗಾದರೆ ಒಳ್ಳೆ ಯದು-ಕೆಟ್ಟದ್ದು ಎಂಬ ವಿವೇಕವನ್ನೇ ಬಿಟ್ಟುಬಿಡಬೇಕಾದೀತು ಎಂದು ಕೊಂಡ. ಯೋಚನೆ ಎಲ್ಲೆಲ್ಲಿಯೂ ಹರಿಯತೊಡಗಿತು. ಎದುರಿನ ದೀಪಕ್ಕೆ ಗಾಳಿ ತಗುಲಿದಾಗ ಚಲಿಸಿದ ಚಿತ್ತ ಪುಸ್ತಕಕ್ಕೆ ಮರಳಿತು. ಥೂಃ ! ಹೀಗಾದರೆ ಓದುವುದೇನು ? ಎಂದ. ಮತ್ತೆ ನಾಲ್ಕಾರು ಪುಟಗಳನ್ನು ತಿರುವಿದ. ಎಲ್ಲಿಯೋ ಕಣ್ಣು ನೆಟ್ಟಿತು. "ದೆಅರ್ ಈಜ್ ಎ ಡಿವಿನಿಟಿ ದ್ಯಾಟ್ ಶೇಪ್ಸ್ ಅವರ ಎಂಡ್ಸ್" [ನಮ್ಮ ಆಶೋತ್ತರಗಳೆಲ್ಲವನ್ನೂ ರೂಪಿಸುವ ಶಕ್ತಿಯೊಂದಿದೆ] —ಎಂದೋದಿದ. ಅಹುದೆ ? ಇದೇ ಕೊನೆಯ ಸತ್ಯವೇ ? ಇರಬಹುದು. ಯಾರು ಹೇಳಬೇಕು ? ಈಗ ಮೂರು ದಿವಸಗಳ ಹಿಂದೆ ಭೀಮಣ್ಣ ಬಂದು ತಾಯಿಯನ್ನು ಕರೆದೊಯ್ಯಬಹುದೆಂಬ ಕಲ್ಪನೆ ಕನಸು ಮನಸ್ಸಿನಲ್ಲಿಯೂ ಇರಲಿಲ್ಲ. ನಿನ್ನೆ ಇಲ್ಲಿ ಇದ್ದವಳು ಇಂದು ಕನಿಷ್ಟ ನೂರು ಮೈಲಿ ದೂರ ! ಇಬ್ಬರೂ ಭೇಟಿಯಾಬೇಕೆಂದುಕೊಂಡಿದ್ದರೂ ತನಗೂ ಸರೋಜಿನಿಗೂ ತಪ್ಪಿ ಗಂಟಾಯಿತು! ಇದೆಲ್ಲ ಹಾಗಾದರೆ ದೈವತದ ಆಟವೇ ? ಹಾಗಿದ್ದರೆ ತಾನು ಏನು ಮಾಡಿ ಏನು ? ಎಂದುಕೊಂಡ. ಮತ್ತೆ ಕೆಲವು ಪುಟಗಳನ್ನು ತಿರು ವಿದ. ಮಾನವನೆಂದರೆ ಎಂಥ ಅದ್ಭುತ...." ಇತ್ಯಾದಿಯಾಗಿ ಓದಿದಾಗ ಹೃದಯದಲ್ಲಿ ಆಸೆ ಒಡಮೂಡತೊಡಗಿತು. ಆಸೆ ಒಡಮೂಡಿದ ಹಾಗೆ ಹ್ಯಾಂಲೆಟ್‌ನ ವ್ಯಕ್ತಿತ್ವದ ಬಗೆಯಲ್ಲಿ ವಿಚಿತ್ರವೆನಿಸಹತ್ತಿತು. ಒಮ್ಮೆ ದೈವತ ವೆನ್ನುತ್ತಾನೆ, ಇನ್ನೊಮ್ಮೆ ಮಾನವ ಎನ್ನುತ್ತಾನೆ. ಹೌದು, ಅಂತೆಯೇ ಆತ ಮಾನವ ! ಬದುಕು ಒಂದು ತೂಗುಯ್ಯಾಲೆಯಲ್ಲವೆ ? ಒಂದೆಡೆ ತಿಳಿಯದ ಅದ್ಭುತ! ಇನ್ನೊಂದೆಡೆ ತಿಳಿಯಬಹುದಾದ ವಾಸ್ತವ! ಓದಿಗಿಂತಲೂ ಹೆಚ್ಚಾಗಿ ಯೋಚನೆಗೇ ಚಾಲನೆ ಕೊಡುತ್ತಿದ್ದ ಹ್ಯಾಲೆಂಟ್ ತೆಗೆದಿಟ್ಟು ಬೇರೆ ಯಾವುದೋ ಪುಸ್ತಕವನ್ನೆತ್ತಿಕೊಂಡ....

## 5

ಮುಂದೆ ಐದಾರೂ ದಿನಗಳಾದರೂ ಸರೋಜಿನಿ ಎಲ್ಲಿಯೂ ಸಿಕ್ಕಲಿಲ್ಲ. ತನ್ನಂತೆ ಆಕೆಯೂ ತುಂಬ ಓದುತ್ತಿರಬೇಕು ಎಂದುಕೊಂಡ. ಆದರೆ ದಿನ

ದಿನಕ್ಕೂ ಆಕೆಯನ್ನು ನೋಡಬೇಕೆಂಬ ಕುತೂಹಲ ಬೆಳೆಯತೊಡಗಿತ್ತು. ಎರಡು ಮೂರು ಬಾರಿ ಕಾಲೇಜಿನವರೆಗೂ ಹೋಗಿ ಬಂದಿದ್ದ. ಒಂದು ದಿನ ಸಾಯಂಕಾಲ ವಸತಿಗೃಹದೆದುರಿನಿಂದ ಹಾಯ್ದು ಹೋಗಿದ್ದ. ಆದರೆ ಸರೋಜಿನಿ ಕಣ್ಣಿಗೆ ಬಿದ್ದಿರಲಿಲ್ಲ. ಆರನೆಯ ದಿನ ಕಾಲೇಜಿಗೆ ಬಂದಿದ್ದ— ಲೈಬ್ರರಿಯ ಒಂದೆರಡು ಪುಸ್ತಕಗಳನ್ನು ವಾಪಸು ಕೊಟ್ಟಹಾಗೂ ಆಯಿತು, ಸರೋಜಿನಿ ಸಿಕ್ಕರೂ ಆಯಿತು ಎಂದು. ಆಕೆ ಕಾಣಲಿಲ್ಲ. ಆದರೆ ಆಕೆಯನ್ನು ಭೆಟ್ಟಿಯಾಗಲು ಅನುಕೂಲ ಸಂಧಿಯೊಂದು ಮಾತ್ರ ಸಿಕ್ಕಿತು. ಸಂಘಗಳ ಕಾರ್ಯದರ್ಶಿಗಳೆಲ್ಲರೂ ತಮ್ಮ ತಮ್ಮ ಲೆಕ್ಕಪತ್ರಗಳನ್ನೂ ವರದಿಗಳನ್ನೂ ಕೂಡಲೆ ಒಪ್ಪಿಸಬೇಕೆಂದು ಪ್ರಕಟಣೆಯೊಂದಿತ್ತು. ತಾನಿನ್ನೂ ಲೆಕ್ಕವನ್ನೇ ಬರೆದಿರಲಿಲ್ಲ. ಒಬ್ಬಿಬ್ಬರ ಕಡೆಯಿಂದ ಉತ್ಸವದ ಟಿಕೆಟ್ಟಿನ ಪುಸ್ತಕಗಳೂ, ಅದರ ಹಣವೂ ಬಂದಿರಲಿಲ್ಲ. ಮುಖ್ಯವಾಗಿ ಸರೋಜಿನಿಯ ಕಡೆಯಿಂದ ಬಂದಿರದಿದ್ದುದು ಅನುಕೂಲವೇ ಆಯಿತೆನಿಸಿತು ಮಾಧವನಿಗೆ. ಪಾವತಿ ಪುಸ್ತಕಗಳನ್ನೂ, ವಸೂಲಾದ ಹಣವನ್ನೂ ಕೂಡಲೆ ತಂದು ಒಪ್ಪಿಸಬೇಕು" ಎಂದು ಚೀಟಿಯೊಂದನ್ನು ಬರೆದು ಕಾಲೇಜಿನ ಆಳಿನ ಮುಖಾಂತರ ಕಳಿಸಿ ಕೊಟ್ಟ. ಯಾರಿಗೂ ಸಂಶಯ ಬೇಡವೆಂದು ಚೀಟಿಯನ್ನು ಮೊದಲು ವಸತಿ ಗೃಹದ ಮೇಲ್ವಿಚಾರಕರಕಡೆಗೆ ತೋರಿಸಬೇಕೆಂದೂ ಆಳಿಗೆ ಹೇಳಿದ. ಏನಾದರೂ ಆಗಲಿ ಹತ್ತಿಪ್ಪತ್ತು ನಿಮಿಷಗಳಲ್ಲಿ ಸರೋಜಿನಿ ಬಂದೇ ಬರುವಳೆಂಬ ಆತುರದಲ್ಲಿ ಪುಸ್ತಕಾಲಯವನ್ನು ಸೇರಿದ.

ನಿರೀಕ್ಷಿಸಿದಂತೆ ಸರೋಜಿನಿ ಕೆಲಹೊತ್ತಿನಲ್ಲಿಯೇ ಅವಸರವಾಗಿ ಬಂದೇ ಬಿಟ್ಟಳು. ಅಲ್ಲಿ ಇಲ್ಲಿ ನೋಡಿ ಪುಸ್ತಕಾಲಯಕ್ಕೆ ಬಂದಿದ್ದಳು. ಕೈಯಲ್ಲಿ ಪಾವತಿಯ ಪುಸ್ತಕಗಳಿದ್ದುವು. ಬಿಸಿಲಲ್ಲಿ ಬಂದವಳೆಂದು ಮುಖ ಸ್ಪಷ್ಟವಾಗಿ ಹೇಳುತ್ತಿತ್ತು. ಬರುವಾಗ ಬಳುಕುತ್ತಿದ್ದಳು. ತುಸು ನಾಚುತ್ತಲೂ ಇದ್ದಳು. ಆದರೆ ಮಾಧವನ ಮುಖದ ಮೇಲಿನ ಮುಗುಳು ನಗೆಯಿಂದ ಉತ್ತೇಜಿತಳಾಗಿ ಮುಂದೆ ಬಂದಳು. ಮಾಧವನಿಗೆ ಮಾತು ಹೇಗೆ ಮೊದಲು ಮಾಡಬೇಕೆಂಬುದು ಸರೋಜಿನಿಯಂತೆಯೇ ತಿಳಿಯದಾಗಿತ್ತು. ಅರ್ಧನಿಮಿಷ ಸುಮ್ಮನಾಗಿಯೇ ಇದ್ದು ಆಮೇಲೆ ಕೇಳಿದ :

"ಪಾವತಿ ಪುಸ್ತಕಗಳೆಲ್ಲವನ್ನೂ ತಂದಿರಾ ?"

ಮಾಧವನ ನಸುನಗು ಸರೋಜಿನಿಗೆ ಅರ್ಥವಾಗಲಿಲ್ಲ.

ಹುಂ....ಆದರೆ ಹಣ ಇನ್ನೂ ವಸೂಲಾಗಲಿಲ್ಲ."

"ಎಷ್ಟು ಬರಬೇಕು ?"

"ಸುಮಾರು ಹದಿನಾಲ್ಕು ರೂಪಾಯಿ."

"ಹಣ ಇರಲಿ. ಪುಸ್ತಕಗಳನ್ನು ಕೊಟ್ಟುಬಿಡಿರಿ. ಅಂದರೆ ಲೆಕ್ಕವನ್ನು ಸಿದ್ಧಪಡಿಸಲಾದರೂ ಆದೀತು...."ಎಂದು ಸುಮ್ಮನಾದ. ಸರೋಜಿನಿಯೇ ಮುಂದುವರಿದಳು :

"ನಿಮ್ಮ ಚೀಟಿ ಬಂದಕೂಡಲೆ ನನಗೆ ತುಂಬ ಗಾಬರಿಯಾಯಿತು !"

"ಯಾಕೆ ?"

"ನಾಲ್ಕಾರು ದಿವಸಗಳಲ್ಲಿ ಎಲ್ಲ ಹಣವನ್ನು ಕೂಡಿಸಿ ಆಮೇಲೆ ನಿಮ್ಮ ಕಡೆಗೆ ಬರಬೇಕೆಂದಿದ್ದೆ. ಅಕಸ್ಮಾತ್ತಾಗಿ ಚೀಟಿ ಬಂದಿತು. ಕೂಡಲೆ ಎಲ್ಲ ವನ್ನೂ ತೆಗೆದುಕೊಂಡು ಬರಬೇಕು ಎಂದು."

"ಕೂಡಲೆ ಎಲ್ಲ ಹಣ ತೆಗೆದುಕೊಂಡು ಬರಬೇಕೆಂದು ಬರೆದಿದ್ದೆನೆ ?"

"ಹಣದ ವಿಚಾರ ಬರೆದಿರಲಿಲ್ಲ, ನಿಜ. ಆದರೂ ಕೂಡಲೇ ಬರಬೇಕೆಂದು ಬರೆದಿದ್ದಿರಿ !"

"ಹೌದು—ಆ ಮಾತು ನಿಜ !" ಎಂದು ಮಾಧವ ಮುಗುಳುನಗೆ ಬೀರಿದ. ಆ ನಗೆಯಲ್ಲಿ ಸರೋಜಿನಿ ತಾನು ಅಪೇಕ್ಷಿಸುತ್ತಿದ್ದ ಅರ್ಥವನ್ನು ಕಂಡಳು. ಅದರೊಡನೆ ಮಾತಿನಲ್ಲಿಯ ಉಪಚಾರದ ಬಿಗುವು ಕಡಿಮೆ ಯಾಗುತ್ತ ನಡೆಯಿತು.

"ಹಾಗಾದರೆ ಇದೆಲ್ಲ ಒಂದು ನೆಪವೆ ?"

"ಹೌದು ಮತ್ತು ಅಲ್ಲ, ಎರಡೂ !"

"ಆದರೂ ಹೀಗೆ ಒಮ್ಮೆಲೆ ಸೂಪರಿಂಟೆಂಡೆಂಟರ ಮುಖಾಂತರ ಚೀಟಿ ಯೆಂದರೆ...."

"ಮತ್ತಿನ್ನೇನು ಮಾಡುವುದು ಹಾಗಾದರೆ, ಬರುತ್ತೇನೆಂದು ಬಾರದಿದ್ದರೆ?"

"ಹೌದು. ತಾವು ಬಾರದಿದ್ದುದನ್ನು ಮುಚ್ಚಿಕೊಳ್ಳಲಿಕ್ಕೆ ಒಳ್ಳೆಯ ಉಪಾಯ ಇದು !"

"ಉಪಾಯವೇನು ?"

"ತಾವು ಬಾರದೆ ನಾನು ಬರಲಿಲ್ಲವೆಂದು ಹೇಳಿಬಿಟ್ಟರಾಯಿತಲ್ಲ ?"

"ಯಾರು ? ನಾನು ಬಂದಿರಲಿಲ್ಲವೆ ?"

"ಬಂದಿದ್ದೀರಾ ?"

"ಬಾರದೆ ಏನು ?"

"ಆಯಿತು, ನೀವು ಹೇಳಬೇಕು ನಾನು ಹುಂ ಎನ್ನಬೇಕು! ಹಾಗಾದರೆ ನಾನು ಬಂದಿದ್ದಿಲ್ಲವೆ?"

"ಬಂದಿದ್ದರೂ ನನಗಂತೂ ಕಾಣಲಿಲ್ಲ. ಇತ್ತೀಚೆಗೆ ನೃತ್ಯದ ಜತೆಯಲ್ಲಿ ಅದೃಶ್ಯವಾಗಿ ಅಡ್ಡಾಡುವ ಕಲೆಯನ್ನು ಕಲಿತಿದ್ದರೆ ಯಾರಿಗೆ ಗೊತ್ತು?"

"ನನಗಿಂತ ಹೆಚ್ಚಾಗಿ ನಿಮಗೇ ಹಸ್ತಗತವಾದಂತಿದೆ ಆ ಕಲೆ!"

"ಉಪಾಯವಿಲ್ಲ. ನಾನಂತೂ ಬಂದಿದ್ದೆ. ಒಂದು ಗಂಟೆ ಕಾಯ್ದು, ಬೇಸತ್ತು ಹೋದೆ."

"ನಾನೂ ಬಂದಿದ್ದೆ. ಒಂದೂವರೆ ಗಂಟೆ ಕಾಯ್ದು ಹೋದೆ" ಎಂದು ಸರೋಜಿನಿ ನಕ್ಕಳು.

"ಎಷ್ಟು ಗಂಟೆಗೆ ಬಂದಿದ್ದಿರಿ?"

"ಸುಮಾರು ಎರಡೂಕಾಲಾಗಿರಬಹುದು. ಮೂರೂವರೆಯವರೆಗೂ ಇದ್ದೆ" ಎಂದು ಸಹಜವಾಗಿಯೇ ಏನನ್ನೋ ಹೇಳಿಬಿಟ್ಟಳು. ಮಾಧವ ಎರಡರ ಗಂಟೆಯನ್ನು ಹೋಟಲಿನಲ್ಲಿ ಕೇಳಿದ್ದ. ಮೂರೂವರೆಯವರೆಗೂ ಗೆಳೆಯರೊಡನೆ ಅಲ್ಲಿಯೇ ಇದ್ದ. ಸರೋಜಿನಿ ನಿಜವಾಗಿಯೂ ಬಂದು ತನಗಾಗಿ ಕಾಯ್ದುಹೋದಳು ಎಂದು ಮರುಕವೆನಿಸಿ ನಿಜವಿದ್ದುದನ್ನು ಹೇಳದೆ ಬೇರೆ ಮಾರ್ಗವಿಲ್ಲ ಎನಿಸಿ ಮಾಧವನೆಂದ :

"ನಾನು ಕಾಲೇಜಿಗೆ ಬಂದಿದ್ದೆನೇನೋ ನಿಜ. ಆದರೆ ನಿಮಗೆ ಮಾತ್ರ ಸಿಗುವಂತಿರಲಿಲ್ಲ!"

"ಅದು ಹೇಗೆ?"

"ಒಂದರ್ಧಗಂಟೆ ಆಚೆ ಈಚೆ ಅಲೆದಾಡಿದೆ. ಒಂದು ಗಂಟೆಗೇ ಬಂದಿದ್ದೆ. ಅಷ್ಟರಲ್ಲಿಯೇ ಮೂರು ನಾಲ್ಕು ಜನ ಫ್ರೆಂಡ್ಸು ಹೋಟಲಿಗೆಳೆದುಕೊಂಡು ಹೋಗಿಬಿಟ್ಟರು. ಅಲ್ಲಿಯೇ ವೇಳೆಯಾಗಿಹೋಯಿತು."

"ಅಲ್ಲವೆ? ಹೇಗೆ ಹೊರಬಿದ್ದಿತು ಈಗ? ಮೇಲೆ ನಾನೇ ಬರಲಿಲ್ಲ ಎಂದು ಸಾಧಿಸಬೇಕೆನ್ನುತ್ತಿದ್ದಿರಲ್ಲವೆ?" ಎಂದು ಕೊರಳು ಕೊಂಕಿಸಿ ಒಳ್ಳೆ ವೈಯಾರದಿಂದ ನಗು ಬೀರಿದಳು. ತಾನು ಬಾರದೆ ಬಂದಿದ್ದೆನೆಂದು ಸಾಧಿಸಿದ್ದಕ್ಕೆ ಮೋಜೆನಿಸುತ್ತಿತ್ತು. ಆದ್ದರಿಂದ ಉಕ್ಕಿಬರುತ್ತಿದ್ದ ನಗುವನ್ನು ತಡೆಯಲಾರದವಳಾಗಿದ್ದಳು. ಇದನ್ನು ನೋಡಿ ಮಾಧವ ಕೇಳಿದ :

"ಯಾಕೆ ಈ ಪರಿ ಹಿಗ್ಗು?"

"ಹಿಗ್ಗೆಲ್ಲಿಯದು?"

"ಒಳ್ಳೆ ಖುಷಿಯಾಗಿ ನಗುತ್ತಿದ್ದೀರಲ್ಲಾ ?"

"ನಗು ಬೇರೆ ಕಾರಣಕ್ಕಾಗಿ...."ಎಂದು ಸರೋಜಿನಿ ತಡೆದಳು. ಆತನ ಇಂಗಿತ ಹೊರಬಿದ್ದಿದ್ದದರಿಂದ ತನ್ನದನ್ನೂ ಹೇಳಿಬಿಡಬೇಕೆನ್ನಿಸುತ್ತಿತ್ತು. ಅಲ್ಲದೆ ಮಾಧವ ತನ್ನ ತಪ್ಪಿಗಾಗಿ ಮರುಕಗೊಳ್ಳುವುದೂ ಬೇಡ ಎಂದುಕೊಳ್ಳುತ್ತಿದ್ದಳು.

ಸರೋಜಿನಿ ಮಾತನಾಡಬೇಕೆನ್ನುವುದರಲ್ಲಿಯೆ,

"ಬೇರೆ ಯಾವ ಕಾರಣ ?" ಎಂದ ಮಾಧವ, ಕುತೂಹಲ ಹಿಡಿಸದೆ.

"ಬೇರೆ ಕಾರಣವೆಂದರೆ. ನಾನೂ ಅಂದು ಕಾಲೇಜಿಗೆ ಬಂದಿರಲಿಲ್ಲ !" ಎಂದು ಗಟ್ಟಿಯಾಗಿ ನಕ್ಕಳು.

"ಆಂ....?" ಎಂದು ಮಾಧವ ಅರ್ಧಮರ್ಧ ಎದ್ದೇಬಿಟ್ಟ.

"ಬಂದಿರಲಿಲ್ಲವೆ ?"

"ಇಲ್ಲ !"

"ಒಳ್ಳೆ ಗಡಿಯಾರ ನೋಡಿಟ್ಟವರಂತೆ ಹೇಳಿದಿರಲ್ಲ ಮತ್ತೆ...."

"ಇಲ್ಲದಿದ್ದರೆ ನಿಮ್ಮ ಗುಟ್ಟು ಹೇಗೆ ರಟ್ಟಾಗಬೇಕು ?"

"ಒಳ್ಳೇ ಮೋಸ ಇದು !"

"ಯಾರದು ? ನಿಮ್ಮದೊ, ನನ್ನದೊ ?"

"ಆಯಿತು, ಇಬ್ಬರೂ ಮೋಸಗಾರರು ಎನ್ನಿರಿ ಬೇಕಾದರೆ....!" ಎಂದುದಕ್ಕೆ ಇಬ್ಬರೂ ಮನಃಪೂರ್ವಕವಾಗಿ ನಕ್ಕರು. ನಗು ತಡೆದು ಮಾಧವ ಕೇಳಿದ :

"ನಿಮ್ಮ ಪರೀಕ್ಷೆ ಎಂದು ಪ್ರಾರಂಭ ?"

"ಬರುವ ಸೋಮವಾರ."

"ಎಂದರೆ ನಾಲ್ಕೇ ದಿನ ಉಳಿಯಿತಲ್ಲಾ ?"

"ಹೌದು."

"ಹೇಗಾಗಿದೆ ಸಿದ್ಧತೆ ?"

"ಪಾಸಾಗಬಹುದು...."

"ಬಹುದೆ ?"

"ಆಗುವುದು...."

"ಹಾಗಾದರೆ ಸರಿ...."

"ಯಾಕೆ ?"

"ಯಾಕೇನು ? ಆಗದಿದ್ದರೆ ನನ್ನ ತಲೆಯ ಮೇಲೆ...."

"ಓಹ್ ! ಒಳ್ಳೆಯ ಮಾತು ಇದು."

"ಅಲ್ಲದೆ ಏನು. ಬಾಗಿಲಿಗೆ ಪರೀಕ್ಷೆ ಬಂದಾಗ ಕಾರ್ಯಕ್ರಮ ಎಂದು ನಿಮ್ಮ ವೇಳೆ ತೆಗೆದೆ."

"ಅದೇನು ನನಗೆ ಬೇಡವಾಗಿತ್ತೆ ?"

"ಬೇಕಾಗಿರಬಹುದು. ಆದರೂ...."

ಸರೋಜಿನಿಗೆ ಮಾಧವನ ಬಗ್ಗೆ ಅಭಿಮಾನವೆನಿಸಿತು. ತನ್ನ ಬಗೆಯಲ್ಲಿಯೂ ಆಸ್ಥೆಯಿಂದ ಯೋಚಿಸುತ್ತಿದ್ದನೆಂಬುದನ್ನು ನೆನೆದು ಸಮಾಧಾನವೆನಿಸಿತು. ಅವನ ಬಗೆಯಲ್ಲಿ ತಾಸು ತಳೆದಿದ್ದ ಆಸೆಗೆ ಅವಕಾಶವಿಲ್ಲದಿಲ್ಲವೆಂಬುದನ್ನು ನೆನೆದಾಗಲಂತೂ ಇನ್ನೂ ಸಮಾಧಾನವೆನಿಸಿತು. ಅಂತೆಯೇ ಕೇಳಿದಳು :

"ನಿಮ್ಮ ಓದು ಹೇಗೆ ಸಾಗಿದೆ ?"

"ಸಾಗಿದೆ ಹೀಗೆಯೆ ! ಕುಂಟುತ್ತ....!"

"ಕುಂಟುತ್ತ....?"

"ಹುಂ....ನಿಮ್ಮ ನೃತ್ಯ ನೋಡಿದಾಗಿನಿಂದ ನನ್ನ ಓದೂ ಕುಣಿಯುವುದನ್ನು ಕಲಿತಂತಿದೆ !"

"ಅಂದರೆ ನನ್ನ ನೃತ್ಯವೆಂದರೆ ಕುಂಟಿದ ಹಾಗೆಯೆ ?" ಎಂದು ನಗು ಸೂಸಿದಳು.

"ಹಾಗೆಲ್ಲಿ ಹೇಳಿದೆ ? ಕುಂಟುವುದು ನನ್ನ ಮನಸ್ಸು, ನಿಮ್ಮ ನೃತ್ಯವಲ್ಲ!"

"ನನ್ನ ನೃತ್ಯಕ್ಕೂ ನಿಮ್ಮ ಓದಿಗೂ ಏನು ಸಂಬಂಧ ?" ಸಂಬಂಧವನ್ನು ತಿಳಿದರೂ ಕೇಳಿದಳು.

"ಸಂಬಂಧವೇನೂ ಇರಲಿಲ್ಲ, ನೋಡುವ ಮೊದಲು. ಆದರೆ ನೋಡಿದ ಮೇಲೆ—"ಎಂದು ಅರ್ಧಕ್ಕೆಯೇ ತಡೆದು ಆಕೆಯ ಮುಖವನ್ನೇ ನೋಡುತ್ತ ಕುಳಿತ. ಸರೋಜಿನಿಯೂ ಆತನ ಭಾವವನ್ನು ತಿಳಿದವಳಾದ್ದರಿಂದ ಮಾತು ಬೆಳೆಸಲಿಲ್ಲ. ಆದರೂ ಹೇಳಿದಳು :

"ಸಂಬಂಧ ಇದ್ದರೂ ಅದರಿಂದ ಅಡ್ಡಿಯಾಗಬಾರದು !" ಎಂದು.

"ಆಗಬಾರದು ನಿಜ. ಆದರೆ ಆಗುತ್ತಿದೆಯಲ್ಲ...."

"ಆಗಗೊಡಬೇಡಿರಿ...."

"ಸಾಧ್ಯವೆ ?"

"ಸಾಧ್ಯವಿಲ್ಲವೆ ?"

"ನೋಡಬೇಕು—"

ಎಂದ ಮಾಧವ ಮತ್ತೆ ಮೊದಲಿನಂತೆಯೇ ಸರೋಜಿನಿಯ ಮುಖವನ್ನೇ ದಿಟ್ಟಿಸಿದ. ಅದನ್ನು ತಿಳಿದ ಆಕೆಯು ದೃಷ್ಟಿಯನ್ನು ನೆಲದ ಕಡೆಗೆ ತಿರುವಿದಳು. ಕೈಯಲ್ಲಿಯ ಕಾಗದವನ್ನು ಸುರುಳಿ ಮಾಡುವುದು, ಮಾಡಿದ್ದನ್ನು ಬಿಚ್ಚು ವುದು, ಬಿಚ್ಚಿದ್ದನ್ನು ಮತ್ತೆ ಸುರುಳಿ ಮಾಡುವುದು, ಹೀಗೆ ನಡೆದಿತ್ತು ಸರೋಜಿನಿಯ ಕೆಲಸ. ಉತ್ಸವ ಮುಗಿದನಂತರ ವಸತಿಗೆ ಹಿಂತಿರುಗಿ ಹೋಗು ವಾಗ ಸರೋಜಿನಿಯ ಒಂದು ಮಾತು ಮಾಧವನಿಗೆ ನೆನಪಾಯಿತು. ಅದನ್ನು ಕೇಳಲು ಒಳ್ಳೆ ಸಮಯವೆಂದು ಕೇಳಿದ.

"ಆ ದಿವಸ ನೀವು ಏನೋ ಬಹಳ ಹೇಳುವುದಿದೆ ಎಂದಿರಿ, ಏನದು ಹೇಳು ವುದು ?"

ಆ ಒಂದು ಪ್ರಶ್ನೆಯಿಂದ ಮಾಧವ ಸರೋಜಿನಿಯನ್ನು ಸಂಪೂರ್ಣ ವೈಪರೀತ್ಯಗೊಳಿಸಿದ. ಪ್ರಶ್ನೆಯೇನೋ ಸಾಮಾನ್ಯವಾಗಿತ್ತು, ಅವನ ಮಟ್ಟಿಗೆ, ಆದರೆ ಅದನ್ನು ಕೇಳುವ ಸಮಯ ಸರಿಯಾಗಿದ್ದಿತೆಂದೇ ಸರೋಜಿನಿಯ ಬಾಯಿ ಪೂರ್ತಿ ಕಟ್ಟಿದಂತಾಯಿತು. ತನ್ನ ಮನಃಸ್ಥಿತಿಯನ್ನು ಸಂಪೂರ್ಣ ವಾಗಿ ಅರಿತವನಾಗಿದ್ದರಿಂದಲೇ ಆತ ಹೀಗೆ ಕೇಳಿದನೆಂಬುದು ಸರೋಜಿನಿಗೆ ತಿಳಿದು, ಆಕೆ ಓರೆಗಣ್ಣಿನಿಂದ ಮಾಧವನನ್ನು ಸೂಚ್ಯವಾಗಿ ನೋಡಿದಳು. "ನಿಮಗೆ ತಿಳಿದೇ ಇದೆ. ಆದರೂ ಯಾತಕ್ಕೆ ನನ್ನನ್ನು ತೊಂದರೆಗೀಡು ಮಾಡುತ್ತೀರಿ ?" ಎಂದು ಕೇಳುವಂತಿತ್ತು ಆ ನೋಟ. ಮಾಧವನಿಗೆ ಇದು ತಿಳಿದರೂ ಬೇಕಂತಲೇ ಕೆಣಕಿದ.

"ಏನು ಹೇಳಕೂಡದೆ ?"

"ಹೇಳಕೂಡದೇಕೆ ? ಹೇಳಬಹುದು...."

"ಹೇಳಿರಿ ಹಾಗಾದರೆ...." ಎಂದು ಮಾಧವ ಮತ್ತೆ ಮೆಲುನಗೆ ನಕ್ಕ.

"ಹೇಳುವೆ ಇನ್ನಾವಾಗಲಾದರೂ...."

"ಈಗ ಹೇಳುವುದಿಲ್ಲವೇ ?"

"ಈಗ ಬೇಡ. ಮತ್ತೊಮ್ಮೆ...."

"ಮತ್ತೊಮ್ಮೆ ಯಾವಾಗ ?"

"ನನ್ನ ಪರೀಕ್ಷೆ ಮುಗಿದನಂತರ !"

"ಪರೀಕ್ಷೆ ಮುಗಿದನಂತರ ? ಬಹಳ ದಿನವಾಯಿತು."

"ಹಾಗಾದರೆ ಪ್ರಾರಂಭವಾಗುವ ಮೊದಲು ಯಾವಾಗಲಾದರೂ...."

"ಹುಂ....ಇಂದು ಗುರುವಾರ. ಆದಿತ್ಯವಾರ ?"

"ಆಗಬಹುದು."

"ಎಲ್ಲಿಗೆ ಬರಲಿ ?" ಪ್ರಶ್ನೆ ಬಾಯಿಂದ ಮಿಂಚಿಹೋಯಿತು. ಮರುಕ್ಷಣವೇ ನಾಚಿಕೆ ಸರೋಜಿನಿಯ ಮುಖವನ್ನೆಲ್ಲ ಆವರಿಸಿ ಅಂಥ ಚೆಲುವೆಯಲ್ಲದ ಆಕೆಯನ್ನೂ ಚೆಲುವೆಯನ್ನಾಗಿ ಮಾಡಿ ತೋರಿಸಿತು.

"ಕಾಲೇಜಿಗೆ ಬರುತ್ತೀರಾ ?"

"ಆದಿತ್ಯವಾರ ಕಾಲೇಜು ಇರುವುದಿಲ್ಲ !"

"ಬಲ್ಲೆ ಅದನ್ನು. ಆದಿತ್ಯವಾರವಾದರೆ ಕಟ್ಟಡ ಊರಿಗೆ ಹೋಗುವುದೆ ?"

"ಹುಂ...." ಎಂದು ಸರೋಜಿನಿ ನಕ್ಕಳು. ಸುಮ್ಮನಾದಳು ಮಾಧವನ ಮಾತುಗಾರಿಕೆಯೆದುರು.

"ಇಲ್ಲಿಗೇ ಬಂದುಬಿಡಿರಿ. ಇಲ್ಲವಾದರೆ ಇಲ್ಲಿ ಯಾರಾದರೂ ಇರಬಹುದು. ಹಿಂದಿನ ಗೇಟಿನ ಬಳಿ ಬಂದುಬಿಡಿರಿ. ಆರು ಗಂಟೆಯ ಸುಮಾರಿಗೆ ಅಡಿಗೇ ಎಲ್ಲಿಗಾದರೂ ಹೋಗೋಣ—" ಎಂದ ಮಾಧವ. ಸರೋಜಿನಿಯು ಮೌನದಿಂದಲೇ ಸಮ್ಮತಿಯನ್ನು ಸೂಚಿಸಿದಳು.

ನಾಲ್ಕಾರು ದಿನಗಳಿಂದ ತಾನು ಕೇವಲ ಪುಸ್ತಕಗಳಲ್ಲಿಯೇ ತೊಡಗಿದ್ದಕ್ಕಾಗಿಯೊ, ಮತ್ತಾವ ಕಾರಣಕ್ಕಾಗಿಯೊ ಮಾಧವನಿಗೆ ತಿಳಿಯಲಿಲ್ಲ. ರಾಮರಾಯರು ಮಾತ್ರ ಆಗೀಗ ಮಾತನಾಡಿಸಿ ತನ್ನ ಸಮಾಚಾರವನ್ನು ತೆಗೆದುಕೊಳ್ಳುತ್ತಿದ್ದುದು ಮಾಧವನಿಗೆ ಹೇಳತೀರದ ಸಮಾಧಾನವನ್ನುಂಟುಮಾಡಿತ್ತು. ಹೀಗೆಯೇ ಇನ್ನೂ ಒಂದು ತಿಂಗಳ ಮಟ್ಟಿಗೆ ಮನೆಯಲ್ಲಿಯ ವಾತಾವರಣ ಉಳಿದರೆ ತಾನು ಪಟ್ಟುಬಿಡಬೇಕೆಂದಿದ್ದ ಆನರ್ಸನ್ನೂ ಸಾಧಿಸಬಹುದು ಎನಿಸುತ್ತಿತ್ತು. ಸರೋಜಿನಿ ಹೊರಟುಹೋದ ಅನಂತರ ಅತ್ತಿತ್ತ ಸುತ್ತಾಡಿಕೊಂಡು, ಪೇಟೆಯಿಂದ ತನಗೆ ಬೇಕಾಗಿದ್ದ ಕಾಗದ, ಮಸಿ ಮುಂತಾದ ಸಾಮಗ್ರಿಗಳನ್ನು ಕೊಂಡು ಮಾಧವ ಮುಚ್ಚಂಜೆಯಾಗುವುದರಲ್ಲಿಯೇ ಮನೆ ಸೇರಿದ. ಮನಸ್ಸು ಉಲ್ಲಾಸದಲ್ಲಿತ್ತು. ಅತ್ತಿತ್ತ ಸುತ್ತಿ ಮತ್ತೆ ಸರೋಜಿನಿಯನ್ನೇ ನೆನೆಯುತ್ತಿತ್ತು. ಆ ಉಲ್ಲಾಸಕ್ಕೆ ಸರಿಯಾಗಿ ಮನೆಗೆ ಬರುವಷ್ಟಕ್ಕೆ ಕೀಲಿಯೂ ಇರಲಿಲ್ಲ ಬಾಗಿಲಿಗೆ. ಮಾಧವನಿಗೆನಿಸಿತು ಸುಸೂತ್ರ ಸಾಗಿದರೆ ಎಲ್ಲವೂ ಸುಸೂತ್ರವೇ. ಎಲ್ಲಿಯಾದರೂ ಒಂದೆಡೆ ತಪ್ಪಿದರೆ ಎಲ್ಲವೂ ಹದಗೆಟ್ಟು ಎಲ್ಲ ಕಡೆಯಿಂದಲೂ ತೊಂದರೆ. ಜೀವನ ಎಂದರೆ ಬಲುದೊಡ್ಡದಾದ ಯಂತ್ರ ! ಎಲ್ಲ ಚಿಕ್ಕಪುಟ್ಟ ಚಕ್ರಗಳು, ಭಾಗ

ಗಳು, ಸರಿಯಾಗಿ ಹೊಂದಿಕೆಯಾಗಿ ಕೆಲಸ ಮಾಡುತ್ತಿದ್ದಾಗ ಇಡೀ ಯಂತ್ರ ಒಂದು ಜೀವವಾಗಿ ಕೆಲಸ ನಡೆಸುತ್ತದೆ. ಎಲ್ಲಿಯಾದರೂ ಒಂದೆಡೆ ಒಂದು ಚಕ್ರ ಒಂದು ಭಾಗ ಸರಿಯಾಗಿ ಕಲಸಮಾಡದಿದ್ದರೆ ಇಡೀ ಯಂತ್ರವೇ ಭೂತಾಕಾರವಾಗಿ ನಿಂತುಬಿಡುತ್ತದೆ. ಎಂಥ ಸೋಜಿಗ! ಮೊನ್ನೆ ಸರೋಜನಿಯೂ ಸಿಗದೆ ಬೇಸರಪಟ್ಟು ಕಾಲೆಳೆಯುತ್ತ ಮನೆಗೆ ಬಂದರೆ ಮೋರೆಯ ಮೇಲೆ ಏಟು ಹೊಡೆಯುವಂತೆ ಬಾಗಿಲಿಗೆ ಬೀಗ! ಆದರೆ ಇಂದು? ಸರೋಜಿನಿಯೂ ಸಿಕ್ಕಿದ್ದಳು. ಮನತಣಿವ ರೀತಿಯಲ್ಲಿ ಹರಟೆಯೂ ಬೆಳೆದಿತ್ತು. ಅದಕ್ಕೆ ಸರಿಯಾಗಿ ಮನೆಗೆ ಬರುವಷ್ಟರಲ್ಲಿ ಕಕ್ಕಿ ಮನೆಯಲ್ಲಿದ್ದರಲ್ಲದೆ ತನಗಾಗಿ ಏನೋ ತಿಂಡಿಯನ್ನೂ ಇಟ್ಟಿದ್ದರು. ಹಾಗಾದರೆ ಮನೆಯಲ್ಲಿಯ ತೊಂದರೆಗೆ ಕಾರಣರಾರಿರಬಹುದು? ಅವರೆ? ತಾನೆಯೇ? ಮನಸ್ಸು ಉತ್ತರವನ್ನು ಹುಡುಕುತ್ತಿದ್ದಾಗ ವಿಚಾರ ಹೊಳೆಯಿತು. ಮನುಷ್ಯನೆಂದರೇನು ಒಂದೇ ಬಗೆಯಲ್ಲಿ ನಡೆಯುವ ಯಂತ್ರವಲ್ಲ. ಒಮ್ಮೆ ಹಾಗೆ, ಒಮ್ಮೆ ಹೀಗೆ ನಡೆಯತಕ್ಕದ್ದೇ. ಎಲ್ಲರೂ ಒಂದೇ ರೀತಿಯಲ್ಲಿ ಒಂದೇ ವೃತ್ತಿಯಿಂದ ನಡೆದರೆ ಮೂರು ದಿನಗಳಲ್ಲಿ ಬಾಳು ಬೇಸರವಾದೀತು ಎಂದುಕೊಂಡ. ತಿಂಡಿಯನ್ನು ಮುಗಿಸಿ ಓದಿಗೆ ತೊಡಗಿದ. ಪುಸ್ತಕದ ಪುಟಗಳ ಮಧ್ಯದಿಂದ ನಡುನಡುವೆ ಸರೋಜಿನಿಯ ಮೂರ್ತಿ ಇಣಿಕಿ ನೋಡುತ್ತಿತ್ತು. "ಈಗ ಬೇಡ, ಆದಿತ್ಯವಾರ ಸಾಯಂಕಾಲವಿದ್ದೇ ಇದೆಯಲ್ಲ!" ಎಂದು ಆ ಮೂರ್ತಿಗೆ ಸಮಾಧಾನ ಹೇಳಿ ಕಳುಹಿಸುತ್ತಿದ್ದ ಮಾಧವ! ರಾತ್ರಿ ಊಟಕ್ಕೆ ಕುಳಿತಾಗಲೂ ರಾಮರಾಯರು ಒಳ್ಳೆ ಅಸ್ಥೆಯಿಂದ ಕೇಳುತ್ತಿದ್ದರು.

"ಓದನ್ನಂತೂ ನಡೆಯಿಸಿದ್ದೀಯ. ಒಟ್ಟಿನಲ್ಲಿ ಹೇಗೆ, ಮಾಧವಾ?" ಎಂದರು

"ಹೇಗೇನು? ಚೆನ್ನಾಗಿಯೇ ನಡೆಸಿದ್ದೇನೆ. ಹೀಗೆಯೇ ಓದಿದರೆ ಆನರ್ಸೂ ಆಗಬಹುದು"

"ಅಂದರೆ ಆನರ್ಸ್ ಬಿಡಬೇಕೆನ್ನುತ್ತಿದ್ದೆಯೇನು?"

"ಬಿಡಬೇಕೆಂದೇನೂ ಅಲ್ಲ. ಮೊದಲು ಪಾಸಿನ ಸಿದ್ಧತೆಯನ್ನು ಮುಗಿಸಿ ಆಮೇಲೆ...."

"ನೋಡು, ಏನಾದರೂ ಆನರ್ಸ್ ಬಿಡಬೇಡ. ಫಾರ್ಮನ್ನಂತೂ ಆನರ್ಸ್ ಅಂತೇ ತುಂಬಿದ್ದೀಯಲ್ಲವೇನು?"

"ಹುಂ....ಆನರ್ಸ್ ಓದುತ್ತಲೂ ಇದ್ದೇನೆ. ನೋಡಬೇಕು" ಎಂದು ಸುಮ್ಮನಾದ. ರಾಯರೂ ಸುಮ್ಮನಾದರು. ಮನಸ್ಸುಮಾಡಿದರೆ ಬೇಕಾದುದನ್ನು

ಮಾಡುವಂತಿದ್ದಾನೆ ಎಂದುಕೊಂಡರು. ಆದರೆ ತುಸು ಹಟಮಾರಿ ಸ್ವಭಾವ. ಹಟ ಹಿಡಿದರೆ ಬ್ರಹ್ಮನಿಗೂ ಬಿಡುವವನಲ್ಲ. ರಾಯರು ಮತ್ತೆ ಮಾತಿಗೆ ಆರಂಭಿಸಿದರು.

"ಅದು ಹೋಗಲಿ. ಪರೀಕ್ಷೆ ಆದೀತು. ಮುಂದೇನು ಮಾಡಬೇಕೆಂದಿದ್ದೀ ?"

ಮಾಧವನಿಗೆ ಪ್ರಶ್ನೆ ಅನಿರೀಕ್ಷಿತವಾಗಿತ್ತು. ತನ್ನ ಮಟ್ಟಿಗಾದರೆ ಎಲ್ಲಿಯಾದರೂ ಕೆಲಸ ಹಿಡಿಯತಕ್ಕದ್ದೆಂಬ ನಿರ್ಧಾರವನ್ನು ಕಕ್ಕನೆದುರು ಹೇಳುವಂತಿರಲಿಲ್ಲ. ಕೆಲಸ ಹಿಡಿಯುವ ಯೋಚನೆ ಅವರಿಗೆ ಸರಿಬೀಳುವಂತಿರಲಿಲ್ಲ ಎಂಬುದನ್ನು ಮಾಧವ ಎಂದೋ ತಿಳಿದಿದ್ದ. ಆದ್ದರಿಂದ ಏನನ್ನು ಹೇಳದೇ ಇರುವುದು ಒಳ್ಳೆಯದೆಂದು,

"ನಾನೇನು ಅನ್ನುವುದು ? ನೀವೆಲ್ಲರೂ ಹೇಳಿದಹಾಗೆ" ಎಂದು ಸ್ತುತಿಪರವಾಗಿ ಹೇಳಿದ. ರಾಯರಿಗೆ ಮಾತು ಸೇರಿಕೆಯಾಯಿತು. ಆದರೇ ಅದೇ ಮಾತು ನಡೆದೀತೆಂದು ಭರವಸೆಯಿರಲಿಲ್ಲ.

"ಭೀಮಣ್ಣನವರು ಏನೂ ಹೇಳಲಿಲ್ಲವೇನು ?"

"ಅವರೇನೂ ಹೇಳಲಿಲ್ಲ. ಪರೀಕ್ಷೆ ಮುಗಿದಕೂಡಲೆ ಆ ಕಡೆಗೆ ಬಂದು ಬಿಡುವಂತೆ ಹೇಳಿದರು. ಆಮೇಲೆ ನೋಡೋಣ ಮುಂದೇನು ಮಾಡುವುದು ಅಂದರು."

"ನನ್ನ ಮಾತು ಕೇಳುವುದಾದರೆ ಕೆಲಸ ಗಿಲಸ ಹಿಡಿಯುವ ವಿಚಾರ ಇದ್ದರೆ ಬೇಡ. ಸುಮ್ಮನೆ ಲಾ ಪರೀಕ್ಷೆಗೆ ಓದು. ನನಗೂ ಇತ್ತೀಚೆಗೆ ಕೆಲಸ ಹೆಚ್ಚೆನಿಸುತ್ತಾ ಇದೆ—" ಎಂದು ತಮ್ಮ ಸೂಚನೆಯನ್ನು ಮುಂದಿಸಿದರು. ಮಾಧವನಿಗೆ ಲಾ ಓದುವುದು ಬೇಡವಾಗಿರಲಿಲ್ಲ. ವಕೀಲಿಯ ವ್ಯವಸಾಯದ ಬಗ್ಗೆ ಸಾಕಷ್ಟು ಮೋಹವೂ ಇತ್ತು. ಇದ್ದರೆ ಮತ್ತೆ ಎರಡು ವರುಷ ಓದಬೇಕಲ್ಲದೆ ಕಕ್ಕನ ಆಶ್ರಯವನ್ನು ಪಡೆಯಬೇಕು. ಮುಖ್ಯ ಅದು ಬೇಡವಾಗಿತ್ತು. ಮಾಧವ ಸುಮ್ಮನಾದುದನ್ನು ನೋಡಿ ರಾಯರೆಂದರು :

"ಯಾಕೆ ? ಮನಸ್ಸಿಲ್ಲವೆ ವಕೀಲನಾಗುವುದಕ್ಕೆ ?"

"ಮನಸ್ಸೇನು? ಇದ್ದರೂ ಮತ್ತೆ ಎರಡು ವರ್ಷ ಕಾಲೇಜು ವೆಚ್ಚಕ್ಕೊಂದು ಹಾದಿ...."

"ಅದರ ಚಿಂತೆ ನಿನಗೇತಕ್ಕೆ ?"

"ಅಲ್ಲದೆ ಪರೀಕ್ಷೆ ಪಾಸು ಮಾಡಿದರೂ ವಕೀಲಿ ನಡೆಯುವುದೂ ಈಗಿನ ದಿನಮಾನದಲ್ಲಿ ಕಷ್ಟ...."

"ಕಷ್ಟವೇನು ? ಕಷ್ಟವೆಂದವರಿಗೆ ಕೊನೆಯುವರೆಗೂ ಅದೇ. ಮುಂದೆಬಿದ್ದು ದುಡಿಯುಬೇಕು ಎನ್ನುವವರಿಗೆ ಎಲ್ಲಿಯೂ ಬಾಗಿಲು ತೆರೆದಿದ್ದೇ ಇರುತ್ತದೆ.... ನನ್ನ ಮನಸ್ಸಂತೂ ಹೀಗೆ. ನೀನೂ ವಿಚಾರ ಮಾಡು. ಬೇಕಾದರೆ ಭೀಮಣ್ಣ ನವರಿಗೂ ಕಾಗದ ಬರೆ...." ಎಂದರು.

"ಅಂಥದೇನವಸರ ? ಇನ್ನೂ ಪರೀಕ್ಷೆಯಾಗಿ—ಪರಿಣಾಮ ಹೊರಬಿದ್ದ ನಂತರದ ಪ್ರಶ್ನೆ. ಅಷ್ಟರಲ್ಲಿ ಭೀಮಣ್ಣನ ಊರಿಗೂ ಹೋಗುವವನೆ ಇದ್ದೇನೆ" ಎಂದು ಮಾಧವ ಮಾತು ಮುಗಿಸಿದ. ಸೀತಮ್ಮನವರು ಬೇರೆಯೊಂದು ವಿಷಯವನ್ನೆತ್ತಿದರು.

"ಊರಿಗೆ ಹೋದನಂತರ ಭೀಮಣ್ಣನವರಿಂದ ಕಾಗದ ಬರಲೇ ಇಲ್ಲ—" ಎಂದರು.

"ಹೌದು. ಕೂಡಲೆ ಕಾಗದ ಬರೆಯಿರಿ ಎಂದು ಹೇಳಿದ್ದೆ. ಆ ಭೀಮನ ಕೊಪ್ಪದ ಕರಿಶಿದ್ದಪ್ಪನ ಕಡೆಯಿಂದ ದುಡ್ಡು ಬರಲಿಲ್ಲ; ಏನೂ ತಿಳಿಯಲಿಲ್ಲ. ಅದನ್ನು ತಿಳಿದುಕೊಂಡೇ ಬರೆಯುಲು ಹೇಳಿದ್ದೆ" ಎಂದರು ರಾಯರು.

"ಆತನಂತೂ ಒಳ್ಳೆಕುಳ ಗಂಟುಬಿದ್ದಿದ್ದಾನೆ. ಹೋದವರ್ಷವೂ ರೂಪಾಯಿ ಪೂರ್ತಿ ಕೊಡಲಿಲ್ಲ, ಅಲ್ಲವೆ ?" ಎಂದು ಸೀತಮ್ಮನವರು.

ಅರ್ಧನಿಮಿಷ ಯೋಚಿಸಿ ರಾಯರೆಂದರು :

"ಹುಂ....ಹೋದ ಸಲದ ನೂರು, ಈ ಸಲದ ಇನ್ನೂರೈವತ್ತು. ಅಂತೆಯೇ ಒತ್ತಾಯ ಮಾಡಲು ಭೀಮಣ್ಣನವರಿಗೆ ಹೇಳಿದ್ದೆ. ನಾನೇ ಹೋಗಿ ಬರ ಬೇಕೇನೊ ಎಂದುಕೊಂಡಿದ್ದೆ. ಅಷ್ಟರಲ್ಲಿ ಅಕಸ್ಮಾತ್ತಾಗಿ ಭೀಮಣ್ಣನವರೂ ಬಂದರು. ನೋಡಬೇಕು, ಮುಂದಿನ ತಿಂಗಳು ನಾನೇ ಹೋಗಿ ಬಂದರೂ ಬಂದೆ...."

"ಕೋರ್ಟಿಗೆ ರಜೆ ಇನ್ನೂ ದೂರ ಅಲ್ಲವೆ?" ಎಂದು ಮಾಧವ ನಡುವೆಯೇ ಮಾತು ಸೇರಿಸಿದ.

"ಹುಂ....ಅಂತೆಯೇ ಮುಂದಿನ ತಿಂಗಳೇ ಹೋಗಬೇಕಾದೀತು. ಅಷ್ಟರಲ್ಲಿ ಭೀಮಣ್ಣನವರು ವಸೂಲು ಮಾಡಿದರೂ ಮಾಡಬಹುದು."

"ಪರೀಕ್ಷೆ ಮುಗಿದನಂತರ ಹೇಗಾದರೂ ನಾನು ಹೋಗುವವನೇ ಇದ್ದೇನೆ!"

"ಆಯಿತು, ನೀನು ಹೋದರೆ ಕೇಳುವನೆ ಕರಿಶಿದ್ದಪ್ಪ? ಹೋದ ಸಾರಿ ಇವರೇ ಸ್ವತಃ ಹೋದರೂ ನೂರೈವತ್ತು ಕೈಗೆ ಹಚ್ಚಿ ಕಳಿಸಿದ. ನೀನು ಹೋದರಂತೂ ಯಾವ 'ದಾದೂ' ಆಗಲಿಕ್ಕಿತ...." ಎಂದು ನಡುವೆಯೇ

ಸೀತಮ್ಮನವರು ಬಾಯಿಬಾಕಿ, ಮಾಧವ ಹೋದರೆ ಏನೂ ಆಗದೆಂಬುವುದಕ್ಕಿಂತ ಮಾಧವ ಹೋಗದೆ ಇದ್ದರೆ ಒಳ್ಳೆಯದೆಂಬ ಅಭಿಪ್ರಾಯ ವ್ಯಕ್ತವಾಗುವಂತೆ ಹೇಳಿದರು. ಈ ವಿಚಾರ ಮಾಧವನಿಗೆ ತಿಳಿದಿದ್ದರೂ ಸುಮ್ಮನಾಗಿಬಿಟ್ಟ. ಆದರೆ ಊಟಕ್ಕೆ ಕುಳಿತಾಗಿನ ಈ ಮಾತುಗಳೆಲ್ಲವೂ ಕೆಲವು ಕಾಲ ಯೋಚನೆಗೆ ಅನ್ನವನ್ನು ಒಪಗಿಸಿಕೊಟ್ಟವು.

ವಕೀಲಿಯ ವ್ಯವಸಾಯ ತನಗೆ ಮೆಚ್ಚಿಗೆಯಾದರೂ ತನ್ನ ಇಂದಿನ ಪರಿಸ್ಥಿತಿಯಲ್ಲಿ ಅದು ಹೇಗೆ ಸಾಧ್ಯ ಎಂಬ ಯೋಚನೆಗೀಡಾದ ಮಾಧವ. ಸ್ವತಂತ್ರವಾದ ವ್ಯವಸಾಯ, ಬುದ್ಧಿಮತ್ತೆಗೆ ಬೇಕಾದಷ್ಟು ಆಸ್ಪದ, ಅಲ್ಲದೆ ಸಮಾಜದಲ್ಲಿ ಸಹಜಸ್ವತಂತ್ರವಾದ ಪ್ರತಿಷ್ಠೆ ಇವುಗಳೆಲ್ಲವುಗಳನ್ನು ಒದಗಿಸಬಲ್ಲ ಆ ವೃತ್ತಿ ಎಂದಿನಿಂದಲೂ ಆತನ ಮನಸ್ಸನ್ನು ಸೆಳೆದಿತ್ತು. ಆದರೆ ಇಂದಿಗೆ ಅತ್ತಕಡೆಗೆ ಮನಸ್ಸು ಮಾಡುವುದು ಸಾಧ್ಯವಾಗಿ ಕಾಣಲಿಲ್ಲ. ಮಾಡಿದ್ದೇ ಆದರೆ ಇನ್ನೆರಡು ವರ್ಷವೇಕೆ—ಬಹುಶಃ ಕೊನೆಯವರೆಗೂ—ಕಕ್ಕನ ಆಶ್ರಯದಲ್ಲಿಯೇ ದಿವಸಗಳನ್ನು ದೂಡುವ ಪ್ರಸಂಗ ಬರಬಹುದು—ಬಂದೇ ಬರುವುದೆಂದು ಆ ವಿಚಾರವನ್ನು ತಳ್ಳಿಬಿಟ್ಟಿದ್ದ. ಅಲ್ಲದೆ ಎಂದಿಗೂ ವಿಶೇಷ ಸಲಿಗೆಯಿಂದ ಮಾತನಾಡದೆ ಇದ್ದ ಕಕ್ಕ ಇಂದಿಗೇ ಯಾಕೆ ಈ ವಿಷಯವನ್ನು ಪ್ರಸ್ತಾಪಿಸಿರಬಹುದು? ಪರೀಕ್ಷೆ ಸಮಾಪಿಸಿತೆಂದಮೇಲೆ ಈ ಸೂಚನೆಯ ಮೂಲಕ ತಾನು ಕೊನೆಯವರೆಗೂ ದೂರ ಹೋಗದಿರಲೆಂಬುದಕ್ಕೆ ಇದೊಂದು ಧೂರ್ತ ದೂರದೃಷ್ಟಿಯಿರಬಹುದೆ? ಎಂದು ಕೇಳಿಕೊಂಡ. ಏನಿದ್ದರೂ ಇರಲಿ. ಅವರ ಸೂಚನೆಯನ್ನು ಒಪ್ಪುವಂತಾದರೆ ಎರಡು ಮಾತುಗಳಿಗೆ ತಲೆ ಕೊಡಬೇಕು. ಕೊನೆಯವರೆಗೂ ತಾನು ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು ಕಕ್ಕನ ಆಶ್ರಿತನಾಗಿರಬೇಕು. ತನ್ನ ತಾಯಿ ಸೀತಮ್ಮನವರಿಗೆ ಮನೆಯಾಳಾಗಬೇಕು. ಇವೆರಡಕ್ಕೂ ಮಾಧವ ಒಪ್ಪುವುದು ಸಾಧ್ಯವಿರಲಿಲ್ಲ.

## 6

ಆದಿತ್ಯವಾರ ಸಾಯಂಕಾಲವನ್ನೇ ಇದಿರುನೋಡುತ್ತಿದ್ದ ಮಾಧವ ಓದಿನಲ್ಲಿ ತೊಡಗಿದ್ದರೂ ನಡುನಡುವೆ, ಸರೋಜಿನಿ ಭೆಟ್ಟಿಯಾದಾಗ ಆಕೆಯೊಡನೆ ಏನು ಮಾತನಾಡುವುದು ಎಂದು ಯೋಚಿಸುತ್ತಲೂ ಇದ್ದ. ಮನಸ್ಸನ್ನು ಹತ್ತು ಬಗೆಯಲ್ಲಿ ಹರಿಯಿಸಿದ್ದ. ತನ್ನ ಮತ್ತು ಸರೋಜಿನಿಯ ಸಂಬಂಧ ತಮ್ಮಿಬ್ಬರಿಗೂ ತಿಳಿಯದಲೆ ಒಂದು ವಿಶೇಷವಾದ ರೀತಿಯಲ್ಲಿ ಬೆಳೆಯುತ್ತಿ

  

ತ್ತೆಂಬುದರಲ್ಲಿ ಮಾಧವನಿಗೆ ಸಂದೇಹವೇ ಉಳಿದಿರಲಿಲ್ಲ. ತನ್ನನ್ನು ಕಾಣ ಬೇಕೆಂಬ ಆಕೆಯ ಬಯಕೆ ಅವಳನ್ನು ಕಾಣಬೇಕೆಂಬ ತನ್ನ ಬಯಕೆಯಷ್ಟೇ ಸ್ಪಷ್ಟವಾಗಿದ್ದಿತು. ಆಕೆಯನ್ನು ಕುರಿತು ಯೋಚಿಸಿದಾಗಲೆಲ್ಲ ತನ್ನ ವಿಚಾರ ಗಳು ಹೆಚ್ಚುಹೆಚ್ಚಾಗಿ ಭಾವನಾಮಯವಾಗುತ್ತಿರಬಹುದೆಂಬ ಸಂಶಯವೂ ಆತನಿಗಿತ್ತು. ಇದು ತಿಳಿಯಾಗಿ ಯೋಚಿಸುತ್ತಿದ್ದಾಗ. ಆದರೆ ವಿಚಾರ ನಡೆದಾಗ ಮಾತ್ರ ಇನ್ನಾವ ಆತಂಕವೂ ಇಲ್ಲದೆ ಮನಸ್ಸು ಆಕೆಯನ್ನೇ ಹಿಂಬಾಲಿಸು ತ್ತಿತ್ತು. ಆಕೆಯ ಸಾನ್ನಿಧ್ಯವನ್ನೇ ಬಯಸುತ್ತಿತ್ತು. ತನ್ನ ನೆನಹು ಓದಿಗೆ ಅಡ್ಡಿಯಾಗಲಾರದೆಂದು ಸರೋಜಿನಿ ಹೇಳಿದ್ದಳೇನೋ ನಿಜ. ಆದರೆ ಅಡ್ಡಿ ಯಾಗುವುದು, ಬಿಡುವುದು ಇವರಿಬ್ಬರ ಕೈಯಲ್ಲಿಯೂ ಉಳಿದಿರಲಿಲ್ಲ! ಸೆಳವಿ ನಲ್ಲಿ ಸಿಕ್ಕ ಹುಲ್ಲುಕಡ್ಡಿಯಂತೆ ಪ್ರವಾಹಕ್ಕೆ ಸರಿಯಾಗಿ ಮುಂದೋಡುವುದೊಂದೆ ಅನಿವಾರ್ಯ ಮಾರ್ಗ—ಯಾವ ವಿಚಾರಕ್ಕೂ ವಿವೇಕಕ್ಕೂ ಅಲ್ಲಿ ಅವಕಾಶವೇ ಇಲ್ಲ—ಎನ್ನುವ ಪರಿಸ್ಥಿತಿ ಮಾಧವನಂತೆ ಸರೋಜಿನಿಗೂ ಬಂದಂತಿತ್ತು. ಆದ್ದರಿಂದಲೇ ಮಾಧವನ ಬಗೆಯಲ್ಲಿ ತನಗೇಕೆ ಇಷ್ಟು ಆದರ ಎನಿಸಬೇಕು? ಎಂಬ ಪ್ರಶ್ನೆಯನ್ನು ಆಕೆ ಕೇಳಿಕೊಂಡಾಗಲೆಲ್ಲ ಆಕೆಗೆ ವಿಚಿತ್ರವೆನಿಸಿ ಮನಸ್ಸು ಮತ್ತಷ್ಟು ಮಾಧವನಲ್ಲಿಯೇ ಸಿಲುಕಿ ಬೀಳುತ್ತಿತ್ತೇ ಹೊರತು, ಪ್ರಶ್ನೆಗೆ ಉತ್ತರವನ್ನು ಹೇಳುತ್ತಿರಲಿಲ್ಲ. ಆದ್ದರಿಂದ ಆದಿತ್ಯವಾರ ಸಾಯಂಕಾಲ ಇಬ್ಬರೂ ಭೆಟ್ಟಿಯಾದಾಗ ಇಬ್ಬರ ಮನಃಸ್ಥಿತಿಯೂ ವಿಚಿತ್ರವಾಗಿತ್ತು. ಆದರೆ ಒಬ್ಬ ರೊಬ್ಬರನ್ನು ಕಾಣಲು ಇಬ್ಬರೂ ಆತುರರಾಗಿದ್ದರು.

ಸರೋಜಿನಿ ಸರಿಯಾಗಿ ಆರು ಗಂಟೆಗೆ ಕಾಲೇಜಿನ ಹಿಂದಿನ ಗೇಟಿನ ಕಡೆಗೆ ಬರುತ್ತಿದ್ದಳು. ಮಾಧವ ಆಗಲೇ ಬಂದು ಅತ್ತಿತ್ತ ಬೈಸಿಕಲ್ ಮೇಲೆ ಸುತ್ತು ಹಾಕುತ್ತಿದ್ದ. ಸರೋಜಿನಿ ಸರಿಯಾಗಿ—ಒಂದು ನಿಮಿಷವೂ ಹೆಚ್ಚುಕಡಿಮೆ ಮಾಡದೆ—ಬಂದುದನ್ನು ನೋಡಿ ಮಾಧವನೆಂದ :

"ಇದೇನು? ಕಾಲಿಗೆ ಗಡಿಯಾರ ಕಟ್ಟಿದವರ ಹಾಗೆ ಬಂದುಬಿಟ್ಟಿರಲ್ಲ!"

"ಅಂದರೆ?" ಎಂದು ಸರೋಜಿನಿ ದಿಗಿಲಿನಲ್ಲಿ ಬಿದ್ದು ಕೇಳಿದಳು.

"ಗಂಟೆ ಹೊಡೆದ ಹಾಗೆ ಬಂದುಬಿಟ್ಟಿದ್ದೀರಿ ಎಂದೆ."

"ಓ! ಹಾಗೆ ತಪ್ಪದೆ ಬರಬೇಕಾದರೆ ಗಡಿಯಾರ ಕಾಲಿಗೆ ಕಟ್ಟಬೇಕೆ?"

"ಹುಂ....ಅಂದರೆ ನೋಡಿಕೊಂಡು ಹೊರಡಲು ಅನುಕೂಲ—ಕಾಲಿಗೆ!"

"ಅದೆಲ್ಲ ಸುಳ್ಳು. ತಲೆ ಸ್ಥಳದ ಮೇಲಿದ್ದರೆ ಗಡಿಯಾರ ಎಲ್ಲಿದ್ದರೂ ನಡೆ ದೀತು!"

"ಇಬ್ಬರೂ ಸರಿಯಾಗಿ ಬಂದಿದ್ದೇವೆಂದಮೇಲೆ ಇಬ್ಬರ ತಲೆಗಳೂ ತಮ್ಮ ತಮ್ಮ ಸ್ಥಳದಲ್ಲಿ ಇವೆ ಎಂದಹಾಗಾಯಿತು...." ಎಂದು ಮಾಧವ ನಗೆಯಾಡಿದ.

ನಾಲ್ಕು ಹೆಜ್ಜೆ ಮುಂದೆ ಇಡುವಷ್ಟರಲ್ಲಿಯೆ ಸರೋಜಿನಿ ಕೇಳಿದಳು :

"ಎಲ್ಲಿಗೆ ನಾವು ಹೋಗುವುದು?"

"ನನಗೇನು ಗೊತ್ತು? ಇಲ್ಲಿಗೆ ಬರಹೇಳಿದಿರಿ, ಬಂದಿದ್ದೇನೆ" ಎಂದು ನಕ್ಕುಬಿಟ್ಟ. ಶಬ್ದದ ಅರ್ಥ ಆಡಿದ ಮಾತಿಗೆ ಇರಲಿಲ್ಲವೆಂದೇ ಆ ನಗೆ.

"ಹುಂ....ಹುಂ....ಸಾಕು ಈ ಮಾತು ಇನ್ನು. ಇಲ್ಲಿಗೆ ಬರಹೇಳಿದವಳು ನಾನೇ?" ಎಂದು ಸರೋಜಿನಿ.

"ಹೌದು ಮತ್ತೆ...."

"ಅಲ್ಲ...."

"ಹಾಗಾದರೆ ಯಾರೂ ಹೇಳದೆ ಇಲ್ಲಿಗೆ ಬಂದಿದ್ದೇವೆಯೆ?"

"ಒಂದು ದೃಷ್ಟಿಯಿಂದ ಹೌದು. ಆದರೂ ಬರಹೇಳಿದವರು ನೀವು...."

"ಬರಹೇಳಿದವ ನಾನಿರಬಹುದು. ಆದರೆ ಇಲ್ಲಿಗೆ ಬರಹೇಳಿದವರು ನೀವು...." ಎಂದು ಮಾಧವ ಇಬ್ಬರ ಮೇಲೆಯೂ ಹೊಣೆಯನ್ನು ಹಂಚಿಹಾಕಿ ಮಾತು ಮುಗಿಸಿದ. ಸರೋಜಿನಿ ಎಂದಳು :

"ಬರಹೇಳಿದವರು ಯಾರೂ ಇರಲಿ. ಬಂದುದೂ ಆಗಿದೆ. ಅಂತೆಯೇ ಕೇಳಿದೆ, ಈಗ ನಾವು ಹೋಗುವುದು ಎಲ್ಲಿಗೆ ಎಂದು...." ಎಂದು ಒಂದೊಂದು ಮಾತನ್ನೂ ಬಿಡಿಸಿಬಿಡಿಸಿ ಕೇಳಿದಳು.

"ಎಲ್ಲಿಗೇನು? ಹೀಗೆಯೇ ಮುಂದಕ್ಕೆ...." ಎಂದು ಮಾಧವ ಕೈತೋರಿದ.

"ಹೀಗೇನು? ಗೊತ್ತುಗುರಿಯಿಲ್ಲದೆ ಹೋಗುವುದು?"

"ಗೊತ್ತುಗುರಿ ಇಲ್ಲವೇ ಇಲ್ಲ! ಆದರೂ ಈ ಕಡೆ ಜನರ ತಿರುಗಾಟ ಕಡಿಮೆ. ಅದಕ್ಕಂದೆ."

"ಜನರಿದ್ದರೆ ನಿಮಗೇನು ಮಾಡುತ್ತಾರೆ?" ಎಂದು ಸರೋಜಿನಿ ಕೇಳಿದ್ದು ಚೇಷ್ಟೆಗಾಗಿಯಲ್ಲದೆ ನಿಜವಾದ ಅಭಿಪ್ರಾಯ ಆಕೆಯದು ಹಾಗಿರಲಿಲ್ಲವೆಂಬುದನ್ನು ಆಕೆಯ ನಗುವಿನ ರೀತಿಯಿಂದಲೇ ಗುರುತಿಸಬಹುದಿತ್ತು.

"ಜನರಿದ್ದರೆ ಏನು ಮಾಡುತ್ತಾರೆಯೆ? ಮಹತ್ವದ ಗುಪಿತವನ್ನು ತಿಳಿದುಕೊಂಡುಬಿಡುತ್ತಾರೆ!"

"ಏನದು ಮಹತ್ವದ ಗುಪಿತ?"

"ನನಗೇನು ಗೊತ್ತು? ನೀವು ಹೇಳುವವರಿದ್ದೀರಿ. ಅದನ್ನು ಕೇಳಲೆಂದೇ

ನಾನಿಲ್ಲಿಗೆ ಬಂದದ್ದು !"

"ಏನದು ? ನನಗೆ ಯಾವುದೂ ತಿಳಿಯಲಿಲ್ಲವಲ್ಲ ?" ಎಂದು ಸರೋಜಿನಿ ಕಣ್ಣು ಮಿಟುಕಿಸಿ ಅಜ್ಞಾನವನ್ನು ನಟಿಸಹೋದಳು. ಆದರೆ ಆಕೆಯ ಯತ್ನ ಯಶಸ್ವಿಯಾಗಲಿಲ್ಲ.

"ಹೇಳುವುದೊಂದು, ಮಾಡುವುದಿನ್ನೊಂಡು. ಆದರೆ...."

"ಏನು ಹೇಳಿದ್ದೆ ?"

"ಹೇಳಬೇಡಿ. ಈಗಲಾದರೂ ಆಯಿತೆ ?" ಎಂದು ಮಾಧವ ಸೋಗಿನ ಸೆಡವಿನಿಂದ ನಾಲ್ಕು ಹೆಜ್ಜೆ ದೂರ ಸರಿದ. ಮಾಧವನ ಸೆಡವು ಸೋಗಿನದೆಂಬು ದನ್ನು ಬಲ್ಲ ಸರೋಜಿನಿ ಆತನ ತಾಳ್ಮೆಯಾದರೂ ಎಷ್ಟರದೆಂದು ನೋಡುವವ ಳಂತೆ ಹಾಗೆಯೇ ಸುಮ್ಮನಾಗಿ ಹೆಜ್ಜೆ ಹಾಕುತ್ತಿದ್ದಳು.

ಸಂಜೆಗೆಂಪು ಸೊಗಸಾಗಿತ್ತು. ಹಚ್ಚಗಾಗಿ ಬೆಳೆದು ನಿಂತು ಚಿಗುರೊಡೆಯು ತ್ತಿದ್ದ ಗಿಡಗಳ ತುದಿಗಳನ್ನು ಅದು ಅವರ್ಣನೀಯವಾದ ಶೋಭೆಯನ್ನುಂಟು ಮಾಡಿತ್ತು. ಇಬ್ಬರೂ ಮಾತನಾಡದೆ ಮುಂದಕ್ಕೆ ಸಾಗಿದ್ದರು. ಇಕ್ಕೆಲ ದಲ್ಲಿಯೂ ಎತ್ತರವಾದ ಗಿಡಗಳು ನಿಂತಿದ್ದ ದಾರಿ ಸಲೀಲವಾಗಿ ಎಡಗಡೆ ಇಳಿ ಜಾರಾಗಿ ಹೊರಳಿಕೊಂಡು ಹೋಗಿತ್ತು. ಗಿಡಗಳ ತುದಿಗಳ ಮೇಲೆ ಬಿಸಿಲು ಬೆಳಗುತ್ತಿತ್ತಾದರೂ ದಾರಿಯೆಲ್ಲವೂ ನಿಶಾಂತವಾಗಿ ಪ್ರಶಾಂತವಾಗಿ ಕಾಣು ತ್ತಿತ್ತು. 'ಪಾದ ಭೂಮಿಯ ಮೇಲಾದರೂ ಮಸ್ತಕ ಗಗನದಲ್ಲಿ, ಹೃದಯ ವಿಸ್ತಾರವಾದ ಆಕಾಶವಲ್ಲಿ' ಎಂದು ಹೇಳುತ್ತಿರುವಂತೆ ಗಿಡಗಳು ಗಾಳಿಗುಂಟ ತೂಗುತ್ತಿದ್ದವು. ಆ ಸೊಬಗನ್ನು ನೋಡಿ ಸರೋಜಿನಿಗೆ ತಡೆಯುವುದಾಗ ಲಿಲ್ಲ. ಮಾತನಾಡಬಾರದೆಂದುಕೊಂಡಿದ್ದರೂ,

"ಸಂಜೆ ಸೊಗಸಾಗಿದೆಯಲ್ಲವೆ ?" ಎಂದುಬಿಟ್ಟಳು. ಮಾಧವನಿಗೆ ನಗು ತಡೆಯಲಾಗಲಿಲ್ಲ.

"ಮಾತನಾಡಬಾರದೆಂದಿದ್ದಿರಲ್ಲವೆ ?"

"ಹಾಗೆಂದುಕೊಂಡವರು ನಾನಲ್ಲ, ನೀವು !"

ಆಕೆಯ ಮಾತೇ ನಿಜವಾಗಿತ್ತು. ಮಾತನಾಡಬಾರದೆಂದು ಮೊದಲು ಅಂದುಕೊಂಡವ ತಾನಾಗಿದ್ದರೂ ಇತ್ತೀಚಿನ ಹತ್ತು ಹೆಜ್ಜೆ ನಡೆಯುತ್ತಿದ್ದಾಗ ತಾನೇ ಸೋಲಲು ಸಿದ್ಧನಾಗಿದ್ದ. ಅಷ್ಟರಲ್ಲಿಯೇ ಸುತ್ತಲಿನ ಸೊಬಗು ಸರೋಜಿನಿಯ ಬಾಯಿ ತೆರೆಯಿಸಿತ್ತು.

"ಆಡಬಾರದು ಎಂದು ನಾನಂದುಕೊಂಡಿದ್ದೆ. ಆದರೆ ನೀವೆಲ್ಲಿ ಕೇಳುತ್ತೀರಿ?"

"ಈಗ ನಾನೇನು ಮಾಡಿದೆ ?"

"ಏನೂ ಮಾಡಲಿಲ್ಲ. ಅಂತೆಯೇ ಮಾತನಾಡಬೇಕಾಯಿತು."

"ಹೌದು. ಹೇಳಬೇಕಾದುದನ್ನು ನೀವು ಹೇಳುವುದಿಲ್ಲವಾದರೆ ನಾನು ಸುಮ್ಮನಾದರೂ ಇರಬೇಕು, ಇಲ್ಲವಾದರೆ ಮನೆಯ ಹಾದಿಯನ್ನಾದರೂ ಹಿಡಿಯಬೇಕು...."

"ಮನೆಯ ಹಾದಿಯಂತೂ ಇದ್ದೇ ಇದೆಯಲ್ಲ...."

"ಹಾಗಾದರೆ ಹೊರಟುಬಿಡಲೆ ?"

ಸರೋಜಿನಿ ಮಾಧವನನ್ನು ಸೂಕ್ಷ್ಮವಾಗಿ ನೋಡಿದಳು—'ಹೀಗೆ ಹೊರಡ ಬಹುದೆ ?' ಎಂದು ಕೇಳುವವಳಂತೆ. ಆತ ಹೊರಟುಹೋಗುವುದು ಸಾಧ್ಯ ವಿರಲಿಲ್ಲವೆಂಬುದು ಸ್ಪಷ್ಟವಾಗಿ ಆತನ ರೀತಿನೀತಿಗಳಲ್ಲಿ ಒಡಮೂಡುತ್ತಿತ್ತು. ಅಂತೆಯೇ ಸರೋಜಿನಿ,

"ಹುಂ....ಆಗಬಹುದು !" ಎಂದುಬಿಟ್ಟಳು.

"ಈಗಾಗಲೇ ದೂರ ಬಂದುಬಿಟ್ಟಿದ್ದೇವೆ. ನೀವೇನು ಮಾಡುತ್ತೀರಿ ?" ಎಂದ ಮಾಧವ.

"ಮಾಡುವುದೇನು, ನಡುದಾರಿಯಲ್ಲಿ ಕೈ ಬಿಟ್ಟು ಹೊರಡುವವರಿಗೆ ?"

"ಕೈ ಬಿಡಲಿಕ್ಕೆ ನಾನು ಹಿಡಿದೇ ಇಲ್ಲ !" ಎಂದು ನಕ್ಕು ಮತ್ತೆ ಕೇಳಿದ "ಎಂದಾದರೂ ನಾನು ನಿಮ್ಮ ಕೈ ಹಿಡಿದಿದ್ದೇನೇಯೆ ?" ಎಂದು.

"ಹಿಡಿದಿಲ್ಲವೇ ? ಚೆನ್ನಾಗಿ ಜ್ಞಾಪಿಸಿಕೊಳ್ಳಿ ..."

"ಇಲ್ಲವಲ್ಲ"

"ಹುಂ....?" ಎಂದು ಕತ್ತು ಕೊಂಕಿಸಿ "ನೃತ್ಯ ಮುಗಿದ ಕೂಡಲೆ ಅಭಿನಂದಿಸಿ ಕೈಕುಲುಕಿದವರು ತಾವೆಯೇನು ?" ಎಂದಳು.

"ಓಹೋ!....ಅದೇ ಹೌದು. ನನಗೆ ಜ್ಞಾಪಕವೇ ಇರಲಿಲ್ಲ."

"ಸಹಜವಾಗಿದೆ. ಇರದೆ ಇರುವುದೇ ಸ್ವಾಭಾವಿಕ....ನೀವು ಹಾಗೆ ಕೈ ಕುಲುಕಿದ್ದು ನನಗೆ ಕೂಡ ಎಷ್ಟೋ ವೇಳೆಯಾದನಂತರ ಗಮನಕ್ಕೆ ಬಂದಿತು ....ನಾನಿನ್ನೂ ಆ ನೃತ್ಯದ ಗುಂಗಿನಲ್ಲಿಯೇ ಇದ್ದೆ...."

"ನನಗೆ ಕೂಡ ನಿಮ್ಮ ಕೈ ಕುಲುಕಿದ್ದನ್ನು ನೆನೆದಾಗ ಹಿಂದುಗಡೆಯಿಂದ ವಿಚಿತ್ರವೆನಿಸಿತು."

"ವಿಚಿತ್ರವೇಕೆ ?"

"ಅಷ್ಟು ಧೈರ್ಯ ಹೇಗೆ ಬಂದಿತು ನನಗೆ ಎಂದು !"

"ಎಚ್ಚರವಿದ್ದರೆ ಧೈರ್ಯದ ಪ್ರಶ್ನೆ....ಅಲ್ಲವೆ?"

"ಹುಂ....ಅದೂ ನಿಜ...."

"ದಾರಿಗುಂಟ ಇಬ್ಬರ ಮಾತು ಹೆಜ್ಜೆಹಾಕಿದ ಹಾಗೆ ನಡೆದೇ ಇತ್ತು. ಸ್ಥಳ ಕಾಲಾದಿಗಳ ವಿಚಾರ ಲೋಕದ ಬೇರೆಯಾದ ಪ್ರಪಂಚದಲ್ಲಿಯೇ ಇಬ್ಬರೂ ವಿಹರಿಸುತ್ತಿದ್ದರು. ಆ ಪ್ರಪಂಚದಲ್ಲಿ ನೋವಿರಲಿಲ್ಲ, ನೋಯಿಸ ಬೇಕೆಂಬ ವಿಚಾರವಂತೂ ದೂರವೆ! ಮಾತು ಎಲ್ಲೆಲ್ಲಿಯೊ ಸಾಗಿತು. ಆದರೆ ಎಲ್ಲ ಮಾತಿನಲ್ಲಿಯೂ ಅನ್ಯೋನ್ಯವಾದ ಅನುರಾಗ ಅವರ ಮುಖದಲ್ಲಿ ಸುಳಿಯುತ್ತಿದ್ದ ಸುಳಿಗಾಳಿಯಂತೆ ಸೂಸಿ ಹೊಮ್ಮುತ್ತಿತ್ತು. ಹತ್ತು ನಿಮಿಷ ವಿಶ್ರಮಿಸಲೆಂದು ಬಯಲಾದ ಜಾಗವೊಂದನ್ನು ನೋಡಿಕೊಂಡು ಕುಳಿತರು. ಮಾಧವ ಕೇಳಿದ :

"ನಾಳೆಗೇ ಅಲ್ಲವೆ ನಿಮ್ಮ ಪರೀಕ್ಷೆಗೆ ಪ್ರಾರಂಭ?"

"ಹುಂ...."

"ಎಷ್ಟು ದಿವಸ ನಡೆಯುವುದು ?"

"ನಾಲ್ಕು. ಯಾವಾಗಲೊನ್ಮೆ ಮುಗಿದೀತೆಂದೆನಿಸುತ್ತಿದೆ ಈಗ ನನಗಂತೂ."

"ಯಾಕೆ ? ಊರಿಗೆ ಹೋಗಲು ಅಷ್ಟು ಆತುರವೆ ?"

ಮಾಧವನ ಪ್ರಶ್ನೆ ಸ್ವಾಭಾವಿಕವಾಗಿತ್ತು. ಆದರೆ ಸರೋಜಿನಿಗೆ ಆ ಪ್ರಶ್ನೆಗೆ ಏನು ಹೇಳಬೇಕೆಂಬುದು ತಿಳಿಯದೆಹೋಯಿತು. ಊರಿಗೆ ಹೋಗುವ ಆತುರದ ಮಾತಂತೂ ಹಾಗಿರಲಿ, ಊರಿಗೆ ಹೋಗದೆ ಇರುವುದು ಸಾಧ್ಯವಿದ್ದರೆ ಎಷ್ಟು ಚೆನ್ನ ಎನ್ನುವ ಸ್ಥಿತಿಯಲ್ಲಿ ಸರೋಜಿನಿ ಇದ್ದಾಗ ಮಾಧವನ ಪ್ರಶ್ನೆ ಆಕೆಯನ್ನು ಒಂದು ನಿಮಿಷ ಮೂಕಳನ್ನಾಗಿ ಮಾಡಿದ್ದರೆ ಆಶ್ಚರ್ಯವಿರಲಿಲ್ಲ.

"ಆತುರವೇನು ? ಮುಗಿದ ಮೇಲೆ ಊರಿಗಂತೂ ಹೋಗಬೇಕಲ್ಲ" ಎಂದು ಅರ್ಧಮರ್ಧ ತನ್ನ ನಿರುತ್ಸಾಹವನ್ನು ಸೂಚಿಸುವಂತೆಯೇ ಹೇಳಿದಳು. ಆದರೆ ಸರೋಜಿನಿಯ ಜೀವನದ ಹಿನ್ನೆಲೆಯನ್ನರಿಯದ ಮಾಧವನಿಗೆ ಆ ನಿರುತ್ಸಾಹದ ರೀತಿ ಅರ್ಥವಾಗಲಿಲ್ಲ. ಆಕೆ ಹಾಗೇಕೆ ಹೇಳಿರಬಹುದೆನ್ನುವುದಕ್ಕಿಂತ ಆಕೆ ಹೊರಟುಹೋಗುವವಳು ಎನ್ನುವ ವಿಚಾರವೇ ಆತನಲ್ಲಿ ಪ್ರಬಲವಾಗಿತ್ತು. ಅಂತೆಯೇ ಕೇಳಿದ :

"ಪರೀಕ್ಷೆ ಮುಗಿದ ಕೂಡಲೆ ಹೊರಟುಬಿಡುತ್ತೀರಾ ?"

"ಹುಂ....ಮತ್ತಿಲ್ಲಿದ್ದೇನು ? ವಸತಿಗೃಹದಲ್ಲಿಯ ಎಲ್ಲರೂ ಹೊರಟುಬಿಡುತ್ತಾರೆ."

"ಗುರುವಾರ ದಿನವೇ ಹೊರಟುಬಿಡುತ್ತಾರೆಯೆ ?"

"ನೋಡಬೇಕು. ಇನ್ನೂ ನಿಶ್ಚಿತವಾಗಲಿಲ್ಲ. ಗುರುವಾರ ಇಲ್ಲದಿದ್ದರೆ—ಮರುದಿವಸ....ಅಷ್ಟೇ."

"ಪರೀಕ್ಷೆ ನಡೆದಾಗಲಂತೂ ಭೇಟಿಯಾಗುವುದು ಸಾಧ್ಯವಿಲ್ಲ. ಎಂದಮೇಲೆ."

ಮಾಧವನ ಮಾತಿನಲ್ಲಿಯ ಸೂಚನೆಯನ್ನು ತಿಳಿದ ಸರೋಜಿನಿಯಾದರೂ ಅದನ್ನೇ ಯೋಚಿಸುತ್ತಿದ್ದಳು. ಅವಳೆಂದಳು:"ನಾನಾದರೂ ಅದನ್ನೇ ಯೋಚಿಸುತ್ತಿದ್ದೆ. ಊರಿಗೆ ಹೊರಡುವ ಮೊದಲು ಇನ್ನೊಮ್ಮೆ ಭೆಟ್ಟಿಯಾಗುವುದು ಸಾಧ್ಯವಾಗಬಹುದೇನೊ ಎಂದು ?"

"ಸಾಧ್ಯವಾಗಬಹುದಲ್ಲ. ಆಗದೆ ಏನು ?"

"ಗುರುವಾರ ಪರೀಕ್ಷೆ ಮುಗಿದ ಕೂಡಲೇ ಸಾಯಂಕಾಲ ಸಿನೇಮಾ ಪ್ರೋಗ್ರಾಮ್ ಇಟ್ಟುಕೊಂಡಿದ್ದಾರೆ."

"ಹಾಗಾದರೆ ಮರುದಿವಸ...."

"ಮರುದಿವಸ ಹೊರಡುವುದೆಂದು ಗೊತ್ತುಮಾಡಿದರೆ....?"

"ಅವರು ಹಾಗೆ ಸೂಚಿಸಿದರೆ, ಇನ್ನೊಂದು ದಿವಸ ಇದ್ದುಬಿಟ್ಟು ಹೋಗೋಣ ಎಂದು ನೀವಾಗಿಯೇ ಎಲ್ಲರನ್ನೂ ನಿಲ್ಲಿಸಿಬಿಡಿರಿ, ಆಯಿತು."

"ಹಾಗಾದರೆ ಶುಕ್ರವಾರ ಮತ್ತೆ ಬರೋಣವೆ ?"

"ಹೂಂ....ಸ್ಥಳ, ಕಾಲ ಡಿಟ್ಟೋ...."ಎಂದು ಮಾಧವ ಮುಗುಳುನಗೆ ನಕ್ಕ.

"ಈಗ ಹೊರಡೋಣವೆ ?"

"ಏನಂಥ ಅವಸರ ? ಈಗ ಇನ್ನೂ ಏಳು ಗಂಟೆ...."

"ಗಂಟೆ ಏಳಾದರೂ, ಬರಬರುತ್ತ ಬೆಳಕಾಗುವುದಿಲ್ಲ, ಕತ್ತಲಾಗುತ್ತದೆ."

"ಅದಕ್ಕೆಯೇ ಹೇಳುತ್ತಾರೆ. ಹೆಂಗಸರಿಗೆ ಬುದ್ಧಿ....!"

"ಹೌದು, ಸಂಜೆಯಾಗುತ್ತ ಹೋದಹಾಗೆ ಬೆಳಕಾಗುತ್ತದೆ ಎಂದು ಹೇಳುವುದು ಗಂಡಸರ ಬುದ್ಧಿ !"

"ಒಂದಿಷ್ಟು ಈ ಕಡೆ ತಿರುಗಿ ನೋಡಿದರೆ ಗಂಡಸಿನ ಬುದ್ಧಿಯ ಪ್ರಶ್ನೆ ಬಗೆಹರಿದೀತು...." ಎಂದು ಎರಡು ಮೂರಡಿ ಮುಂದಕ್ಕೆ ಸರಿದು ಹಿಂದುಗಡೆಯಿಂದ ಸರೋಜಿನಿಯ ಭುಜಗಳನ್ನು ಪೂರ್ವದಿಕ್ಕಿನ ಕಡೆಗೆ ತಿರುವಿದ. ಹುಣ್ಣಿಮೆಯನ್ನು ಸಮೀಪಿಸುತ್ತಿದ್ದ ಚಂದ್ರ ಮುಗಿಲಲ್ಲಿ ಮಾರೆತ್ತರದ ಮೇಲೆ ಮೆರೆಯುತ್ತಿದ್ದ. ಕತ್ತಲಾದ ಹಾಗೆ ಕಾಂತಿ ಬೆಳೆಯುತ್ತಿತ್ತು. ಸರೋಜಿನಿ ಅರ್ಥ ಒಪ್ಪಿ ಹೇಳಿದಳು :

"ನಮ್ಮ ಬುದ್ಧಿಯ ಮಾತು ಹೇಗಿದ್ದರೂ ನಮಗಂತೂ ಇದೆ ಎಂಬು ದನ್ನು ಒಪ್ಪುತ್ತೇನೆ."

"ಒಂದನ್ನೊಪ್ಪಿದರೆ ಇನ್ನೊಂದನ್ನು ಒಪ್ಪಿದಂತೆಯೇ !"

"ಆದೀತು ಮಹಾರಾಯರೆ !" ಎಂದುದಕ್ಕೆ ಇಬ್ಬರೂ ನಕ್ಕು ಸುಮ್ಮ ನಾದರು.

ಬರುತ್ತಿದ್ದ ಬೆಳುದಿಂಗಳು ಕವಿಯುತ್ತಿದ್ದ ಕತ್ತಲೆಯನ್ನು ನೀನಿಲ್ಲಿ ಬೇಡ ಎಂದು ಹೇಳಿ, ಮನವೊಲಿಸಿ, ಗಿಡದಡಿಗಳಲ್ಲಿ ಅಡಗಿಕೊಳ್ಳುವಂತೆ ಮಾಡು ತ್ತಿತ್ತು. ನೋಡುವ, ಈತನದಾದರೂ ಎಷ್ಟುಹೊತ್ತಿನ ಬೆಳಕು ಎಂದು ಸಮಯ ಸಾಧಕನಂತೆ ಕತ್ತಲೆ ಅಲ್ಲಿ ಇಲ್ಲಿ ಹೊಂಚುಹಾಕಿಕೊಂಡು ಉಳಿದಿತ್ತು. ಆಕಾಶ ಮಾತ್ರ ಮುಕ್ತಹೃದಯದಿಂದ ಬೆಳುದಿಂಗಳನ್ನು ತಬ್ಬಿಕೊಂಡು ತುಂಬಿದೆದೆ ಯಿಂದ ಹಾಡುತ್ತಿರುವಂತಿತ್ತು. ಗಿಡಬಳ್ಳಿಗಳು ಹಾಲುಗಡಲಲ್ಲಿ ತೇಲುತ್ತಿದ್ದ ಹಾಗಿತ್ತು. ಮರಗಳ ತುದಿಗಳು ಕೆಳಗಿದ್ದವರಿಗೆ 'ನಿಮ್ಮಕಿಂತಲೂ ನಮಗೆ ಮೊದಲು' ಎಂಬ ಹೆಮ್ಮೆಯಿಂದ ತಲೆ ತಗ್ಗಿಸದೆ ನಿಂತಿದ್ದವು. ಬೆಳುದಿಂಗ ಳೆಂದರೆ ಸರೋಜಿನಿಗೆ ಹುಚ್ಚೆಂಬುದನ್ನು ಮಾಧವ ಅಂದಿನ ನೃತ್ಯದ ಮೂಲಕ ತಿಳಿದಿದ್ದ. ಈಗಲೂ ಚಂದ್ರನಿಂದ ದೃಷ್ಟಿಯನ್ನು ಕೀಳದೆ ನೋಡುತ್ತಿದ್ದಳು. ಮಾಧವ ಆಕೆ ಹಾಗೆ ನೋಡುವುದನ್ನೇ ನೋಡುತ್ತಿದ್ದ. ಅದರಲ್ಲೂ ಆತನಿಗೆ ಆನಂದವೆನಿಸುತ್ತಿತ್ತು.

"ಯಾವ ಮಹರಾಯ ಮಾಡಿದನೊ ಈ ಬೆಳುದಿಂಗಳನ್ನ" ಎಂದು ಸುರಿದಳು ಕೊನೆಗೆ. ಹತ್ತು ಹದಿನೈದು ನಿಮಿಷಗಳನಂತರ ತಿರುಗಿ ಹೊರಟಾಗ ಸರೋಜಿನಿ ಗುಣುಗುಣಿಸುತ್ತಿದ್ದಳು: "ಚಂದ್ರಿಕೇ ಚಂದ್ರಮರ ಜೋಡ್ಯ" ಸುಮಧುರವಾಗಿ ತೇಲಿಬರುತ್ತಿದ್ದ ಸಂಗೀತವನ್ನು ಮಾಧವ ಲಾಲಿಸುತ್ತಿದ್ದ. ತಟ್ಟನೆ ಗೀತ ಅರ್ಧಕ್ಕೆಯೇ ನಿಂತಿತು. ಮೂರು ನಾಲ್ಕು ದಿವಸಗಳಿಂದ ಸರೋಜಿನಿಯನ್ನು ಕಾಡುತ್ತಿದ್ದ ಯೋಚನೆ ಕೂಡಲೇ ತಲೆದೋರಿತು. ಮಾಧವ ಕೊನೆಯ ವರ್ಷದವನಾದ್ದರಿಂದ ಆತ ಮತ್ತೆ ಕಾಲೇಜಿಗೆ ಬರು ವಂತಿರಲಿಲ್ಲ. ಅಂದಮೇಲೆ ಮುಂದೆ? ಎಂಬುದೇ ಆ ಯೋಚನೆ. ಆದರೆ ಕೇಳುವುದು ಹೇಗೆ ಎಂದು ಸಂಕೋಚಪಟ್ಟುಕೊಳ್ಳುತ್ತಿದ್ದಳು. ವಿಷಯವನ್ನು ತಿಳಿಯಬೇಕಾಗಿತ್ತು. ಆದರೆ ತನ್ನ ಉತ್ಕಂಠೆಯನ್ನು ತೋರಗೊಡಬೇಕಾ ಗಿರಲಿಲ್ಲ. ಹಾಗೂ ಹೀಗೂ ತಿಳಿಯೋಣವೆಂದು ಸುತ್ತುಸುತ್ತಾಗಿ ಕೇಳಿದಳು :

"ಪರೀಕ್ಷೆಯಾದನಂತರ ನಿಮ್ಮದೇನು ಕಾರ್ಯಕ್ರಮ, ರಜೆಯಲ್ಲಿ ?"

"ರಜೆಯೇನು ? ಇನ್ನುಮೇಲೆ ನಮಗೆ ಕಾಯಂ ರಜೆ!"

"ಅಂದರೆ ?"

"ಪರೀಕ್ಷೆ ಪಾಸಾದ ನಂತರ ಕಾಲೇಜಂತೂ ಇಲ್ಲ. ಕೆಲಸ ಸಿಕ್ಕು ವಂತೆಯೂ ಇಲ್ಲ. ಅಂದಮೇಲೆ...."

"ಕೆಲಸ ಸಿಗದಿದ್ದರೆ ಮುಂದೆ ಕಲಿಯಬೇಕು...."

"ಕೆಲಸ ಸಿಗಬೇಕೆಂದು ಕಲಿಯುತ್ತಿದ್ದವರಿಗೆ ಅದು ಹೇಗೆ ಸಾಧ್ಯ ?"

"ಯಾಕೆ, ಅನುಕೂಲವಿಲ್ಲವೆ ?"

ಸರೋಜಿನಿಯ ಕೂಡ ಮಾತನಾಡಿದ್ದರಲ್ಲಿ ತನ್ನ ಮನೆತನದ ಬಗೆಯಲ್ಲಿ ಇದು ಮೊದಲನೆಯ ಪ್ರಶ್ನೆಯಾಗಿತ್ತು. ಇದ್ದುದನ್ನೆಲ್ಲ ಯಾತಕ್ಕೆ ಸುಮ್ಮನೆ ವಿವರಿಸಿ ತನ್ನ ನೋವನ್ನು ಆಕೆಯೆದುರು ತೋರಿಸಿಕೊಳ್ಳಬೇಕು ?—ಎಂದು ಕೊಂಡು ಹೇಳಿದ :

"ಅನುಕೂಲವೇನು, ಬೇಕಾದಷ್ಟಿದೆ. ಆದರೆ ಮನಸ್ಸಿಲ್ಲ."

"ಓದು ಬೇಸರವಾಗಿದೆಯೆ ?"

"ಓದು ಬೇಸರವಾಗಿಲ್ಲ. ಸ್ವತಂತ್ರವಾಗಿರಬೇಕೆಂಬ ಅವಸರವಾಗಿದೆ."

"ಹಾಗಾದರೆ ಜೂನ್ ತಿಂಗಳಲ್ಲಿ ನೀನಂತೂ ಕಾಲೇಜಿಗೆ ಬರುವಂತಿಲ್ಲ...."

ಸರೋಜಿನಿಯ ಅರ್ಥ ಮಾಧವನಿಗೆ ಸ್ಪಷ್ಟವಾಗಿ ಯಾವಾಗಲೋ ತಿಳಿದಿತ್ತು. ಆಕೆಗೆ ಸಮಾಧಾನವೆಂದು ಹೇಳಿದ :

"ನಾನಿರದಿದ್ದರೆ ಅಂಜಿಯಿಲ್ಲವೆ ?"

"ಅಂಜಿಯೇನು ? ಇವತ್ತೂ ಇದ್ದಿತು !"

"ಆದರೆ ಇವತ್ತು ನಾನೇ ಇದಿದ್ದೇನೆ !".

ಮಾಧವ ಸರೋಜಿನಿಯನ್ನು ನಗೆಯಾಡಿಸಲು ಯತ್ನಿಸುತ್ತಿದ್ದರೂ ಆಕೆಯ ಹೃದಯದಲ್ಲಿಯಂತೆ ಇವನಲ್ಲೂ ಒಂದು ಪ್ರಶ್ನೆ ಮಿಂಚಿ ಮಾಯವಾಗುತ್ತಿತ್ತು. ಸರೋಜಿನಿಯ ಪರೀಕ್ಷೆ ಮುಗಿದು ಆಕೆ ಊರಿಗೆ ಹೋದನಂತರ ತಮ್ಮಿಬ್ಬರ ಭೆಟ್ಟಿಯಾಗುವುದು ಹೇಗೆ? ಪತ್ರಗಳನ್ನೇನೋ ಬರೆಯಬಹುದು. ಆದರೆ... "ಆಯಿತು, ಇನ್ನು ಒಮ್ಮೆಯಂತೂ ಭೆಟ್ಟಿಯಾಗುವುದಿದೆ. ಆಗ ಏನಾದರೂ ಬೇರೆಯಾದ ಏರ್ಪಾಡುಮಾಡಲು ಬಂದೀತು'' ಎಂದು ಇಬ್ಬರೂ ಸುಮ್ಮನಾದರು.

ಮೊದಲು ಭೆಟ್ಟಿಯಾದ ಕಾಲೇಜಿನ ಗೇಟು ಬಂದಿತು. ಮಾಧವ ಅಲ್ಲಿಂದ ನೇರವಾಗಿ ಬೈಸಿಕಲ್ ಏರಿಕೊಂಡು ಹೊರಡಬಹುದು ಎಂದುಕೊಂಡಿದ್ದ

—ಸರೋಜಿನಿ ಆತ ತನ್ನ ಜೊತೆಯಲ್ಲಿಯೇ ನಡೆದುಹೊರಟಿದ್ದನ್ನು ನೋಡಿ ಕೇಳಿದಳು :

"ಈ ಕಡೆಯಿಂದ ಬಂದರೆ ನಿಮಗೆ ದಾರಿ ಸುತ್ತಾಗುವುದಿಲ್ಲವೆ !" ಎಂದು.

"ಎಷ್ಟು ಆದೀತು ಮಹಾ ! ನಿಮ್ಮನ್ನು ವಸತಿಗೃಹದೆದುರು ಬಿಟ್ಟು ಆಮೇಲೆ 'ಕುದುರೆ'ಯನ್ನೇರುವೆ, ಆಯಿತು...."

ಸರೋಜಿನಿಯ ಒಳಮನಸ್ಸಿನಲ್ಲಿದ್ದುದೂ ಅದೇ. ಆದ್ದರಿಂದ ಸುಮ್ಮನಾದಳು. ರಾತ್ರಿ ಹೆಚ್ಚಾಗಿದ್ದರಿಂದ ಝಪಝುಪನೆ ಹೆಜ್ಜೆಹಾಕಹತ್ತಿದರು. ವಸತಿಗೃಹದ ಸಮೀಪ ಬರುತ್ತಿರುವಾಗಲೇ ಎದುರಿಗೆ ಯಾರೋ ಒಬ್ಬ ಗೃಹಸ್ಥರು ಬಂದರು. ಅವರನ್ನು ನೋಡಿ ಆಕೆ ತಟ್ಟನೆ ನಿಂತುಬಿಟ್ಟಳು. ಅವರನ್ನು ಸರೋಜಿನಿ ಸ್ವಲ್ಪ ದೂರದಲ್ಲೇ ಗುರುತಿಸಿರಬೇಕು. ಮಾಧವ "ಯಾರು ?" ಎಂದು ಕೇಳಿದ. "ಈ ಊರಲ್ಲಿಯ ನಮ್ಮ ತಾಯಿಯ ಪರಿಚಯದವರು ಅವರು. ನೀವಿನ್ನು ಮುಂದಕ್ಕೆ ಸಾಗಿಬಿಡಿರಿ. ಯಾತಕ್ಕೆ ಸುಮ್ಮನೆ ?" ಎಂದು ಅವಸರ ಅವಸರವಾಗಿಯಾದರೂ ಮೆಲುದನಿಯಲ್ಲಿ ಹೇಳಿದಳು. ಅಷ್ಟರಲ್ಲಿ ಆ ವ್ಯಕ್ತಿ ತೀರ ಸಮೀಪಕ್ಕೆ ಬಂದು ಸರೋಜ—" ಎಂದು ಕರೆಯಿತು.

"ಯಾರವರು ?" ಎಂದಳು ಸರೋಜಿನಿ, ಗುರುತು ಸಿಕ್ಕದಿದ್ದವರಂತೆ.

"ನಾನು...." ಎಂದು ಇನ್ನೂ ಮುಂದಕ್ಕೆ ಸರಿದು, ಆ ವ್ಯಕ್ತಿ ಹೇಳಿತು : "ನಾನೀಗ ಎರಡು ಸಲ ಬಂದುಹೋದೆ. ಎಲ್ಲಿಯೋ ತಿರುಗಾಡ ಹೋಗಿರ ಬೇಕು. ಬೇಕಾದರೆ ಇಲ್ಲಿಯೇ ಕಾಣಬಹುದು" ಎಂದು ನಿಮ್ಮ ಸೂಪರಿಂ ಟೆಂಡೆಂಟ್ ಹೇಳಿದರು. ಆದರೂ ಯಾತಕ್ಕೆ ? ತಿರುಗಾಡಿ ಬಂದರೂ ಆಯಿತು ಎಂದು ಹೀ....ಗೆ ಹಾಯಿದು ಬಂದೆ...." ಎಂದು ಒಳ್ಳೆ ಸಲಿಗೆಯ ದನಿಯಲ್ಲಿ ಹೇಳಿತು. ಮಾಧವನಿಗೆ ಆ ವ್ಯಕ್ತಿ ಗೋವಿಂದಗೌಡನೆಂಬುದು ಗೊತ್ತಿರಲಿಲ್ಲ. ಮಾತ್ರವಲ್ಲದೆ, ಆತ ಈಕೆಯ ಕೂಡ ಈ ಸಲಿಗೆಯ ದನಿಯಲ್ಲಿ ಹೀಗೆ ಯಾಕೆ ಮಾತನಾಡುತ್ತಿರಬಹುದೆಂಬ ವಿಷಯವಾಗಲಿ, ಅವರಿವರ ಸಂಬಂಧ ಏನೆಂಬ ವಿಷಯವೂ ತಿಳಿಯದಿದ್ದ ಮೂಲಕ ಮತ್ತು ಸರೋಜಿನಿ ತಾನು ಮುಂದೆ ಸಾಗ ಬೇಕೆಂದು ಸ್ಪಷ್ಟವಾಗಿ ಸೂಚಿಸಿದ್ದ ಮೂಲಕ ಮಾಧವ ಅಲ್ಲಿಂದ ಕಾಲ್ತೆಗೆದ, "ನಾನು ಹೊರಡುವೆ" ಎಂದು ಹೇಳಿ. ಮಾತನಾಡುತ್ತಿರುವಾಗಲೇ ಗೋವಿಂದ ಗೌಡ ಈತ ಯಾರು? ಎಂಬ, ಸಂಶಯದ ದೃಷ್ಟಿಯಿಂದ ಮಾಧವನನ್ನು ನೋಡ ತ್ತಲೇ ಇದ್ದ. ಆತ ಹೊರಟದ್ದನ್ನು ನೋಡಿ ಸರೋಜಿನಿಯನ್ನು ಕೇಳಿಯೇ ಬಿಟ್ಟ "ಇವರು ಯಾರು ?" ಎಂದು.

"ಇವರೇ ? ನಮ್ಮ ಸಂಘದ ಕಾರ್ಯದರ್ಶಿಗಳು. ಇದೀಗ ದಾರಿಯಲ್ಲಿ ಸಿಕ್ಕರು, ಹೀಗೆ ಮಾತನಾಡುತ್ತ ಬಂದೆವು."

"ನಿಮ್ಮನ್ನೆಲ್ಲಿಯೋ ನಾನು ನೋಡಿದ ಹಾಗಿದೆ. ವಕೀಲ ರಾಮರಾವ್ ಅವರಿಗೆ ನೀವೇನಾದರೂ ಸಂಬಂಧಿಕರೊ ?"

"ಅವರು ನನ್ನ ಕಕ್ಕ. ಅವರಲ್ಲಿಯೇ ಇರುತ್ತೇನೆ...."

"ರೈಟ್. ಅಲ್ಲಿಯೇ ನೋಡಿರಬೇಕು....ನಿಮ್ಮನ್ನು ಓಹೋ ! ಹಾಗಾದರೆ ಬ್ಯಾಂಕಿನ ಕೃಷ್ಣರಾಯರ ಮಕ್ಕಳೇ ನೀವು?....ಯಾವ ಕ್ಲಾಸಿನಲ್ಲಿದ್ದೀರಿ ?"

"ಸೀನಿಯರ್...."

"ಹಾಗಾದರೆ ? ಪರೀಕ್ಷೆ ಬಂದಿತಲ್ಲ...." ಎಂದು ಸಲಿಗೆಯ ಉಪಚಾರವನ್ನು ಮಾಡಿ, ಮಾತು ಮುಗಿಸುವುದರಲ್ಲಿದ್ದುದನ್ನು ಮಾಧವ ನೆನೆದು ಹೊರಟ "ಗುಡ್ ನಾಇಟ್" ಎಂದು. ಸರೋಜಿನಿ ಉತ್ತರ ಕೊಡಲಿಲ್ಲವಾದ್ದರಿಂದ ಅದು ತನಗೆ ಸಂಬಂಧಿಸಿದೆಂದು ಭಾವಿಸಿ ಗೌಡರು "ಗುಡ್ ನಾಇಟ್" ಎಂದ. ಮಾಧವ ಸಾಯ್‌ಕಲ್ ಸವಾರನಾದ.

ಇಡೀ ಸಾಯಂಕಾಲದ ರಸಾನುಭವವನ್ನೆಲ್ಲ ಹದಗೆಡಿಸಿದ ಗೋವಿಂದ ಗೌಡನ ಮೇಲೆ ಸರೋಜಿನಿ ವಿಪರೀತ ಕೋಪಿಸಿಕೊಂಡಿದ್ದಳು. ಆದರೆ ಏನನ್ನೂ ಮಾಡುವಂತಿರಲಿಲ್ಲವಾದ್ದರಿಂದ ಸುಮ್ಮನಿರಬೇಕಾಯಿತು. ಗೌಡ ಕೇಳಿದ :

"ನಿನ್ನ ತಾಯಿಯಿಂದ ಪತ್ರ ಬಂದು ಎಂಟು ಹತ್ತು ದಿವಸವಾಯಿತು. ಆಗಲೇ ನೀನು ಬರಬಹುದು ಎಂದುಕೊಂಡಿದ್ದೆ...."

"ಹೌದು, ನನಗೂ ಬಂದಿತ್ತು. ಬರಬೇಕೆಂದಿದ್ದೆ. ಇನ್ನೂವರೆಗೆ ಆಗಲಿಲ್ಲ. ಓದುವುದಕ್ಕೆ ವೇಳೆಯೇ ಸಾಲದಾಗಿದೆ. ನಾಳೆಯಿಂದ ಪರೀಕ್ಷೆ ಬೇರೆ...." ಎಂದು ಸುಳ್ಳುಪುರಾಣದ ಗಂಟನ್ನೇ ಬಿಚ್ಚಿದಳು.

"ಎಷ್ಟು ದಿವಸ ನಡೆಯುವುದು ನಿಮ್ಮ ಪರೀಕ್ಷೆ ?"

"ನಾಲ್ಕು ದಿವಸ. ಶುಕ್ರವಾರ ಮುಂಜಾನೆ ಬಂದರೂ ಬರುತ್ತೇನೆ."

ಬರುವ ಮಾತನ್ನು ಸರೋಜಿನಿ ತಾನಾಗಿಯೇ ಹೇಳುತ್ತಿದ್ದುದನ್ನು ನೆನೆದು ಗೌಡನಿಗೆ ಹಿಡಿಸದ ಸಮಾಧಾನ. ಆದರೆ, ಸರೋಜಿನಿ ಆತನನ್ನು ಆದಷ್ಟು ಬೇಗ ಕಳುಹಿಸಲಿಕ್ಕೆ ಅದೊಂದೆ ಉಪಾಯವೆಂದು ತಿಳಿದು, ಹಾಗೆ ಮಾತನಾಡುತ್ತಿದ್ದಳೆಂಬುದು ಗೌಡನಿಗೆ ತಿಳಿಯದೆಹೋಯಿತು.

"ಪರೀಕ್ಷೆ ಗುರುವಾರ ಮುಗಿಯುವುದಲ್ಲವೆ ? ಹಾಗಾದರೆ ಶುಕ್ರವಾರ

ಏಕೆ ? ಗುರುವಾರ ಸಾಯಂಕಾಲವೇ ಬಂದುಬಿಡು—" ಎಂದು ಗೌಡ ತನ್ನ ಆತುರವನ್ನು ವ್ಯಕ್ತಪಡಿಸಿದ.

"ನೋಡಬೇಕು. ಪರೀಕ್ಷೆ ಮುಗಿದ ದಿನ ಗೆಳತಿಯರೆಲ್ಲರೂ ಸೇರಿ ಸಿನೇಮಾಕ್ಕೆ ಹೋಗಬೇಕೆಂದಿದ್ದೇವೆ."

"ಸಿನೇಮಾಕ್ಕೇನು ? ಅಲ್ಲಿಂದಲೂ ಹೋಗಬಹುದು !"

"ಗೆಳತಿಯರೊಂದು ಬಿಡಬೇಕಲ್ಲ....ಎಲ್ಲರೂ ಕೂಡಿಕೊಂಡು ಮಾಡಿದ ಕಾರ್ಯಕ್ರಮ...."

"ಅದು ಹೋಗಲಿ....ಈಗ ಎರಡು ತಿಂಗಳಿಂದಲೂ ನೀನು ಬರಲಿಲ್ಲ. ಆ ಸಾರೆಯೂ ನಿಮ್ಮ ತಾಯಿಯಿಂದ ಪತ್ರ ಬಂದಿತ್ತು—ದುಡ್ಡು ಕೊಡಬೇಕೆಂದು. ಎರಡು ತಿಂಗಳೂ ಹೇಗೆ ಮಾಡಿದೆ ?"

"ಹೇಗೇನು ? ನಡುವೆಯೊಮ್ಮೆ ತಾಯಿಯ ಕಡೆಯಿಂದಲೇ ಬರೆದು ತರಿಸಿಕೊಂಡೆ....ಇತ್ತೀಚೆ ಬರಲಿಕ್ಕೆ ವೇಳೆ ಸಿಗದ್ದರಿಂದ ಇಲ್ಲಿಯೇ ಫ್ರೇಂಡ್ಸ್ ಕಡೆಯಿಂದ ಇಸಿದುಕೊಂಡಿದ್ದೇನೆ...."

"ಥೂಃ ! ಸುಮ್ಮನೆ ತೊಂದರೆಪಟ್ಟುಕೊಳ್ಳುತ್ತೀ ನೋಡು !"

"ತೊಂದರೆಯಿಲ್ಲ, ಏನೂ ಇಲ್ಲ. ಹಾಗಿದ್ದರೆ ಬಾರದೆ ಇರುತ್ತಿದ್ದೆನೆ ?"

ಗೌಡನಿಗೆ ಸಮಾಧಾನ. ಉತ್ಸಾಹದಲ್ಲಿಯೇ ಕೇಳಿದ : ಹಾಗಾದರೆ ಶುಕ್ರವಾರ ಬರುತ್ತೀಯಾ ?"

"ಹುಂ....ಶುಕ್ರವಾರ ಬರುತ್ತೇನೆ—" ಎಂದು ಬಾಯಿ ಹೇಳುತ್ತಿದ್ದರೂ ಮನಸ್ಸು ಹೇಳುತ್ತಿತ್ತು : 'ಶುಕ್ರವಾರ ಮಾಧವನ ಕೂಡ ತಿರುಗಾಡಲು ಹೋಗುವುದಿದೆ' ಎಂದು. ಅಂತೂ ಅದನ್ನು ಇದನ್ನು ಮಾತನಾಡಿ ಗೌಡನನ್ನು ತೊಲಗಿಸಿಯಾಯಿತು.

ಪರೀಕ್ಷೆ ಮುಗಿದನಂತರ ಸರೋಜಿನಿ ಬರುವಾಗಿನ ಕನಸುಗಳ ಕುದುರೆಯನ್ನೇರಿ ಗೌಡ ಭರದಿಂದ ಸಾಗಿದ್ದ. ಹೊರಗಿನಲ್ಲಿಯಂತೆ ಆತನ ಮನಸ್ಸಿನೊಳಗೂ ಬೆಳುದಿಂಗಳು ಹಬ್ಬಿತ್ತು. ಆದರೆ ನಡುನಡುವೆ ಅಸ್ಪಷ್ಟ ವಿಚಾರವೊಂದು ಇಣಿಕಿ ನೋಡುತ್ತಿತ್ತು. ಸರೋಜಿನಿ ತನ್ನನ್ನು ಮಾತಿನಿಂದಲೇ ಮುಂದೂಡಿ ಪಾರಾಗುವ ಯೋಚನೆಯಲ್ಲಿದ್ದಿರಬಹುದೇ ?—ಎಂದು. ಮೊದಲ ಟರ್ಮಿನ ಕೊನೆಯಲ್ಲಿ ಬಂದು ಏನೋ ಅವಸರವೆಂದು ಹೇಳಿ ಹಣವನ್ನು ತೆಗೆದುಕೊಂಡು ಹೋದವಳು ಎರಡನೆಯ ಟರ್ಮಿನಲ್ಲಿ ಒಮ್ಮೆಯೂ ಬಂದಿರಲಿಲ್ಲ. ನಾಲ್ಕಾರು ಬಾರಿ ಸಿಕ್ಕಿದ್ದರೂ ಮನೆಗೆ ಬರಲು ಒಪ್ಪಿರಲಿಲ್ಲ. ಹೀಗೆ ಯೋಚಿಸುತ್ತಿರುವಾಗ

ಮಾಧವನ ನೆನಪಾಗಿ ಸಂಶಯಕ್ಕೆ ಇನ್ನೂ ಎಡೆಯಾಯಿತು. ಈಕೆಯದೂ ಮಾಧವನದೂ ಏನು ಸಂಬಂಧ ? ಸಂಘದ ಕಾರ್ಯದರ್ಶಿಯಂತೆ ! ಕಾರ್ಯದರ್ಶಿಯಾದರೆ ಕಾಲೇಜಿನಲ್ಲಿ ಈಕೆಯ ಕೂಡ ಬೆಳುದಿಂಗಳಲ್ಲಿ ತಿರುಗಾಟವೇಕೆ? ಈ ಕ್ರಮದಲ್ಲಿ ಯೋಚಿಸಿದ ಹಾಗೆಲ್ಲವೂ ಮಾಧವನ ಬಗೆಯಲ್ಲಿಯ ಗೌಡನ ಸಂಶಯ ಇಮ್ಮಡಿಸತೊಡಗಿತು. ತನ್ನನ್ನು ಮೊದಲು ನೋಡಿದಾಗ ಇಬ್ಬರೂ ತಟ್ಟನೆ ತಡೆದಿದ್ದರು. ಸರೋಜಿನಿಯು ಗುಜುಗುಜು ಏನೇನೋ ಸೂಚನೆ ಕೊಟ್ಟಿದ್ದಳು. ಏನೆಂಬುದು ತನಗೆ ತಿಳಿಯದಿದ್ದರೂ ಅದು ತನ್ನ ವಿಷಯವಾಗಿಯೇ ಏನಾದರೂ ಇದ್ದಿರಬೇಕೆಂಬುದೂ, ಮಾಧವ ಕೂಡಲೆ ಹೊರಟುಬಿಟ್ಟದ್ದರಿಂದ ಅದು ಆತ ಹೊರಡುವುದಕ್ಕೆ ಸೂಚನೆಯಿರಬೇಕಾಗಿಯೂ ಗೌಡ ತಿಳಿದುಕೊಂಡು ಇನ್ನೂ ಸಂಶಯಿತನಾದ. ನೂರು ಹೆಜ್ಜೆ ಮುಂದಕ್ಕೆ ಹೋಗುವಷ್ಟರಲ್ಲಿ ಮಾಧವನನ್ನು ಸ್ಪಷ್ಟವಾಗಿ ಆಪಾದಿಸಬಲ್ಲೆನೆನ್ನುವಷ್ಟು ಸಂಶಯ ಆತನ ಮನಸ್ಸಿನಲ್ಲಿ ಬೆಳೆದು ನಿಂತಿತು....ಅಲ್ಲದೆ ಈಗ ಎರಡು ತಿಂಗಳಿಂದ ಈಕೆ ದುಡ್ಡಿಲ್ಲದೆ ವಸತಿಗೃಹದಲ್ಲಿ ನಡೆಯಿಸಬಹುದಾದರೂ ಹೇಗೆ ? ದುಡ್ಡಿಲ್ಲದೆ ನಡೆಯುವುದೇ ಸಾಧ್ಯವಿರಲಿಲ್ಲ. ಅಂದಮೇಲೆ ಮನೆಯಿಂದ ಅನುಕೂಲವಂತನಾದ ಮಾಧವ ದುಡ್ಡು ಕೊಡುತ್ತಿರಬೇಕು ಎಂದೂ ಹೇಳಿಕೊಂಡ. ಸಂಘದ ಕಾರ್ಯಕ್ರಮದ ನೆಪದಿಂದ ಇವರಿಬ್ಬರಿಗೆ ಸಲಿಗೆ ಬೆಳೆಸಲು ಅನುಕೂಲವೂ ಇತ್ತು. ಹೌದು. ತಾನು ತಿಳಿದಿದ್ದೇ ನಿಜ....ಮನೆ ಮುಟ್ಟಿದಾಗ ಗೌಡನಿಗೆ ಸಂದೇಹವೇ ಉಳಿದಿರಲಿಲ್ಲ–ಇವರಿಬ್ಬರ ಸಹವಾಸವೇ ತನಗೆ ಅಡ್ಡಿಯನ್ನುಂಟು ಮಾಡುತ್ತಿದೆ ಎಂದು ! ಸಂಶಯದ ವಿಷ ಸೇಡಿನ ವಿಚಾರಗಳನ್ನು ತಂದಿತು. ಏನಿದ್ದರೂ ಸರೋಜಿನಿಯ ಈ ಕಪಟವನ್ನು ಮುರಿದು ಹಟವನ್ನು ಮಣಿಸಬೇಕೆಂದು ಹಟತೊಟ್ಟ. ಯೋಚಿಸಿದ ಹಾಗೆ ಅದೇನೂ ಅಷ್ಟು ಕಷ್ಟವಾಗಿ ಕಾಣಲಿಲ್ಲ. ಮಾಧವನನ್ನು ಸರೋಜಿನಿಯಿಂದ ದೂರವಾಗಿಸುವುದಂತೂ ತೀರ ಸುಲಭ. ರಾಮರಾಯರು ತನಗೆ ಪರಿಚಿತರು, ಮಾತ್ರವಲ್ಲದೆ ಸಲಿಗೆಯಿಂದ ಮಾತನಾಡಿಸಬಲ್ಲವರು. ಅವರ ಕಿವಿಯಲ್ಲಿ ಏನಾದರೂ ಅಸ್ಪಷ್ಟವಾಗಿ ಮಾಧವನ ಬಗೆಯಲ್ಲಿ ಉಸಿರಿಬಿಟ್ಟರೆ ಹಾದಿಗೆಟ್ಟ ಹುಡುಗ ಹಾದಿಗೆ ಬರುತ್ತಾನೆಂದೂ; ಶುಕ್ರವಾರ ಸರೋಜಿನಿ ಮನೆಗೆ ಬಂದಳೆಂದರೆ....ಮನಸ್ಸು ಮತ್ತೆ ನಿಧಾನವಾಗಿ ತನ್ನ ಕನಸಿನ ಸಾಮ್ರಾಜ್ಯವನ್ನು ಸೇರಿತು. ಸೇಡನ್ನು ಮರೆತು ಸರಸವನ್ನು ಕಾಣತೊಡಗಿತು.

ಗೌಡ ಮಾಧವನನ್ನು ಕುರಿತು ಯೋಚಿಸುತ್ತಿದ್ದಂತೆ ಸರೋಜಿನಿಯನ್ನು

ಬಿಟ್ಟಾಗಿನಿಂದಲೂ ಗೌಡನ ಯೋಚನೆ ಮಾಧವನನ್ನು ಬಿಟ್ಟಿರಲಿಲ್ಲ. ರಾತ್ರಿ ಓದುತ್ತ ಕುಳಿತಾಗಲೂ ಅದೇ ಯೋಚನೆ. ಈತ ಯಾರು ? ಮುಖಪರಿಚಯ ವಿದ್ದಂತಿತ್ತು. ಆದರೆ ಯಾರೆಂಬುದು ತನಗೆ ತಿಳಿಯದು. ಆದರೆ ಅವನ ಮಾತಿನ ಮೇಲಿಂದ ತನ್ನ ಪರಿಚಯ ಮಾತ್ರ ಅವನಿಗಿದ್ದಿತೆಂಬುದು ಸ್ಪಷ್ಟ ವಾಗಿದ್ದಿತಲ್ಲದೆ ತನ್ನ ಕುಲಗೋತ್ರ-ಪೂರ್ವಾಪರಗಳೆಲ್ಲವೂ ಗೊತ್ತಿದ್ದವನಂತೆ ಆತ ಮಾತನಾಡಿದ್ದ. ಮಾಧವನಿಗೆ ವಿಪರೀತ ಸಿಟ್ಟು ಬಂದಿತು. ತಾನು ಯಾರು ಎಂಬುದಕ್ಕಿಂತ, ತಾನು ಇಂಥವರ ಮಗನೆಂಬುದು ಆತನಿಗೆ ಸಮೀಪದ ಮಾತಾಗಿ ತೋರಿತ್ತು. ಆ 'ಇಂಥವರು' ತನಗೆ ಬೇಕಾಗಿರಲಿಲ್ಲವಾದರೆ ಗೌಡ ನಿಗೇನು ಅದರ ವಿಚಾರ ಎಂದುಕೊಂಡು ಸುಮ್ಮನಾದ. ಇಂಥ ಸಂದರ್ಭದಲ್ಲಿ ಊರಲ್ಲಿ ಹತ್ತಿಪ್ಪತ್ತು ಸಾರೆ ಬಂದಿದ್ದನ್ನು ನೆನೆದು ಕಿಡಿಕಿಡಿಯಾದ. ಎಲ್ಲಿ ಹೋದರೂ ತಾನು 'ಕೃಷ್ಣರಾಯರ ಮಗ'. ಒಮ್ಮೊಮ್ಮೆಯಂತೂ 'ಆ ಬ್ಯಾಂಕಿನ ಕೃಷ್ಣರಾಯರು ! ಅವರ ಮಗ !, ಎಂಬ ಮಾತನ್ನು ಕೇಳಬೇಕಾ ಗಿದ್ದಿತು. ಇದನ್ನು ತಪ್ಪಿಸುವುದೇ ಸಾಧ್ಯವಿಲ್ಲವೆನಿಸುತ್ತಿತ್ತು ಆಗಾಗ ಮಾಧವ ನಿಗೆ....ಇದನ್ನು ಮರೆಯಿಸಲೆಂದು ಮತ್ತೆ ಮೊದಲನೆಯ ವಿಚಾರ. ಆತ ಯಾರಿರಬಹುದು ? ಸರೋಜಿನಿಯೇ ಹೇಳಿದ್ದಳು ಆಕೆಯ ತಾಯಿಯ ಪರಿ ಚಯದವರು ಎಂದು. ಇರಬಹುದು. ಆದರೆ ಸರೋಜಿನಿ ತನ್ನನ್ನು ಮುಂದಕ್ಕೆ ಯಾತಕ್ಕಾಗಿ ಸಾಗಿಸಬೇಕಾಗಿತ್ತು ? ಅಲ್ಲದೆ ಆ ಮನುಷ್ಯ ಸರೋಜಿನಿಯನ್ನು ಎಂಥ ಸಲಿಗೆಯಿಂದ ಮಾತನಾಡಿಸುತ್ತಿದ್ದ ! ಎಷ್ಟು ವಿಚಾರ ಮಾಡಿದರೂ ಗೌಡ ಆತನಿಗೆ ಒಂದು ಸಮಸ್ಯೆಯಾಗಿಯೆ ನಿಲ್ಲುತ್ತಿದ್ದ. ಗೌಡನ ಜತೆಯಲ್ಲಿ ಸರೋಜಿನಿಯೂ ಒಡೆಯಲಾಗದ ಒಗಟಂತೆನಿಸುತ್ತಿದ್ದಳು. ಇನ್ನೊಮ್ಮೆ ಭೆಟ್ಟಿ ಯಾದಾಗ ಗೌಡನ ವಿಚಾರವಾಗಿ ಕೇಳಿಯೇಬಿಟ್ಟು ತಿಳಿದುಕೊಳ್ಳತಕ್ಕದ್ದೆಂಬ ನಿರ್ಧಾರದಿಂದ ಕೊನೆಗೆ ಸಮಾಧಾನ ತಂದುಕೊಂಡ.

## 7

ಪರೀಕ್ಷೆ ಮುಗಿದಾಗಿನಿಂದ ಸರೋಜನಿಗೆ ಪರೀಕ್ಷೆ ಮುಗಿಯಿತೆಂಬ ಸಮಾ ಧಾನಕ್ಕಿಂತಲೂ ಅದು ಮುಗಿದುಹೋಗಿದ್ದರಿಂದ ಇನ್ನುಮೇಲೆ ಊರಿಗೆ ಹೋಗಬೇಕಾಯಿತೆಂಬ ಅಸಮಾಧಾನವೆ ಹೆಚ್ಚಾಗಿ ಎನಿಸುತ್ತಿತ್ತು. ಮೂರೂ ವರೆ ತಿಂಗಳಿಂದ ಕಾಣದ ತಾಯಿಯನ್ನು ಕಾಣಬೇಕೆಂಬ ಆತುರ ಆಕೆಯಲ್ಲಿ ಬೆಳೆದಿರಲಿಲ್ಲ. ಎರಡನೆಯ ಟರ್ಮಿನುದ್ದಕ್ಕೂ ಆಗಾಗ ಗೋವಿಂದಗೌಡ ಬಂದು

ತನ್ನನ್ನು ಬರಹೇಳಿದುದೆಲ್ಲವೂ ದೂರವಿದ್ದ ತಾಯಿಯ ಆಟವೇ ಎಂದು ಖಚಿತವಾಗಿ ತಿಳಿದಿದ್ದ ಸರೋಜಿನಿ ಆ ತಾಯಿಯ ಬಗೆಯಲ್ಲಿ ಹೆಚ್ಚುಹೆಚ್ಚು ನಿರುತ್ಸಾಹವನ್ನು ತಳೆಯುತ್ತಿದ್ದುದು ಸ್ವಾಭಾವಿಕವೇ ಆಗಿತ್ತು. ಆದರೆ ಆಕೆಯಿಲ್ಲದೆ ತನಗೆ ಬೇರೆ ಗತಿಯಿರಲಿಲ್ಲವಾದ್ದರಿಂದ ಎಷ್ಟು ಬೇಡವಾದರೂ ಊರಿಗೆ ಹೊರಡುವ ಸಿದ್ಧತೆಯನ್ನು ಮಾಡಲೇಬೇಕಾಗಿದ್ದಿತು. ಊರಿಗೆ ಹೊರಡುವ ಸಿದ್ಧತೆಯೆಂದರೆ ಮೊದಲಿಗೆ ಹಣ ಅಗತ್ಯವಾಗಿತ್ತು. ಎರಡು ತಿಂಗಳಿಂದಲೂ ತಾನು ಹಣವನ್ನು ನೇರವಾಗಿ ಕಳಿಸದೆ ಗೌಡನ ಕಡೆಯಿಂದ ಪಡೆಯಬೇಕೆಂದು ತಾಯಿ ಬರೆಯಿಸುತ್ತಿದ್ದಳು. ಎಂಟು ಹತ್ತು ದಿವಸ ಹಿಂದೆ ಬಂದ ಅಂಥದೇ ಪತ್ರಕ್ಕೆ ಉತ್ತರವೆಂಬು, ಸರೋಜಿನಿ ದುಡ್ಡನ್ನು ತಾಯಿ ನೇರವಾಗಿಯೇ ಕಳಿಸಬೇಕೆಂದು ಒತ್ತಾಯದಿಂದ ಬರೆದಿದ್ದರೂ ಕೊನೆಗೆ ತಾಯಿ ತನ್ನ ಕಾಯಿಲೆಯ ಮೂಲಕ ತನ್ನ ಹತ್ತಿರದ ನಗದು ದುಡ್ಡೆಲ್ಲ ತೀರಿದೆಯೆಂದೂ, ಗೌಡ ದುಡ್ಡನ್ನು ಕೊಡಲು ಒಪ್ಪಿದ್ದಾನೆಂದೂ ಉತ್ತರ ಬರೆಯಿಸಿದ್ದಳು. ಹೀಗಾಗಿ ಮುಂಜಾನೆಯಿಂದ ಚಡಪಡಿಸುತ್ತಿದ್ದಳು. ದುಡ್ಡಿಲ್ಲದೆ ವಸತಿಗೃಹದಿಂದ ಬಿಡುಗಡೆ ಸಾಧ್ಯವಿರಲಿಲ್ಲ. ಅಲ್ಲದೆ, ಪರೀಕ್ಷೆ ಮುಗಿದುದರಿಂದ ಎಲ್ಲರೂ ಹಣವನ್ನು ಕೂಡಲೆ ಪಾವತಿಮಾಡಬೇಕೆಂದು ಸೂಪರಿಂಟೆಂಡೆಂಟರವರಿಂದ ಅಪ್ಪಣೆಯೂ ಹೊರಬಿದ್ದಿತ್ತು. ಸಾಯಂಕಾಲ ಮಾಧವನನ್ನು ಕಾಣುವುದಿತ್ತು. ಆದರೆ ಆತನಿಂದ ಹಣ ಬೇಡುವುದಕ್ಕೆ ಯಾವಾಗಲೂ ಸರೋಜಿನಿಯ ಮನಸ್ಸು ಹಿಂತೆಗೆಯುತ್ತಿತ್ತು. ಗೌಡನ ಹತ್ತಿರ ನೇರವಾಗಿ ಹೋಗಿ ದುಡ್ಡು ತೆಗೆದುಕೊಂಡು ಬಂದರಾಯಿತು ಎಂದೂ ಒಮ್ಮೊಮ್ಮೆ ಯೋಚಿಸುತ್ತಿದ್ದಳು. ಆದರೆ— ತಾನು ಪ್ರತ್ಯಕ್ಷವಾಗಿ ಆತನಿಂದ ಪಡೆಯುವುದೆಲ್ಲವೂ ಒಂದಿಲ್ಲೊಂದು ದಿನ ತನ್ನ ವಿರುದ್ಧವಾಗಿ ನಿಲ್ಲಬಹುದೆಂಬ ಎಣಿಕೆ ಒಂದೆಡೆ. ಅಲ್ಲದೆ, ಗೌಡನ ಮನೆಗೆ ತಾನೊಬ್ಬಳೇ ಹೋದರೆ ಆತ ಸರಿಯಾಗಿ ವರ್ತಿಸದಿದ್ದರೆ? ಸದ್ಯಕ್ಕೆ ಆತನ ಮನೆಯಲ್ಲಿ ಮುದುಕಿ ತಾಯಿ, ಅಡಿಗೆಯವ, ಇನ್ನಾರೋ ದೂರದ ಸಂಬಂಧಿಕರೊಬ್ಬರು ಇವರನ್ನು ಹೊರತುಪಡಿಸಿ ಯಾರೂ ಇರಲಿಲ್ಲ. ಹೆಂಡತಿ ತವರಿಗೆ ಹೋದವಳು ಇನ್ನೂ ಬಂದಿರಲಿಲ್ಲವೆಂಬುದು ಸರೋಜಿನಿಗೆ ತಿಳಿದ ವಿಷಯ. ಎಂದಮೇಲೆ ? ಏನು ಮಾಡಬೇಕೆಂದು ತಿಳಿಯದೆ, ಹೋಗಿಬಂದರಾಯಿತು ಎಂದುಕೊಂಡು ಒಂಬತ್ತು ಗಂಟೆಯ ಸುಮಾರಿಗೆ ಹೊರಟಳು. ಗೌಡ ಆದೇ ಎದ್ದು ಚಹ ಕುಡಿಯುತ್ತಲಿದ್ದ.

ಸರೋಜಿನಿ ಬಂದದ್ದನ್ನು ನೋಡಿ ಗೌಡನ ಮನಸ್ಸಿನಲ್ಲಿ ಆನಂದ ನಿರುತ್ಸಾಹ

ಎರಡೂ ಸರಿಬೆರಕೆಯಾದವು. ಬಂದಳು ಎಂಬುದಕ್ಕೆ ಆನಂದವಾದರೂ ಈ ಬೆಳಗಿನ ಜಾವದಲ್ಲಿ ಬಂದು ಒಂದೆರಡು ಗಳಿಗೆ ಕುಳಿತುಕೊಳ್ಳಲೂ ಅವಕಾಶ ವಿಲ್ಲದಾಗ ಬಂದಳು ಎಂಬುದಕ್ಕೆ ನಿರುತ್ಸಾಹ. ಅಲ್ಲದೆ ಹೋದ ಸಲ ಆಕೆ ಶುಕ್ರವಾರ ಬರುತ್ತೇನೆಂದು ಹೇಳಿದಾಗ ಆಕೆ ಸಾಯಂಕಾಲವೆಂದು ಹೇಳಿರ ದಿದ್ದರೂ ತಾನಾಗೆಯೇ ಹಾಗೆ ತನ್ನ ಬಯಕೆಯಂತೆ ಭಾವಿಸಿ ಕನಸಿನ ಕುದುರೆ ಯನ್ನೇರಿದ್ದ. ಅದಕ್ಕೆಂದೇ ಕೇಳಿದ:

"ಅದೇನು, ಈಗ ಬಂದುಬಿಟ್ಟೆ....?"

"ಬರುತ್ತೇನೆಂದು ಹೇಳಿರಲಿಲ್ಲವೆ?"

"ಹೂಂ....ಹೇಳಿದ್ದೆ. ಆದರೆ ನೀನು ಸಾಯಂಕಾಲ ಬರಬಹುದು ಎಂದು ಕೊಂಡಿದ್ದೆ...."

"ಸಾಯಂಕಾಲವೇ ಬರುತ್ತಿದ್ದೆ. ಆದರೆ ನಿನ್ನೆ ನಮ್ಮ ಸೂಪರಿಂಟೆಂಡೆಂಟರು ಬಾಕಿ ಹಣವನ್ನು ಎಲ್ಲರೂ ಕೂಡಲೆ ಕೊಟ್ಟುಬಿಡಬೇಕು ಎಂದು ನೋಟೀಸು ತೆಗೆದರು. ಅದಕ್ಕಾಗಿ ಧಾವಿಸಿ ಬಂದೆ."

"ಆಯಿತು. ನೀನು ಬಂದದ್ದೇನೋ ಸರಿಯಾಯಿತು. ಆದರೆ ನೀನು ಬರುವುದು ಸಾಯಂಕಾಲ ಎಂದು ನಾನು ದುಡ್ಡು ಮಧ್ಯಾಹ್ನ ಬ್ಯಾಂಕಿನಿಂದ ತರಿಸಿದರಾಯಿತು ಎಂದೆ" ಎಂದು ಗೌಡ ಸುಳ್ಳು ಹೇಳಿದ. ಸಾಯಂಕಾಲ ಸರೋಜಿನಿಯನ್ನು ಮತ್ತೆ ಬರುವಂತೆ ಮಾಡಲಿಕ್ಕೊಂದು ಉಪಾಯ ಮಾತ್ರ ಅದು! ಬರಬಾರದೆಂದುಕೊಂಡಲ್ಲಿ, ಬಂದು ಬೇಡಬಾರದಲ್ಲಿ, ಬೇಡಿದರೂ ದುಡ್ಡು ಸಿಗಲಾರದೆ ಹೋಯಿತಲ್ಲಾ! ಸರೋಜಿನಿಗೆ ಒಂದು ಕ್ಷಣ ಕೆಡಕು ಎನಿಸಿತು. ಆದರೆ ಮರುಕ್ಷಣ ಗೌಡ ದುಡ್ಡು ಕೊಡದೆ ಇದ್ದುದೂ ಒಳ್ಳೆಯವೇ ಆಯಿತೆಂದಳು. ಗೌಡನ ಹೊಂಚಿನ ಬಗ್ಗೆ ಸಂಶಯಹೊಂದಿದ್ದ ಸರೋಜಿನಿ 'ಏನಾದರೂ ಆಗಲಿ, ಸಾಯಂಕಾಲ ಮತ್ತೆ ಬರುವ ಹಾಗಿಲ್ಲ' ಎಂದುಕೊಂಡು ಹೊರಡಬೇಕೆಂದಳು.

"ಹಾಗಾದರೆ ನಾನು ಹೊರಡುವೆ."

"ಛೆ! ಇದೇನು? ಎಂದಿಲ್ಲೊಂದು ದಿವಸ ಬರುವುದು. ಬಂದಮೇಲೂ ನಿಂತ ಕಾಲಮೇಲೆ ಹೊರಡುವುದು...."

"ಮತ್ತಿನ್ನೇನು, ಕೆಲಸವಾಯಿತಲ್ಲ....?" ಎಂದು ಒಂದು ಸುಳ್ಳು ನಗೆ ಬೀರಿದಳು.

"ಕೆಲಸ ಆಗಲಿಲ್ಲ. ಅದಕ್ಕೇ ಕುಳಿತುಕೊ...."

"ಈಗ ಕುಳಿತುಕೋಡೇನು ? ಸಾಯಂಕಾಲದವರೆಗೆ ದುಡ್ಡು ಇಲ್ಲ ಅಂದ ಮೇಲೆ...."

"ಕುಳಿತಾದರೂ ಕುಳಿತುಕೊ. ಈಗ ನೀನು ಹೋಗಿ ಮಾಡುವುದಾದರೂ ಏನು ? ಪರೀಕ್ಷೆಯ ಓದಿನ ನೆಪವನ್ನಂತೂ ಇನ್ನುಮೇಲೆ ಹೇಳುವಹಾಗಿಲ್ಲ...."

'ಓದಿನ ನೆಪ' ಎಂದುದಕ್ಕೆ ಸರೋಜಿನಿಗೆ ಸಿಟ್ಟು ಬಂದಿತು. ಆದರೆ ಮಾತು ಬೆಳೆಯಿಸುವ ಮನಸ್ಸಿರಲಿಲ್ಲವಾದ್ದರಿಂದ ಒಂದೆರಡು ನಿಮಿಷ ಸುಮ್ಮನಾಗಿಯೇ ಉಳಿದು ಹೇಳಿದಳು :

"ಓದಿಲ್ಲದಿದ್ದರೆ ಉಳಿದ ಇನ್ನೇನೂ ಕೆಲಸವಿಲ್ಲವೆ? ನಾಳೆ ಊರಿಗೆ ಹೊರಡ ಬೇಕು !"

ಗೌಡನಿಗೆ ಇದು ಅನಿರೀಕ್ಷಿತವಾಗಿದ್ದಿತು. ಅವನೆಂದ :

"ನಾಳೆ, ಊರಿಗೆ ?"

"ಹುಂ...."

"ನಿನ್ನ ತಾಯಿಗೂ ನಿನಗೂ ಏನೂ ಸಂಬಂಧವಿಲ್ಲದ ಹಾಗಿದೆಯಲ್ಲ? ನಿನಗೆ ಹೊರಟು ಬಾ ಎಂದು ಬರೆದಿದ್ದಾಳೆಯೆ ?"

"ಅದನ್ನೇತಕ್ಕೆ ಬರೆಯಬೇಕು ? ಪರೀಕ್ಷೆ ಮುಗಿಯಿತು, ಮನೆಗೆ ಹೋಗು ವುದು...."

"ಅದು ಸರಿ. ಅದರೆ ಆಕೆಗೇನೋ ಕಾಯಿಲೆ. ಗುಣವೆನಿಸುತ್ತಿಲ್ಲವಂತೆ. ಅದಕ್ಕೆ ಆಕೆಯೇ ಇಲ್ಲಿಗೆ ಬಂದರೂ ಬರಬಹುದು ಎಂದು ಹೇಳಿಕಳಿಸಿದ್ದಳು."

"ಆಕೆ ಬರಬೇಕೆನ್ನುವ ವಿಚಾರ ನನಗಂತೂ ಗೊತ್ತಿಲ್ಲ !"

"ಅದಕ್ಕೆಂದೇ ಹೇಳಿದೆ, ನಿನಗೂ ಆಕೆಗೂ ತಾಳಮೇಳವಿಲ್ಲ ಎಂದು...."

ಸರೋಜಿನಿಯೆಂದುಕೊಂಡಳು 'ನಿಜವಾಗಿಯೂ ತಾಳಮೇಳವಿಲ್ಲ; ಯಾವ ವಿಧದಲ್ಲಿ ಆಕೆಯೊಡನೆ ತನ್ನ ವಿಚಾರ ಹೊಂದಿತ್ತು ? ಪ್ರತಿಕ್ಷಣವೂ ತಾನು ಆಕೆಯಿಂದ ದೂರ ಹೋಗುತ್ತಿದ್ದೇನೆ. ದೂರ ಹೋದಷ್ಟೂ ಒಳಿತು ಎಂದು ಕೊಳ್ಳುತ್ತಿದ್ದೇನೆಂದಮೇಲೆ?' ಸರೋಜಿನಿ ಬೇರೆಯಾದ ದಾರಿಯನ್ನೇ ಹಿಡಿದಳು.

"ಆಕೆ ಬರುವುದು ಎಂದೊ ? ಇಂದು ಎಂದರೆ ಇನ್ನೊಂದು ತಿಂಗಳು ಆಕೆ ಬರು ವುದು. ನನಗಂತೂ ಇಲ್ಲಿಯೇ ಇದ್ದು ಬೇಸರವಾಗಿದೆ. ನಾಳೆಗೆ ಹೋಗಿಬಿಟ್ಟು, ಆಕೆ ಬರುವುದೇ ಆದರೆ ಮತ್ತೆ ಆಕೆಯ ಕೂಡ ಬರುವೆ, ಆಯಿತು...."

"ನನ್ನ ಮಾತು ಕೇಳುವುದಾದರೆ ನೀನು ನಾಳೆಗೆ ಹೊರಡಲೇಬೇಡ. ಆಕೆಗೇ ಇಲ್ಲಿಗೇ ಬರಲು ತಿಳಿಸೋಣವಂತೆ. ಬರುವುದಾದರೆ ಬಂದಾಳು. ಬಾರದೆ ಇದ್ದರೆ

ನೀನು ಹೇಳಿದ ಹಾಗೆ ಆದೀತು. ಆಕೆಯಿಂದ ಉತ್ತರ ಬರುವವರೆಗಾದರೂ ನೀನಿಲ್ಲಿದ್ದರೇನು ಆಗಬೇಕಾಗಿದೆ ?"

"ನಮ್ಮಲ್ಲಿ ಎಲ್ಲರೂ ಹೊರಟುಹೋದನಂತರ ಕ್ಲಬ್ಬು ನಡೆಯುವುದೋ, ಇಲ್ಲವೋ ?"

"ನಡೆಯದಿದ್ದರೆ ಇಲ್ಲ. ಇಲ್ಲಿಗೇ ಬಂದುಬಿಡು. ಇಲ್ಲಿಗೆ ಬಂದರೆ ನಾವೇನೂ ನಿನ್ನನ್ನು ಉಪವಾಸ ಸಾಯಹೊಡೆಯುವುದಿಲ್ಲ....!" ಎಂದು ಗೌಡ ಹುಚ್ಚು ನಗೆ ನಕ್ಕ.

ಸರೋಜಿನಿ ಈ ಸನ್ನಿವೇಶವನ್ನು ನಿರೀಕ್ಷಿಸಿರಲಿಲ್ಲ. ತಾಯಿ ಬರಬೇಕೆನ್ನುವ ವಿಚಾರವನ್ನು ತನಗಂತೂ ತಿಳಿಸಿರಲಿಲ್ಲ. ಬೇಕೆಂತಲೇ ತಿಳಿಸಿರಲಿಲ್ಲವೇ ? ಈ ವಿಚಾರ ಬಂದಾಗ ಆಕೆಯು ಬಗೆಯಲ್ಲಿ ಇನ್ನೂ ಉದ್ವಿಗ್ನಗೊಂಡಳು. ಗೌಡನ ಸಂಚು ಆಕೆಗೆ ಅರ್ಥವಾಗಿತ್ತು. ತ್ರಸ್ತಳಾಗಿಯೇ ಕೊನೆ ಮಾತನ್ನು ಹೇಳುವ ದನಿಯಲ್ಲಿ ಹೇಳಿಬಿಟ್ಟಳು :

"ನಾಳೆ ನನಗೆ ಊರಿಗೆ ಹೋಗಲೇಬೇಕು...."ಎಂದು.

ಸರೋಜಿನಿ ತನ್ನೆದುರಿನಲ್ಲಿ ಈ ರೀತಿ ಸ್ಪಷ್ಟವಾಗಿ ತನ್ನ ನಿರ್ಧಾರವನ್ನು ಹೇಳುವ ಧೈರ್ಯ ಮಾಡಬಹುದೆಂದು ಗೌಡ ಬಗೆದಿರಲಿಲ್ಲ. ಆಕೆಯ ದನಿಯಲ್ಲಿಯ ಅರ್ಥ ಸ್ಪಷ್ಟವಾದ ಸಿಡುಕನ್ನು ಗುರುತಿಸಿ ಆಕೆಯನ್ನು ಇರುವುದಕ್ಕಾಗಿ ಒತ್ತಾಯಪಡಿಸುವ ದಾರಿಯನ್ನು ಹಿಡಿಯಲಿಲ್ಲ. ತನ್ನ ಯೋಚನೆಯಲ್ಲಿಯೇ ಆತ ಇದ್ದುದನ್ನು ನೋಡಿ ಸರೋಜಿನಿ ಮತ್ತೆ ಹೇಳಿದಳು :

"ನನಗೆ ಹೊತ್ತಾಯಿತು ; ನಾನೀಗ ಹೊರಡುತ್ತೇನೆ."

"ಹೋಗುವಿಯಂತೆ. ಚಹವನ್ನಾದರೂ ತೆಗೆದುಕೊ...."

"ಬೇಡ. ನಾನಾಗಲೇ ತೆಗೆದುಕೊಂಡಿದ್ದೇನೆ...." ಎಂದು ಹೇಳಿ ಹೊರಡಲು ಅನುವಾದಳು. ಗೌಡನಿಗೂ ತುಸು ಸಿಟ್ಟು ಬಂದಿತು. ಆಕೆಯನ್ನು ಮಾತನಾಡಿಸದೆ ಹಾದಿಗೆ ತರದ ಹೊರತು ಬೇರೆ ದಾರಿಯಿಲ್ಲವೆಂದುಕೊಂಡರೂ ಆಕೆ ಹೊರಟುದನ್ನು ನೋಡಿ ಸುಮ್ಮನಿರಲಾಗಲಿಲ್ಲ. ಅವನೆಂದ :

"ಹಾಗಾದರೆ ಹೊರಟೇಬಿಡುತ್ತೀಯಾ....?" ಸಾಯಂಕಾಲ . ಯಾವಾಗ ಬರುತ್ತಿ? ಯಾವಾಗ ಬಂದರೂ ದುಡ್ಡನ್ನು ತರಿಸಿ ಇಟ್ಟಿರುತ್ತೇನೆ...."

"ಐದು ಗಂಟೆಗೆ ಬರಲೆ ?"

"ಇದಕ್ಕೆ ನಾನಿನ್ನೂ ಕೋರ್ಟಿನಿಂದ ಬಂದಿರುವುದಿಲ್ಲ. ಆರೂವರೆಗೆ ಬಂದರಾದೀತು...."

"ಹುಂ...." ಎಂದು ಮಾತ್ರ ಹೇಳಿ ಸರೋಜಿನಿ ಅಲ್ಲಿಂದ ಹೊರಟಳು. ಮತ್ತೊಮ್ಮೆ ಬರುವಹಾಗಿಲ್ಲವೆಂದು ನಿಶ್ಚಯಿಸಿಯೇ ಹೊರಟಿದ್ದಳು. ಮಾಧವ ಏನೆಂದರೂ ಅಂದುಕೊಳ್ಳಲಿ, ತನಗೆ ಬೇಕಾದ ದುಡ್ಡನ್ನು ಆತನಿಂದಲೇ ಎಂಟು ದಿವಸಗಳ ಮಟ್ಟಿಗಾದರೂ ಕೈಗಡವೆಂದು ತೆಗೆದುಕೊಂಡು ಊರಿಗೆ ಹೋದ ಅನಂತರ ಕಳಿಸಿದರಾಯಿತು ಎಂದುಕೊಂಡಳು. ಈ ಏರ್ಪಾಡಿನಲ್ಲಿ ಆಕೆಗೆ ಅವಮಾನಕರವಾದುದೇನು ಕಾಣಲಿಲ್ಲ. ಸಾಯಂಕಾಲ ಮತ್ತೊಮ್ಮೆ ಹೋಗಿ ತಾನಾಗಿಯೇ ಗೌಡನ ಕೈಗೆ ಸಿಕ್ಕುಬೀಳುವುದಕ್ಕಿಂತ ಮಾಧವನನ್ನು ಕೇಳು ವುದೇ ಒಳ್ಳೆಯದೆಂದು ನೆನೆದು, ದುಡ್ಡು ಕೈಗೆ ಬಂದುದಕ್ಕಿಂತಲೂ ಹೆಚ್ಚಿನ ಗೆಲುವಿನಿಂದ ಕೋಣೆಯನ್ನು ಸೇರಿದಳು.

ತನಗೆ ಬೇಕಾದ ಹಣವನ್ನು ಮಾಧವನಿಂದ ಪಡೆಯುವುದು ಸಾಧ್ಯವೆನಿ ಸಿದ್ದರಿಂದಲೇ ಸರೋಜಿನಿ ಇಡೀ ದಿವಸ ಮರುದಿನ ಊರಿಗೆ ಹೊರಡುವ ಸಿದ್ಧತೆ ಯನ್ನು ನಡೆಸಿದ್ದಳು. ನಡುನಡುವೆ ಮಾತ್ರ ಒಮ್ಮೊಮ್ಮೆ ಕೈ ತಡೆಯುತ್ತಿತ್ತು. ಒಂದೆಡೆ ಸಾಯಂಕಾಲ ಮಾಧವನನ್ನು ಕಾಣುವ ಕುತೂಹಲ ; ಇನ್ನೊಂದೆಡೆ ಎರಡು ಮೂರು ತಿಂಗಳು ಇನ್ನು ಆತನನ್ನು ಕಾಣಲು ಸಾಧ್ಯವಿಲ್ಲ ಎಂಬುದ ಕ್ಕಾಗಿ ದುಗುಡ. ಇವೆರಡನ್ನು ಮೀರಿ ಮಾಧವ ತನ್ನ ಮಾತಿನಂತೆ ಎಲ್ಲಿ ಯಾದರೂ ಕೆಲಸಕ್ಕೆಂದು ಹೊರಟುಹೋಗಿಬಿಟ್ಟರೆ ಜೂನ ತಿಂಗಳಲ್ಲಿ ಕಾಲೇಜಿಗೆ ಬಂದರೂ ಮಾಧವನ ಭೆಟ್ಟಿ-ಸಹವಾಸವಿಲ್ಲದಾಗುವುವೆಂಬ ನಿರಾಶೆ. ಯಾವ ದಿಕ್ಕಿನಿಂದ ಯೋಚಿಸಿದರೂ ಸರೋಜಿನಿಯ ವಿಚಾರ ಮಾಧವನೆಡೆಗೇ ಓಡು ತ್ತಿತ್ತು. ಒಮ್ಮೊಮ್ಮೆ ಆಕೆಗೆ ವಿಚಿತ್ರವೆನಿಸುತ್ತಿತ್ತು. ಇಷ್ಟು ಬೇಗ ತನ್ನ ಮನಸ್ಸು ಮಾಧವನಿಗೆ ಮಾರುಹೋದದ್ದು ಹೇಗೆ? ಎಂದು. ಹೀಗಾಗಿ ಯಾವ ಕೆಲಸದಲ್ಲಿ ತೊಡಗಿದ್ದರೂ ಮಾಧವನನ್ನು ಕಾಣಬೇಕೆಂಬ ಕುತೂಹಲ ಇತರ ಯೋಚನೆಗಳಿಂದುಂಟಾದ ಕಾತರವನ್ನು ಮಣಿಸಿ ಮೇಲಕ್ಕೇಳುತ್ತಿತ್ತು. ಈ ಕುತೂಹಲದ ಜತೆಗೆ ಕೊನೆಗೆ ತಾನು ಗೌಡನನ್ನು ತಪ್ಪಿಸಿದೆನೆಂಬ ಗೆಲುವಿನ ಭಾವ ಬೇರೆ. ಸಾಯಂಕಾಲ ಆತನನ್ನಂತೂ ಕಾಣುವ ಹಾಗಿಲ್ಲ ! ಮರುದಿನ ಮುಂಜಾನೆ ಊರಿಗೆ ಹೊರಟುಬಿಡುವುದು ! ಆದರೆ ಇದೆಲ್ಲ ಸಾಧ್ಯ ವಾಗುವುದು ಬಿಡುವುದು ಮಾಧವನನ್ನು ಕೂಡಿದೆ ಎಂಬುದನ್ನು ನೆನೆದಾಗ ಆತನ ಬಗೆಯಲ್ಲಿಯ ತನ್ನ ವಿಶ್ವಾಸ ಹತ್ತುಪಾಲು ಬೆಳೆಯುತ್ತಿತ್ತು. ಅಲ್ಲದೆ ಮುಂದೆಯೂ ಮಾಧವನ ಹೊರತು ಬದುಕಿನಲ್ಲಿ ತನಗೆ ಗತಿಯೂ ಇಲ್ಲವೆಂದು ಕೊಳ್ಳುವಷ್ಟರಮಟ್ಟಿಗೆ ಸರೋಜಿನಿಯ ಹೃದಯ ಮಾಧವನಲ್ಲಿ ಆತ್ಮೀಯವಾದ

ವಿಶ್ವಾಸವನ್ನು ಆಗಲೇ ಬೆಳೆಸಿಕೊಂಡಿತ್ತು.

ಮಾಧವ ಸರಿಯಾಗಿ ಆರು ಗಂಟೆಗೆ ನಿಯಮಿತ ಸ್ಥಳಕ್ಕೆ ಬಂದರೂ ಸರೋಜಿನಿಯ ಸುಳಿವೇ ಕಾಣಲಿಲ್ಲ. ಅತ್ತಿತ್ತ ಒಂದು ನಿಮಿಷ ಅಲೆದಾಡಿದ. ಪಶ್ಚಿಮದಲ್ಲಿ ಕಾರ್ಮೋಡವೊಂದು ಮಿಂಚಿನಂಚಿನೊಡಗೂಡಿ ಮೆರೆಯುತ್ತಿತ್ತು. ಬಲಗಡೆಯಲ್ಲಿಯೂ ಅಚ್ಚ ಬೆಳಗಿನ ಮೇಘಮಾಲಿಕೆಯೊಂದು ಗರಿಗೆದರಿ ನಿಂತಿತ್ತು. ಮಳೆ ಬಂದರೂ ಬರಬಹುದೆನಿಸುತ್ತಿದ್ದುದರಿಂದ ಮಾಧವ ಸರೋಜಿನಿಯ ಬರವಿನ ವಿಷಯದಲ್ಲಿ ಸಾಶಂಕನಾದ. ಹೋದ ಸಲ ಸರಿಯಾದ ವೇಳೆ ಬಂದಿದ್ದವಳು. ಈ ಸಲ ಹೀಗೇಕೆ ಮಾಡಿದಳು ? ಅಥವಾ ಬರುವುದನ್ನು ಮರೆತೇ ಬಿಟ್ಟಳೋ ? ಛೇ ! ಸಾಧ್ಯವೇ ಇಲ್ಲ. ಮಳೆ ಬಂದೀತು ಎಂದೂ ಹಿಂದುಳಿದಿದ್ದರೆ ? ಅಂತೂ ನೂರು ಯೋಚನೆಗಳ ಮೂಲಕ ಪ್ರತಿಕ್ಷಣವೂ ಹತ್ತು ಪಾಲು ದೀರ್ಘವಾಗಿ ತೋರುತ್ತಿತ್ತು. ಬೈಸಿಕಲ್ ಮೇಲಿಂದ ಕೆಲಸವಿಲ್ಲದೆ ಒಂದೈದು ನಿಮಿಷ ಆಚೆ ಈಚೆ ಅಲೆದಾಡಿ ಮತ್ತೆ ಬಂದರೂ ಸರೋಜಿನಿ ಕಾಣಲಿಲ್ಲ. ಆಕೆ ಯಾಕೆ ಬರಲಿಲ್ಲವೆನ್ನುವುದಕ್ಕಿಂತ ಹೆಚ್ಚಾಗಿ ಆಕೆ ಬರಲಿಲ್ಲವೆಂಬ ಯೋಚನೆಯೇ ಬಲವಾಗಿ ನಿರಾಶೆಯೆನಿಸತೊಡಗಿತು. ಒಂದೆರಡು ನಿಮಿಷ ನಿಂತು ಆಮೇಲೆ ವಸತಿಗೃಹದ ಕಡೆಗೆ ಹೊರಡತಕ್ಕದ್ದೆಂದುಕೊಂಡು ನಿಂತ. ಐದು ನಿಮಿಷಗಳಾದರೂ ಸರೋಜಿನಿ ಬರಲಿಲ್ಲವಾದ್ದರಿಂದ ಕಾಲೇಜಿನೊಳಗಿನಿಂದ ಆಕೆ ಬರಬಹುದಾಗಿದ್ದ ದಾರಿಯ ಗುಂಟ ಹೊರಟ. ದಾರಿಯ ತಿರುವನ್ನು ದಾಟದಾಗಲೇ ದೂರದಲ್ಲಿ ಸರೋಜಿನಿ ಬರುತ್ತಿದ್ದುದು ಕಂಡಿತು. ಆಕೆಯನ್ನು ಪೀಡಿಸಲು ಒಳ್ಳೆಯ ಅವಕಾಶ ದೊರೆಯಿತೆಂದು ವಾಹನವನ್ನು ತಿರುವಿ ಮೊದಲ ಸ್ಥಳಕ್ಕೆ ಬಂದು ಸಮೀಪದಲ್ಲಿಯ ಒಂದು ದೊಡ್ಡ ಮರದ ಹಿಂಬದಿಯಲ್ಲಿ ಕಾಣದ ಹಾಗೆ ನಿಂತುಕೊಂಡ. ಸರೋಜಿನಿ ಬಂದು ಆಚೆ ಈಚೆ ನೋಡಿ ಸುತ್ತಾಡಿದಳು. ಮಾಧವ ಯಾಕೆ ಬರಲಿಲ್ಲವೆಂದು ದೊಡ್ಡ ಬೀದಿಯ ಕಡೆಗೆ ನಡೆದಳು. ಆಗ ಮಾತ್ರ ಮಾಧವನಿಗೆ ತಡೆಯದಾಗಿ ಬೆನ್ನು ಹಿಂದೆಯೇ ಬೈಸಿಕಲ್‌ನಿಂದ ತಟ್ಟನೆ ಇಳಿದು ಹೇಳಿದ :

"ನಾವು ಗೊತ್ತುಮಾಡಿದ್ದು ಈ ಗೇಟು. ಆ ಕಡೆಗೆ ಯಾತಕ್ಕೆ ನಡೆದಿದ್ದೀರಿ ?"

"ತಡಮಾಡಿ ಬರುವವರು ಯಾವ ಗೇಟನಿಂದಲೂ ಬರಬಹುದು ಎಂದು."

"ಹೊ ! ಹೊ ! ತಡಮಾಡಿ ಬಂದವರೇ ಈ ಮಾತನ್ನು ಹೇಳುತ್ತಿದ್ದಾರೆ, ಅಲ್ಲವೆ ?"

"ಹೇಳುತ್ತಿಲ್ಲ. ಕೇಳುತ್ತಿದ್ದಾರೆ."

"ಓ ! ಹಾಗಾದರೆ ಕೇಳುವವರು ಬಂದು ಎಷ್ಟು ಗಂಟೆಯಾಯಿತು ?"

"ಅರ್ಧಗಂಟೆ....!"

"ಪಾಪ! ಕಾಯ್ದು ಕಾಯ್ದು ಕಾಲು ನೋಯಿತ್ತಿರಬೇಕು, ಅಲ್ಲವೇ ?"

"ಕಾಲೇನಿಲ್ಲ. ಕಾಲಿಗಿಂತ ಹೆಚ್ಚಾಗಿ ಮನಸ್ಸು !"

"ಇಂಥ ಸುಳ್ಳು ಮಾತನಾಡುವವರನ್ನು ಕಂಡರೆ ನನಗಂತೂ...." ಎಂದು ಮಾಧವ ನಕ್ಕ.

"ಇಂಥ ತಡಮಾಡಿ ಬರುವವರನ್ನು ಕಂಡರೆ ನನಗಂತೂ...." ಎಂದು ಸರೋಜಿನಿ ಪ್ರತಿಯಾಗಿ ಅದೇ ನಗೆಯನ್ನು ಬೀರಿದಳು. ಈ ಮಾತಿನಾಟದಲ್ಲಿ ತಾನೇನೂ ಸೋಲುವವಳಲ್ಲ ಎಂದು ಹೇಳುವವಳಂತೆ.

"ಹಾಗಾದರೆ ಈಗ ತಡಮಾಡಿ ಬಂದವರು ಯಾರು ?"

"ಹಾಗಾದರೆ ಈಗ ಸುಳ್ಳು ಹೇಳುವವರು ಯಾರು ?"

"ಎರಡಕ್ಕೂ ಒಂದೇ ಉತ್ತರ. ನೀವೇ ಹೇಳಿ...."ಎಂದು ಮಾಧವ ತುಂಟು ನಗೆ ಹೀರಿದ.

"ಎರಡಕ್ಕೂ ಒಂದೇ ಉತ್ತರ. ಯಾಕೆಂದರೆ ಎರಡನ್ನು ಮಾಡಿದವರು ಒಬ್ಬರೆ !"

"ಹೌದು. ನಾನೆಲ್ಲಿಲ್ಲವೆಂದೆ? ಆದರೆ ಒಬ್ಬರು ಯಾರು ?"

"ತಡಮಾಡಿ ಬಂದುದನ್ನು ಮಾತಿನಿಂದ ಮರೆಯಿಸಬೇಕೆನ್ನುವವರು !"

"ಸಾಕು, ಸಾಕು. ಇಲ್ಲಿ ನಿಂತು ನಿಂತು ಸಾಕಾಗಿ ವಸತಿಗೃಹದ ಕಡೆಗೆ ಹೊರಟಿದ್ದೆ. ದೂರದಲ್ಲಿನೋಡಿ ತಿರುಗಿಬಂದು ಆ ಗಿಡದ ಹಿಂದೆಯೇ ನಿಂತಿದ್ದೆ."

"ನಿಜವಾಗಿಯೂ ?"

"ಎಂದರೇನು —ಆಣೆಯಿಟ್ಟು ಹೇಳಲಾ ?"

"ಆಣೆ ಬೇಡ ಗೀಣೆ ಬೇಡ. ನೀವು ಹೇಳಿದರೆ ಸಾಕು" ಎಂದು ಕಡೆಗಣ್ಣಿನ ನೋಟ ಬೀರಿದಳು.

"ನನ್ನ ಮಾತೆಂದರೆ ಅಷ್ಟು ವಿಶ್ವಾಸವೇ ?" ಎಂದು ಬೇಕಂತಲೇ ಕೇಳಿದ. ಸರೋಜಿನಿ ಮಾತನಾಡದೆ ಸೂಚ್ಯವಾಗಿ ಮಾಧವನನ್ನು ನೋಡಿದಳು. ಆ ನೋಟದಲ್ಲಿ ಮಾಧವನಿಗೆ ಬೇಕಾದ ಅರ್ಥ ದೊರೆಯಿತು. ತನ್ನ ಬಗೆಯಲ್ಲಿ ಅಭಿಮಾನವೂ ಎನಿಸಿತು.

ಮೊದಲ ಸಲ ಹೊರಟ ದಾರಿಯಲ್ಲಿಯೇ ನಡೆದಿದ್ದರು. ಪಶ್ಚಿಮದಲ್ಲಿಯ

ಮೋಡ ಇನ್ನೂ ಮೇಲಕ್ಕೆದ್ದಿತ್ತು. ಆಗಾಗ ಗುಡುಗುಟ್ಟುವತ್ತ ಲೂಇತ್ತು. ಬಲಗಡೆ ಯಲ್ಲಿಯ ಬಿಳಿ ಮೋಡಗಳು ನಿಧಾನವಾಗಿ ತನ್ನ ಸಗುವಿನ ನಿಲುವನ್ನು ತೊರೆದು ಕ್ಷಣಕ್ಷಣಕ್ಕೆ ಗಂಭೀರ ಸ್ವರೂಪವನ್ನು ತಳೆಯುತ್ತಿದ್ದವು. ನಡು ನಡುವೆ ಗಾಳಿಯ ಸೆಳಕೊಂದು ಜೋರಾಗಿ ಬಂದು, ಬೀದಿಗುಂಟ ಹರಡಿದ ಒಣ ಎಲೆಗಳನ್ನು ತೂರಿಕೊಂಡು, ತಳ್ಳಿಕೊಂಡು ಹೋಗುತ್ತಿತ್ತು.

"ಮಳೆ ಬರುವ ಹಾಗಿದೆ, ಇಲ್ಲಿಯೇ ಎಲ್ಲಾದರೂ ಕುಳಿತುಕೊಳ್ಳೋಣ" ಎಂದಳು ಸರೋಜಿನಿ. ಅವಳ ಮಾತಿಗೆ ಸರಿಯಾಗಿ ದೀರ್ಘವಾಗಿ ಗುಡುಗಾಟ ನಡೆಯಿತು ಗಗನದಲ್ಲಿ. ಮಾಧವ ಕುಳಿತುಕೊಳ್ಳಲಿಕ್ಕೆಂದು ಸ್ಥಳವೊಂದನ್ನು ಹುಡುಕತೊಡಗಿದ. ಸಮೀಪದಲ್ಲಿಯೇ ದೊಡ್ಡದಾದ ಆಲದಮರವೊಂದು ಕೈಚಾಚಿ ಕರೆಯುತ್ತಿರುವಂತೆ ನಿಂತಿತ್ತು. ಮಳೆ ಬಂದರೂ ಅದೊಂದು ಒಳ್ಳೆಯ ಆಶ್ರಯವೆನಿಸಿದ್ದರಿಂದ ಅದರ ಬುಡದಲ್ಲಿ ಹೋಗಿ ಕುಳಿತುಕೊಂಡರು. ಕುಳಿತುಕೊಳ್ಳುತ್ತಿರುವಾಗಲೇ ಮಾಧವನೆಂದ:

"ನೀವೆಲ್ಲಿ ಬರಲಿಕ್ಕಿಲ್ಲವೊ ಎಂದುಕೊಂಡಿದ್ದೆ...."

"ಬಾರದೆ ಏನು. ಬರುತ್ತೇನೆಂದು ಹೇಳಿದ್ದೆನಲ್ಲವೆ ?"

"ಹೇಳಿದರೆ ಏನಾಯಿತು? ಪರೀಕ್ಷೆ ಬೇರೆ ಮುಗಿದು ಹೋಗಿದೆ. ನಿಮ್ಮ ಗೆಳತಿಯರೆಲ್ಲರೂ ಇನ್ನೇನಾದರೂ ಕಾರ್ಯಕ್ರಮವನ್ನು ಹೂಡಿಕೊಂಡು ಕುಳಿತ್ತಿದ್ದರೆ ಯಾರಿಗೆ ಗೊತ್ತು ?"

"ಹೂಂ, ಅದೇನೋ ಸರಿ. ಆದರೆ ಎಲ್ಲರೂ ಊರಿಗೆ ಹೊರಡುವ ಸಿದ್ಧತೆ ಯಲ್ಲಿದ್ದಾರೆ. ನಾಳೆ ಬೆಳಗಿನ ರೈಲಿನಿಂದ ಹೊರಡಬೇಕು...."

"ನೀವೂ?"

"ಹುಂ...."

"ನಾಳೆಯೇ ಏಕೆ?"

"ಮತ್ತಿನ್ನೇನು ಮಾಡುವುದು? ಪರೀಕ್ಷೆಯಂತೂ ಮುಗಿಯಿತು."

"ಪರೀಕ್ಷೆ ಮುಗಿದರೂ...." ಎಂದು ಮಾಧವ ಅರ್ಧಕ್ಕೆಯೇ ತಡೆದ. 'ನಾನಿದ್ದೇನೆ. ನನ್ನನ್ನು ಬಿಟ್ಟು ಹೋಗುತ್ತೀರಾ?' ಎಂದು ಕೇಳುವಂತಿತ್ತು ಆತನ ದೃಷ್ಟಿ. ಸರೋಜಿನಿಗಾದರೂ ಊರಿಗೆ ಹೋಗುವ ವಿಷಯದಲ್ಲಿ ವಿಶೇಷ ಉತ್ಸಾಹವೇನೂ ಇರಲಿಲ್ಲ. ಆದರೆ ಇಲ್ಲಿ ಉಳಿದರೆ ಗೌಡ ಬೆನ್ನುಬಿಡುವಂತಿಲ್ಲ. ಇದನ್ನೆಲ್ಲವೂ ಮಾಧವನಿಗೆ ಹೇಳುವುದು ಹೇಗೆ ? ಅಂತೆಯೇ ಗೆಳತಿಯರ ನೆಪಹೂಡಿ ಹೇಳಿದಳು :

ಹೆಚ್ಚು ಕಡಿಮೆ ಗದುಗಿನ ಕಡೆಯವರು ಎಲ್ಲರೂ ನಾಳೆಗೆ ಹೊರಡುತ್ತಾರೆ. ನಾನೊಬ್ಬಳೇ ಇಲ್ಲಿ ಉಳಿಯುತ್ತೇನೆಂದರೆ ಮತ್ತೆ ಮಾತಿಗೊಂದು ಹಾದಿ, ಅವರೆಲ್ಲರಿಗೂ...."

ಮಾಧವನಿಗೆ ತಟ್ಟನೆ ಏನೋ ನೆನಪಾದಂತಾಗಿ ಕೇಳಬೇಕೊ ಬಾರದೊ ಎಂದು ಸುಮ್ಮನಾದ. ಕಳೆದ ನಾಲ್ಕೈದು ದಿವಸಗಳಲ್ಲಿ ಸರೋಜಿನಿಯನ್ನು ಕೇಳ ಬೇಕೆಂದುಕೊಂಡಿದ್ದ. ಕೇಳುವ ಕುತೂಹಲವನ್ನು ತಡೆಯದಾಗದೆ ಕೇಳಿದ :

"ಆ ದಿನ ಸಾಯಂಕಾಲ ನಮಗೆ ಇದಿರಾಗಿ ಬಂದಿದ್ದವರು—ಯಾರು ಅವರು ?"

ಸರೋಜಿನಿಯ ಮೈ ಜುಮ್ಮೆಂದಿತು. ಎದೆ ಬಡಿದುಕೊಳ್ಳಲಾರಂಭಿಸಿತು. ಯಾಕೆ ? ಯಾರು ಬಲ್ಲರು—ತನ್ನ ದೈವಪರೀಕ್ಷೆಯ ಕಾಲವೇ ಸಮೀಪಿಸಿತು ಎನಿಸಿತು ಸರೋಜಿನಿಗೆ. ಆಕೆ ಸುಮ್ಮನಾದುದನ್ನು ನೋಡಿ ಮಾಧವನೆಂದ :

"ನಿಮ್ಮ ತಾಯಿಯ ಪರಿಚಿತರು ಎಂದು ಹೇಳಿದ್ದಿರಲ್ಲವೇ ಆ ದಿನ....?"

"ಹುಂ...." ಎಂದು ಸುಮ್ಮನಾದಳು.

"ನಿಮ್ಮೂರಿನವರೇ ಅವರು ?"

"ಹುಂ...."

"ಇದೇ ಊರನಲ್ಲಿ ನಾನು ಅವರನ್ನು ಎಷ್ಟೋ ಬಾರಿ ನೋಡಿರಬೇಕು. ಯಾತಕ್ಕೆ ಬಂದಿದ್ದರು ?" ಏನು ಹೇಳಬೇಕು ತಿಳಿಯದಾಯಿತು. ಏಟಿನ ಮೇಲೆ ಏಟು ಬೀಳುತ್ತಿರುವಂತೆನಿಸುತ್ತಿತ್ತು. ತನ್ನ ಪ್ರಶ್ನೆಗಳೆಲ್ಲವೂ ಆಕೆಗೆ ಬೇಡವಾದ ವಿಷಯಕ್ಕೆ ಸಂಬಂಧಪಟ್ಟವುಗಳಾಗಿದ್ದವೆಂಬುದನ್ನು ತಿಳಿಯಲು ಮಾಧವನಿಗೆ ವೇಳೆ ಹಿಡಿಯಲಿಲ್ಲ. ಸರೋಜಿನಿಯ ನೊಂದ ಮುಖವನ್ನೇ ನೋಡುತ್ತ ಒಂದರೆಕ್ಷಣ ಸುಮ್ಮನಾದ. ಸರೋಜಿನಿ ಇನ್ನೆಲ್ಲಿಯೋ ನೋಡಿ ಉಕ್ಕಿಬರುತ್ತಿದ್ದ ಮನಸ್ತಾಪವನ್ನು ತಡೆಹಿಡಿಯಲೆತ್ನಿಸುತ್ತಿದ್ದಳು. ಮಾಧವ ಎಂದ:

"ಆಯ್ ಆಮ್ ಸಾರಿ. ನಾನು ಕೇಳಬಾರದಿತ್ತೇನೋ. ನನ್ನ ಮಾತಿನಿಂದ ನಿಮಗೆ ನೋವಾಯಿತು." ಸರೋಜಿನಿ ಸುಮ್ಮನಿದ್ದಳು. ಹತ್ತಿರದಲ್ಲಿ ಬಿದ್ದ ಕಡ್ಡಿಯನ್ನೆತ್ತಿಕೊಂಡು ಅದರಿಂದ ನೆಲವನ್ನು ಕೆರೆಯುತ್ತ ಹೇಳಿದಳು :

"ಕೇಳಬಹುದಿತ್ತು ; ಆದರೆ ಹೇಳಲು ನನಗೆ ಬಾಯಿಲ್ಲ...." ಎಂದಳು. ಕಣ್ಣುಗಳು ನೀರು ತುಂಬಿದ್ದವು. ಆಕೆಯ ಇಡೀ ಬದುಕಿನ ದುಃಖವೇ ಒತ್ತರಿಸಿ ಬಂದು ಅವಳ ಬಾಯಿ ಕಟ್ಟಿತು.

"ಹಾಗಾದರೆ ಹೇಳಬಹುದು. ನನ್ನಿಂದೇನಾದರೂ ಉಪಯೋಗವಾಗುವಂತಿದ್ದರೆ...." ಸರೋಜಿನಿಗೆ ಮಾತನ್ನು ಮುಂದುವರಿಸುವುದೇ ಕಷ್ಟವಾಗಿತ್ತು. ಆಕೆಯ ಆ ಕಷ್ಟದ ಸ್ಥಿತಿಯನ್ನು ನೋಡಿ ಮಾಧವನಲ್ಲಿಯ ಕನಿಕರ—ಸಹಾನುಭೂತಿಗಳು ಆತನ ಕುತೂಹಲವನ್ನು ಕೆರಳಿಸುತ್ತಿದ್ದವು. ಅವನಂದ :

"ಏನು ವಿಷಯ?"....ಹೇಳಕೂಡದೆ ?"

ಸರೋಜಿನಿ ಕಣ್ಣಿಗೆ ಕರವಸ್ತ್ರವನ್ನಿಟ್ಟು ಬಿಕ್ಕಳಿಸತೊಡಗಿದಳು. ಮಾಧವನಿಗೆ ಏನು ಮಾಡಬೇಕೆಂಬುದೇ ತೋಚದಾಯಿತು. ಅರ್ಧನಿಮಿಷ ಸುಮ್ಮನಿದ್ದ. ಆದರೆ ಆಕೆಯ ದುಃಖ ಕಡಿಮೆಯಾಗುವ ಲಕ್ಷಣ ಕಾಣಲಿಲ್ಲ. "ಏನು? ನನ್ನ ಮುಂದೆ ಹೇಳಬಾರದೆ ?" ಎಂದು ಸಮೀಪಕ್ಕೆ ಸರಿದ. ಸರೋಜಿನಿಗೆ ಮಾತೇ ಇಲ್ಲವಾಗಿತ್ತು. ಮಾಧವನ ಸಹಾನುಭೂತಿ ಆಕೆಯ ದುಃಖವನ್ನು ಇಮ್ಮಡಿಸುತ್ತಿತ್ತು.

"ಹೀಗೆ ಸುಮ್ಮನೆ ಮನಸ್ತಾಪಮಾಡಿಕೊಂಡರೆ ನಾನೇನು ಮಾಡಬೇಕು ? ನನ್ನ ಮುಂದೆ ಹೇಳಲೂ ಸಂಕೋಚವೇ?" ಎಂದು ಆಕೆಯ ಬೆನ್ನುತಟ್ಟಿದ.

ಮಾಧವನ ಸ್ಪರ್ಶ ಸರೋಜಿನಿಗೆ ಮಿಂಚಿನಂತೆ ಭಾಸವಾಯಿತಾದರೂ ಇನ್ನೆಲ್ಲಿಯೂ ಸಿಗದ ಸಮಾಧಾನ ಆಕೆಗೆ ಅದರಲ್ಲಿ ಸಿಕ್ಕಿತು. ಮಾಧವನಂತೂ ಆ ಹೊಸ ಅನುಭವದ ಮೂಲಕ ಅರೆಮರ್ಧ ಎಚ್ಚರವಿಲ್ಲದವರಂತೆಯೇ ಇದ್ದ. ಸರೋಜಿನಿಯ ಅವ್ಯಕ್ತ ದುಃಖ ಅವನ ಚಿತ್ತವನ್ನೆಲ್ಲ ವ್ಯಾಪಿಸಿಕೊಂಡಿತ್ತು. ಆ ದುಃಖವು ತನಗೆ ತಿಳಿಯಬೇಕು-ತಿಳಿಯಬೇಕು—ಎಂದು ಮತ್ತೆ ಮತ್ತೆ ಆಕೆಯನ್ನು ಕೇಳಿದ. ಒಂದೆರಡು ನಿಮಿಷಗಳನಂತರ ಸರೋಜಿನಿ ಕಣ್ಣೊರಸಿಕೊಂಡು ನಿಧಾನವಾಗಿ ಹೇಳಿದಳು :

"ಆ ರಾಕ್ಷಸ ಈಗ ಒಂದು ವರ್ಷದಿಂದ ನನ್ನ ಬೆನ್ನಕಾಯುತ್ತಿದ್ದಾನೆ."

"ಮದುವೆಯಾಗಬೇಕೆಂದೆ ?"

"ಆತನಿಗೆ ಮದುವೆಯಾಗಿದೆ...."

"ಹಾಗಾದರೆ ಆತನಿಗೆ ಚೆನ್ನಾಗಿ ಬುದ್ಧಿ ಕಲಿಸಬಾರದೆ ?"

"ಅದನ್ನೇ ಮಾಡಬೇಕಾಗಿದೆ. ಆದರೆ ಹೇಗೆ ?"

"ಹೇಗೇನು ? ಮನೆಯಲ್ಲಿ ತಿಳಿಸಿಬಿಟ್ಟರೆ...."

"ಅದೇ ಸಾಧವಿಲ್ಲವಾಗಿದೆ. ಅಂತೆಯೇ ಈ ಗೋಳಾಟ...." ಆಕೆಯ ಕಣ್ಣುಗಳು ಮತ್ತೆ ನೀರು ತುಂಬಿದವು. ಮಾಧವನಿಗೆ ಸರೋಜಿನಿಯ ಮಾತಿನ ಅರ್ಥವಾಗಲಿಲ್ಲ. ಅಂತೆಯೇ ಕೇಳಿದ ;

"ಮನೆಯವರಿಗೆ ಈ ವಿಷಯ ಗೊತ್ತಿದೆಯೋ ?"

"ಗೊತ್ತಷ್ಟೇ ಏಕೆ? ನನ್ನ ತಾಯಿಯ ಉತ್ತೇಜನವಿದೆ ಅವನಿಗೆ !"

"ನನಗೇನೂ ಅರ್ಥವಾಗುವುದಿಲ್ಲ. ಅದು ಹೇಗೆ ಸಾಧ್ಯ ?"

ಸರೋಜಿನಿ ಮತ್ತೆ ಸುಮ್ಮನಾದಳು, ಮಾಧವ ಬೆನ್ನ ಮೇಲೆ ಕೈ ಇಟ್ಟು ಮತ್ತೆ ಕೇಳಿದ :

"ತೀರ ವಿಚಿತ್ರ ಇದು! ನಿಮ್ಮ ತಾಯಿ ಹೀಗೆ ಹೇಗೆ ಮಾಡುತ್ತಾರೆ ?"

"ಆಕೆಗೆ ಅದೇ ಸರಿ ಕಾಣುತ್ತದೆ. ನಾನೂ ತನ್ನ ವೃತ್ತಿಯಲ್ಲಿಯೇ ನಡೆಯಬೇಕು ಎಂಬುದೇ ಆಕೆಯ ಮನಸ್ಸಿನಲ್ಲಿದ್ದದ್ದು...." ಎಂದು ಅರ್ಧಕ್ಕೆ ತಡೆದು ಸುಮ್ಮನಾದಳು.

ಮಾಧವನ ಕೈ ತಟ್ಟನೆ ಸರಿಯಿತು. ಆತನ ರಕ್ತ ರೋಮಗಳಲ್ಲಿ ಒಂದುಗೂಡಿ ನಿಂತ ಸಾಮಾಜಿಕ ಬುದ್ಧಿ ಒಳಗಿನಿಂದ ಅರಚಿದಂತಾಯಿತು, "ಈಕೆ ವೇಶ್ಯೆ! ಸರಿ, ಈಕೆಯಿಂದ ದೂರ ಸರಿ !" ಎಂದು. ಮಾನವತೆ ವಿಹ್ವಲವಾಗಿ ದಾರಿಗಾಣದೆ ದೂರ ಸರಿಯಲಾಗದೆ ಯೋಚನೆಗೀಡಾಯಿತು. ಸಾಮಾಜಿಕ ಬುದ್ಧಿಗೂ ಮಾನವತೆಗೂ ಸೆಣಸಾಟ ನಡೆಯಿತು.

"ವೇಶ್ಯೆಯಾದರೇನು ? ಆಕೆ ಮನುಷ್ಯಳಲ್ಲವೆ? ಹೆಂಗಸಲ್ಲವೆ ?" ಎಂದಿತು ಮಾನವತೆ.

"ಆಕೆ ಹೆಂಗಸಾಗಿರಬಹುದು. ಮಾನವ ಪ್ರಾಣಿಯೂ ಅಹುದು. ಆದರೆ ಆಕೆಯ ಸಹವಾಸ ಪಾಪ! ಆ ಪಾಪದಿಂದ ಕಲಂಕಿತನಾಗಿ ನೀನು ಸಮಾಜದಲ್ಲಿ ಸುಖವಾಗಿ ಬದುಕಿರಲಾರೆ."

"ನಿಸ್ಸಂದೇಹವಾಗಿಯೂ ಸುಖವಾಗಿ ಬದುಕಬಹುದು."

"ಸಾಧ್ಯವಿಲ್ಲ...."

"ಸಾಧ್ಯವಿಲ್ಲವೇಕೆ ? ಆಕೆಗೂ ಸುಖವಾಗಿ ಬದುಕಬೇಕಾಗಿದೆ. ಅದಕ್ಕೆ ಆಕೆಯ ಕುಲಗೋತ್ರಗಳದ್ದೇನು ಸಂಬಂಧ?"

"ಏನು ಸಂಬಂಧ ? ಇಂದಿನ ಪ್ರಪಂಚ ಇಂಥ ಯೋಚನೆಗಳ ಮೇಲೆ ನಿಂತಿದೆ. ಅದು ಸರಿಯೆಂದು ನಾನು ಹೇಳುವುದಿಲ್ಲ. ಆದರೆ ಸಮಾಜದಲ್ಲಿ ಸರಿಯಲ್ಲದ್ದೇ ಸರಿಯೆನಿಸುತ್ತಿದ್ದಾಗ ಸರಿಯಾಗಿ ನಡೆಯಬೇಕೆನ್ನುವವನೇ ಸಂಕಟಕ್ಕೀಡಾಗುತ್ತಾನೆ !"

ಮಾಧವನಲ್ಲಿಯ ಮಾನವತೆಗೆ ಯೋಚನೆಯಾಯಿತು. ಆ ಯೋಚನೆಯಲ್ಲಿಯೇ ಕೇಳಿತು :

"ನಿನ್ನ ಮಾತು ಸರಿ. ಆದರೆ ಮಾನವನ ಗತಿಯೇನು?"

"ಪ್ರವಾಹದ ವಿರುದ್ಧ ಹೋರಟವನಿಗೆ ಏನು ಗತಿ? ಅದೇ ಗತಿ ಇಂಥ ಮನುಷ್ಯನಿಗೆ."

"ಸರಿ, ಎಂದರೆ ಯೋಚನೆ ಮಾಡುವುದೇ ತಪ್ಪಾಯಿತು ಹಾಗಾದರೆ."

"ಒಬ್ಬನ ಯೋಚನೆ ಹತ್ತು ಜನರಿಗೆ ಬೇಡವಾದಾಗ ಅದು ಎಷ್ಟು ಒಳ್ಳೆಯದಾದರೂ ಆದರಿಂದ ಅವನಿಗೆ ತೊಂದರೆ...."

"ಹಾಗಾದರೆ ಈಕೆ ಪ್ರವಾಹದ ವಿರುದ್ಧ ಹೋರಾಟ ನಡೆಸದೆ ಪರಂಪರೆಯ ಪಾಪಕೂಪದಲ್ಲಿಯೇ ನರಳಬೇಕೆ?"

"ನರಳಬೇಕು ಎಂದು ನಾನು ಹೇಳುವುದಿಲ್ಲ. ನರಳಬೇಕಾಗುವುದು—ಎಂಬುದು ವಾಸ್ತವ ಸ್ಥಿತಿ."

"ಇದಕ್ಕೆ ಹೊಣೆ ಯಾರು?"

"ಎಲ್ಲರೂ....ವೇಶ್ಯಾವೃತ್ತಿಯನ್ನು ಶತಮಾನಗಳ ಆಚೆಯಿಂದ ಬೆಳೆಸಿಕೊಂಡು ಉಳಿಯುವಂತೆ ಮಾಡಿದವರೆಲ್ಲರೂ ಹೊಣೆಗಾರರು...."

"ಯಾರ ಪಾಪಕ್ಕೆ ಯಾರಿಗೆ ಪ್ರಾಯಶ್ಚಿತ್ತ?"

"ತಂದೆತಾಯಿಗಳ ಪಾಪಕ್ಕೆ ಮಕ್ಕಳಿಗೆ ಪ್ರಾಯಶ್ಚಿತ್ತ....ಮೊಮ್ಮಕ್ಕಳು ಮರಿಮಕ್ಕಳಿಗೆ ಪ್ರಾಯಶ್ಚಿತ್ತ; ಪೂರ್ವಜರ ಪಾಪ ಉತ್ತರೋತ್ತರ ಶಾಪವಾಗಿ ಪ್ರಾಯಶ್ಚಿತ್ತಕ್ಕಾಗಿ ಕಾದು ನಿಂತಿದೆ!"

"ಹಾಗಾದರೆ ಈಕೆ ಗುಣವಂತೆಯಾದರೂ ಗುಣಹೀನೆಯೆಂದೆನಿಸಿಕೊಂಡು, ಮನಸ್ಸಿಲ್ಲದಿದ್ದರೂ ದೇಹ ವಿಕ್ರಯಿಸಿ ಯಾವ ಆಸೆಯಿಲ್ಲದೆಯೇ ಬಾಳಬೇಕೆ?"

"ಈಕೆ ದೇಹವಿಕ್ರಯ ಮಾಡಬೇಕೆಂಬ ಹಟ ನನ್ನದಲ್ಲ. ಸಮಾಜದಲ್ಲಿ ಮಾತ್ರ ಈಕೆಗೆ ಈಕೆಯ ತಾಯಿಯಕ್ಕಿಂತಲೂ ಹೆಚ್ಚಿನ ಯಾವ ಸ್ಥಾನಮಾನವೂ ದೊರೆಯಲಾರದು!"

"ಇಂದಿನ ವಿಶಾಲ ಜೀವನದಲ್ಲಿ ಈ ತೆರದ ಕಟ್ಟಳೆ ಸಲ್ಲದು. ಸಮಾಜ ಬಂಧ ಮಾನವತೆಯ ದೃಷ್ಟಿಯಿಂದ ಅಗತ್ಯವಾಗಿ ಸಡಿಲಾಗಬೇಕಾಗಿದೆ."

ಸಮಾಜಬುದ್ಧಿ ಹೀಯಾಳಿಸಿ ಉತ್ತರ ಹೇಳಿತು :

"ಕಣ್ಣುಮುಚ್ಚಿಕೊಂಡು ಕಲ್ಪನೆಯ ರಾಜ್ಯದಲ್ಲಿ ಕನಸು ಕಾಣುವವನಾಗಿ ಕಾಣುತ್ತೀ ನೀನು! ಸಡಿಲಾಗಬೇಕು ಎಂದು ನೀನು ಹೇಳುತ್ತಿರುವ ಸಮಾಜ ಬಂಧ ಇಂದು ಕಳಚಿ ಬಿದ್ದಿದೆ. ಸಮಾಜವೆನ್ನುವುದೇ ಇಲ್ಲದಾಗಿದೆ!"

"ವಾಸ್ತವಜೀವನದಲ್ಲಿ ಸಮಾಜ ಇಂದು ಸಂಕುಚಿತ ಬುದ್ಧಿಯ ಭೂತ

ನಾಗಿದೆ. ಆ ಭೂತವೇ ವಿಚಾರಜೀವನದಲ್ಲಿ ಮನೆಮಾಡಿಕೊಂಡು ಮಾನವತಿ ಯನ್ನು ಮಣ್ಣುಗೂಡಿಸುತ್ತಿದೆ."

"ಇರಬಹುದು. ಆದರ ಹೊಣೆಯೂ ನಿಮ್ಮೆಲ್ಲರ ಮೇಲೆಯೇ...."

"ಹಾಗಾದರೆ ಇಷ್ಟೊಂದು ಪರಂಪರೆಯನ್ನು ಕಾಯ್ದುಕೊಂಡು ಬದುಕನ್ನು ಬಿಗಿದಿಡಬೇಕೆನ್ನುವ ನೀನು ಯಾರು ? ನಾನು ಸಮಾಜ ಎಂದರೆ ನೀನು ಮಾನವತಿ. ನೀನಿಲ್ಲದೆ ನನಗೆಲ್ಲಿಯ ಅಸ್ತಿತ್ವ? ನೀನು ರೂಪಿಸಿದ ಹಾಗೆ ಇರುವವ ನಾನು...."

"ಅದೇನೇ ಇರಲಿ. ಈಕೆ ಸುಖವಾಗಿರಬೇಕು. ಈಕೆಯಂಥ ಸಂಕಟಕ್ಕೆ ಯಾರೂ ಗುರಿಯಾಗಬಾರದು...."

"ಆಗಬಾರದಿರಬಹುದು. ನಿನ್ನಂತೆ ಎಲ್ಲರೂ ಯೋಚಿಸಿದರೆ ಗುರಿಯಾಗು ವುದೂ ಇಲ್ಲ."

"ನನ್ನಂತೆ ಎಲ್ಲರೂ.... ನನ್ನಂತೆ ಎಲ್ಲರೂ.... ಸಾಧ್ಯವೆ? ಎಂದಿಗಾದರೂ ಸಾಧ್ಯವೆ ?" ಎಂದು ಕನವರಿಸುತ್ತ ಮಾಧವನಲ್ಲಿಯ ಮಾನವತೆ ಹಿಂದಕ್ಕೆ ಸರಿಯಿತು. ನಿರಾಶೆ ಮಿಂಚಿನಂತೆ ಹೃದಯವನ್ನಿರಿಯಿತು. ಆ ಇರಿತದ ನೋವಿನಿಂದೇನೋ ಎನ್ನುವಂತೆ ಮಾಧವ ಸರೋಜಿನಿಯ ಬೆನ್ನ ಮೇಲಿನ ಕೈಯನ್ನು ತಟ್ಟನೆ ಸರಿಸಿಕೊಂಡಿದ್ದ.

ಈ ಯೋಚನೆಗಳಲ್ಲಿಯೇ ತೊಡಗಿದ ಮಾಧವನ ಮೂಕವೃತ್ತಿಯನ್ನು ನೋಡಿ ಸರೋಜನಿಗೆ ಸಂಕಟವಾಯಿತು. ತನ್ನ ನಿಜಸ್ಥಿತಿಯನ್ನು ತಿಳಿದೊಡನೆ ಈತನೂ ಯೋಚನೆಗೀಡಾಗಿ ಸಮಾಧಾನಪಡಿಸಲೆಂದು ಬೆನ್ನ ಮೇಲಿಟ್ಟ ಕೈಯನ್ನು ಹಿಂದಕ್ಕೆ ತೆಗೆದುಕೊಂಡನೇ ಎಂದು ಕಳವಳಪಡುವಂತಾದಳು. ಮಾಧವನ ಸಹಾನುಭೂತಿಯ ಮೇಲೆ ಕಟ್ಟಿದ ಮನೆ ಕಳಚಿ ಬೀಳುವಂತಾ ಯಿತು. ಎಲ್ಲಿಯೂ ಇಲ್ಲದ ಅಸಹಾಯತೆ ಹೃದಯದಲ್ಲಿ ಮನೆಮಾಡಿಕೊಂಡು ನಿಂತಂತಾಗಿ ತಾನಿನ್ನು ಬದುಕಿಯಾದರೂ ಏನು ಎನ್ನುವಂತಾಯಿತು.

ಮಾಧವನಿಗೆ ಪಾಠೇ ತೋಚದಾಯಿತು. ಹೂವು ಎಂದು ಮುಟ್ಟ ಹೋದದ್ದು ಕೆಂಡದಂತೆ ಭಾಸವಾಯಿತು. ಆದರೆ ನಾಲ್ಕಾರು ಸಂದರ್ಭ ಗಳಲ್ಲಿ ಸರೋಜಿನಿಯ ಮನಸ್ಸನ್ನು, ಹೃದಯವನ್ನು ಬಲ್ಲ ಮಾಧವ ಆಕೆ ಬೆಂಕಿಯಾಗಲಾರಳೆಂದು ಸಮಾಧಾನ ಹೇಳಿಕೊಂಡ. ಆಕೆ ವೇಶ್ಯೆಯ ಮಗಳು, ವೇಶ್ಯೆಯಲ್ಲ ! ಆಕೆ ವೇಶ್ಯೆಯ ಮಗಳೆಂದಮಾತ್ರಕ್ಕೆ ತ್ಯಾಜ್ಯಳೆಂಬ ಭಾವನೆ ಯನ್ನು ಉಳಿದವರಂತೆ ತಾನು ಬೆಳೆಯಿಸಿಕೊಳ್ಳುವುದಾದರೆ ತನ್ನ ವಿದ್ಯೆಯ,

ವಿವೇಕದ ಉಪಯೋಗವೇನು ಎಂದು ಕೇಳಿಕೊಂಡು ಸಮಾಜದ ಒಂದು ಅನ್ಯಾಯಕ್ಕೆ ಬಲಿಯಾಗಲಿಕ್ಕೆ ಈಕೆಯನ್ನು ಉಳಿಸಿಕೊಳ್ಳುವುದು ತನ್ನಿಂದ ಸಾಧ್ಯವಾಗಬಹುದೇ ಎಂದ. ಅಲ್ಲದೆ ಆಗಲೇ ಈಕೆ ತನ್ನಲ್ಲಿ ವಿಶ್ವಾಸವನ್ನಿಟ್ಟು ತನ್ನಿಂದ ಸಹಾಯಸಹಾನುಭೂತಿಗಳನ್ನು ಅಪೇಕ್ಷಿಸುತ್ತಿರಬಹುದೆಂಬುದರಲ್ಲಿ ಸಂದೇಹವೇ ಇರಲಿಲ್ಲ. ತನ್ನ ಮಾತಿನ ಸಲಿಗೆಯಿಂದ ಬೆಳೆದ ಸಹವಾಸದ ಮೂಲಕ ಆಕೆಗೆ ತಾನು ಅಪ್ರತ್ಯಕ್ಷವಾಗಿ ಉತ್ತೇಜನ ಕೊಟ್ಟು ಈಗ ಒಮ್ಮೆಲೆ ಆಕೆಯಿಂದ ದೂರವಾಗುವುದೆಂದರೆ ಎಂಥ ಹೇಡಿತನ ಆದರ್ಶದ ಬಗೆಯಲ್ಲಿ ಎಂಥ ಅವಿಶ್ವಾಸ ಎಂದೆನಿಸಿತು. ಆದರೆ ಆಕೆಗೆ ಸಹಾಯಮಾಡುವುದೆಂದರೆ ಎಂಥ ದೊಡ್ಡ ಹೊಣೆ, ಎಂಬುದರ ಅರಿವು ಬಂದಾಗ ಮನಸ್ಸು ಕುಗ್ಗಿ ನಿರಾಶೆಗೊಳ್ಳುತ್ತಿತ್ತು. ಈ ವಿಚಾರದ ಇಬ್ಬಣದಲ್ಲಿ ಮಾತು ಸೋತು, ಉಕ್ಕಿ ಬರುತ್ತಿದ್ದ ಯೋಚನೆಗಳ ಮರೆಯಲ್ಲಿ ಮುದುಡಿಕೊಳ್ಳುತ್ತಿತ್ತು.

ಐದು ನಿಮಿಷಗಳಾದರೂ ಇಬ್ಬರಿಗೂ ಮಾತು ಬರಲಿಲ್ಲ. ಸರೋಜಿನಿ ಮಾಧವನ ಮುಖವನ್ನು ನೋಡುತ್ತಿದ್ದಳು. ಆಕೆಯ ಕಣ್ಣುಗಳಲ್ಲಿಯ ಅಸಹಾಯತೆ ಮಾಧವನ ಹೃದಯವನ್ನು ಕೊರೆಯಿತು. 'ನಾನೊಬ್ಬ ಅನಾಥೆ. ನೀವು ಬದುಕಿಸಿದರೆ ಬದುಕುವವಳು. ಇಲ್ಲವಾದರೆ ಈ ಬದುಕ ನನ್ನ ಪಾಲಿಗೆ ನರಕ!' ಎನ್ನುವಂತಿತ್ತು ಆಕೆಯ ನೋಟ. ಕೊನೆಗೆ ಮಾಧವನೆಂದ :

"ನಿಮ್ಮನ್ನು ನೋಡಿದಾಗಲೆಲ್ಲ ನನಗೆ ಅದೇಕೊ ಅನಿಸುತ್ತಿತ್ತು— ನಿಮ್ಮನ್ನು ಯಾವುದೋ ಗುಪ್ತ ಚಿಂತೆ ಕಾಡುತ್ತಿದೆ ಎಂದು....ಇಂದಿಗೆ ನನಗೆ ಅರ್ಥವಾಯಿತು...."

"ಎಂದಿಗೋ ನಿಮ್ಮ ಮುಂದೆ ಹೇಳಬೇಕೆಂದಿದ್ದೆ. ಆದರೆ ಧೈರ್ಯವಾಗಿರಲಿಲ್ಲ. ಈಗ ಹೇಳಬೇಕಾಯಿತು...."

"ಬಹಳ ಹೇಳಬೇಕಾಗಿದೆ ಎನ್ನುತ್ತಿದ್ದದ್ದು ಇದೇ ವಿಷಯವೇ?"

"ಹೌದು. ಆದರೆ ಹೇಳುವುದು ಹೇಗೆ ತಿಳಿಯಲಿಲ್ಲ. ಅಲ್ಲದೆ...."

"ಅಲ್ಲದೆ ಏನು?"

"ಹೇಳಿದರೆ ನೀವೇನೆನ್ನುತ್ತಿರೊ ಎಂದು ಹೆದರಿಕೆ. ಇದನ್ನೆಲ್ಲ ಕೇಳಿ...."

ಸರೋಜನಿಗೆ ಮಾತು ತಡೆಯಿತು. ಆದರೆ ಮಾಧವನಿಗೆ ಆಕೆಯ ಭಾವ ಸ್ಪಷ್ಟವಾಗಿತ್ತು. ಆತ ಕೇಳಿದ :

"ನಿಮ್ಮಿಂದ ದೂರವಾಗಿಬಿಡುತ್ತೇನೆಂದು ಹೆದರಿಕೆಯೇ ?"

"ಹುಂ...." ಎಂದಳು ಸರೋಜಿನಿ, ಅನುಮಾನಿಸುತ್ತ.

"ನನ್ನಲ್ಲಿ ಅಷ್ಟೂ ವಿಶ್ವಾಸವಿಲ್ಲವೆ ?"

"ವಿಶ್ವಾಸವಿದೆ, ಆದರೆ ನನ್ನ ವಿಶ್ವಾಸದಿಂದೇನಾಗಬೇಕು ?"

"ಏನಾಗಬೇಕೆ ?"

"ಎಲ್ಲರಂತೆ ನೀವಾದರೂ ನಾನು ವೇಶ್ಯೆಯ ಮಗಳೆಂದು ತಿಳಿದ ಕೂಡಲೆ ಹಿಂತೆಗೆದರೆ ಹೇಗೆ ಎಂಬ ಹೆದರಿಕೆಯಿಂದ ಸುಮ್ಮನಿರುತ್ತಿದ್ದೆ...."

"ಎಂದಿಲ್ಲೊಂದು ದಿನ ಅದು ನನಗೆ ತಿಳಿಯದೆ ಇರುತ್ತಿತ್ತೆ ?"

"ತಿಳಿಯಬಹುದಿತ್ತು. ಆದರೆ ನನಗೆ ಮಾತ್ರ ಯಾವಾಗಲೂ ಹೆದರಿಕೆ. ಅಂತೆಯೇ ಎಷ್ಟೋ ಸಲ ನಿಮ್ಮಿಂದ ದೂರವಾಗಿದ್ದುಕೊಂಡು ತೊಂದರೆ ತಪ್ಪಿಸಬೇಕು ಎಂದುಕೊಂಡೆ. ಆದರೆ ಆಗಲಿಲ್ಲ."

"ನೀನು ಹಾಗೆ ಮಾಡಿದ್ದರೆಯೇ ತೊಂದರೆಯಾಗುತ್ತಿತ್ತು! ನಿನ್ನ ಸಹವಾಸದಲ್ಲಿ ನನಗೆ ಸಿಗುತ್ತಿದ್ದ ಮನಸ್ಸಿನ ಸಮಾಧಾನ ಎಷ್ಟು ಎಂಬುದು ನಿನಗೆ ಹೇಗೆ ತಿಳಿಯಬೇಕು ?"

ತನ್ನ ಬದುಕಿನ ಕಷ್ಟವನ್ನೆಲ್ಲ ಒಂದುಗೂಡಿ ಹೃದಯವನ್ನು ಹಿಸುಕಿ ಮಾತನ್ನು ಹೊರಗೆಡುವುತ್ತಿದ್ದಂತೆ ಮಾಧವ ಮಾತನಾಡುತ್ತಿದ್ದ. ಆ ಆವೇಗ ದಲ್ಲಿ ತಾನು ಸರೋಜಿನಿಯನ್ನು ಒಂಟಿ ಹೆಸರಿನಿಂದ ಕರೆಯುತ್ತಿದ್ದೇನೆಂಬುದರ ಅರಿವೂ ಆತನಿಗೆ ಉಳಿದಿರಲಿಲ್ಲ. ಮಾಧವನೆಂದ :

"ಒಬ್ಬರಿಗೆ ಒಂದೊಂದು. ಹುಟ್ಟಿದಾಗಿನಿಂದ ಮನುಷ್ಯ ತೊಂದರೆಯ ಹೊರೆಯನ್ನು ಕಟ್ಟಿಕೊಂಡೇ ಬರುತ್ತಾನೊ ಏನೊ ?....ಏನಿದ್ದರೂ ನೀನು ಭೆಟ್ಟಿಯಾದಾಗ ನಾನು ಎಲ್ಲವನ್ನೂ ಮರೆಯುತ್ತೇನೆ....ನಾಳೆ ನೀನು ಊರಿಗೆ ಹೊರಟದ್ದನ್ನು ನೆನೆದಾಗಲೆಲ್ಲ ಇನ್ನುಮುಂದೆ ಹೇಗೆ ಎಂದು ಈಗ ಮೂರು ದಿವಸಗಳಿಂದಲೂ ಯೋಚಿಸುತ್ತಿದ್ದೇನೆ...."

ಮಾಧವನ ಮಾತಿಗಿಂತ ಆತನ ಮಾತಿನ ರೀತಿ ಸರೋಜಿನಿಯ ಹೃದಯ ವನ್ನು ತಟ್ಟಿತ್ತು. ಆಕೆಗೆ ಬೇಕಾದ ಹೃದಯದ ಆಶ್ವಾಸನ ಆತನ ರೀತಿಯಲ್ಲಿ ದೊರಕಿ ಆಕೆಯಲ್ಲಿಯ ದುಃಖದ ಕಾವನ್ನು ಆವರಿಸಿತ್ತು, ತನಗೆ ಆತನ ಸಹಾಯ ಬೇಕಾದಂತೆ ತನ್ನ ಸಹಾನುಭೂತಿ ಆತನಿಗೆ ಬೇಕಾಗಿತ್ತು ಎಂಬ ಭಾವನೆ ಆಗಲೇ ಆಕೆಯಲ್ಲಿ ನೆಟ್ಟು ನಿಂತಂತಿತ್ತು. ಸರೋಜಿನಿ ಎಂದಳು :

"ಒಬ್ಬೊಬ್ಬರ ಸುಖದುಃಖಗಳನ್ನು ತಿಳಿದುಕೊಂಡು ಇಬ್ಬರೂ ಕೂಡಿ ಇರಬಹುದಾದರೆ ಯಾರು ಏನು ಮಾಡಬಲ್ಲರು ?"

"ಯಾರು ಏನನ್ನೂ ಮಾಡಲಾರರು. ಆದರೆ ಇಬ್ಬರಿಗೂ ಧೈರ್ಯಬೇಕು.

ಇಬ್ಬರಿಗೂ ಅನ್ಯೋನ್ಯವಾದ ವಿಶ್ವಾಸಬೇಕು ...." ಎಂದು ಆಕೆಯನ್ನು ತೀಕ್ಷ್ಣವಾಗಿ ನೋಡಿದ. ಸರೋಜಿನಿಗೆ ಆ ನೋಟದ ಅರ್ಥವಾಗಿರಬೇಕು. ಅವಳೆಂದಳು :

"ನನ್ನಲ್ಲಿ ವಿಶ್ವಾಸವಿಡಿರಿ ಎಂದು ಹೇಳಬಾರದು. ಹಾಗೆ ಹೇಳಿದರೆ ಯಾರು ವಿಶ್ವಾಸವನ್ನಿಟ್ಟಾರು ? ಆದರೆ ದುರ್ದೈವ ನನ್ನ ಬೆನ್ನುಕಾಯುತ್ತಿರುವಾಗ ಅದನ್ನೇ ನಾನು ಇಂದು ಬೇಡಬೇಕಾಗಿದೆ...." ಎನ್ನುವಾಗ ಆಕೆಯ ಕಣ್ಣು ನೀರು ತುಂಬಿದವು. ಒಂದು ಬಿಕ್ಕು ಒತ್ತರಿಸಿ ಬಂದಿತು. ಮಾಧವ ಆಕೆಗೆ ಸಮೀಪ ಸರಿದು ಸಮಾಧಾನ ಹೇಳಿದ. ಕುಳಿತು ಸಮಾಧಾನ ಹೇಳುತ್ತಿದ್ದ ಹಾಗೆ ಸರೋಜಿನಿಯ ಬಿಕ್ಕಳಿಕೆ ಇಮ್ಮಡಿಸುತ್ತಿತ್ತು.

"ಸುಮ್ಮನಾಗು ಎಂದು ಹೇಳಿದೆನಲ್ಲ, ಸರೋಜಾ....ನಿನಗೇನು ಹುಚ್ಚು ? ಸುಮ್ಮನಾಗು....ಇದು ನೋಡು, ನನ್ನಲ್ಲಿ ವಿಶ್ವಾಸವಿಡು....ನನ್ನಿಂದ ಸಾಧ್ಯವಾದುದೆಲ್ಲವನ್ನೂ ಮಾಡುವೆ...." ಎಂದಾಗ ಸರೋಜಿನಿ ಮಾಧವನ ತೊಡೆಯಲ್ಲಿ ಮೋರೆಯನ್ನಿಟ್ಟು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಮಾಧವ ಆಕೆಯ ಮುಖವನ್ನೆತ್ತಿ ಕಣ್ಣೊರಸಿದ.

ಪಶ್ಚಿಮದಲ್ಲಿಯ ಕಾರ್ಮೋಡ ದಿಗಂತವನ್ನು ವ್ಯಾಪಿಸಿ ಭೀಕರಸ್ವರೂಪವನ್ನು ತಾಳಿತ್ತು. ಪೂರ್ವದಿಕ್ಕಿನ ಒಂದು ಮೂಲೆಯಲ್ಲಿಯ ಒಂದೆರಡುಗೇಣು ಆಕಾಶವನ್ನು ಹೊರತುಪಡಿಸಿ ದಿಕ್ಕುಗಳೆಲ್ಲವೂ ಮಿಂಚಿನ ಮನೆಗಳಾಗಿದ್ದವು. ತಣ್ಣಗಿನ ಗಾಳಿ ಸೂಸಿ, ಮಳೆಯ ಸೂಚನೆ ಕೊಟ್ಟಿತು, ಪತ್ರೆಂಟು ಹನಿಗಳು ಉದುರಿ ಒಣಗಿದ ಆಲದೆಲೆಗಳ ಮೇಲೆ ಬಿದ್ದಾಗಿನ ಪಟಪಟ ಸಪ್ಪಳವೂ ಅದೇ ಎಚ್ಚರವನ್ನು ಹೇಳುತ್ತಿತ್ತು. ಹೊರಡಿರೆಂದು ಮಳೆ ಹೇಳುತ್ತಿದ್ದರೂ 'ನಾನಿದ್ದೇನೆ, ನಿಮಗೇಕೆ ಚಿಂತೆ?' ಎಂದು ಹಬ್ಬಿದ ಆಲದ ಮರ ಹೇಳುತ್ತಿತ್ತು.

ಸರೋಜಿನಿಯ ದೇಹಾದ್ಯಂತವೂ ಮಾಧವನ ಮಾತು ಪ್ರತಿಧ್ವನಿಸುತ್ತಿತ್ತು. 'ನನ್ನಲ್ಲಿ ವಿಶ್ವಾಸವಿಡು' ಎಂಬ ಆತನ ಒಂದು ಮಾತಿನಿಂದ ಆಕೆಯ ದುಃಖ ನೂರು ಪಾಲು ಕಡಿಮೆಯಾಗಿತ್ತು. ಮೊದಲಿನಿಂದಲೂ ಆತನಲ್ಲಿ ವಿಶ್ವಾಸವನ್ನಿಡಬಹುದು ಎಂಬ ತನ್ನ ಭಾವನೆಗೆ ಇಂದು ಆತನ ಮಾತಿನ ಸಮರ್ಥನೆ ಸಿಕ್ಕು, ಆಕೆ ತನ್ನ ಬದುಕಿನ ದುಃಖದೈನ್ಯಗಳನ್ನು ಮರೆತಂತಿದ್ದಳು. ಅಂತೆಯೇ ನಿಧಾನವಾಗಿ ಆಕೆ ಹೇಳಿದಳು. ಉದ್ವೇಗಕ್ಕಾಗಿ ಮಾತು ತಡೆತಡೆದು ಬರುತ್ತಿತ್ತು.

"ಮೊದಲ ಸಲ ನಿಮ್ಮನ್ನು ನೋಡಿದಾಗಿನಿಂದ ನನಗೆ ತಿಳಿಯುವದೆ

ನಿಮ್ಮ ಹತ್ತಿರ ಬರಬೇಕು ಎನ್ನುತ್ತಿದ್ದೆ. ಹತ್ತಿರ ಬರಲು ಹವಣಿಸುತ್ತಿದ್ದೆ. ಇಂದು ಇಷ್ಟು ಹತ್ತಿರ ಬಂದಿದ್ದೇನೆ.ನಾಳೆ ಊರಿಗೆ ಹೋಗುವುದೆಂದರೆ ಜೀವದ ಮೇಲೆ ಬಂದಿದೆ."

"ನನಗೂ ಅಷ್ಟೇ, ಸರೋಜಾ....ನಿಜವಾಗಿಯೂ ನಾಳೆ ನೀನು ಊರಿಗೆ ಹೋಗದಿದ್ದರೆ ಎಷ್ಟು ಚೆನ್ನ .... "

"ನನಗೂ ಹಾಗೆಯೇ ಅನಿಸುತ್ತದೆ. ಆದರೆ ಏನೆಂದು ನಾನು ಇಲ್ಲಿ ಉಳಿಯಬಹುದು ? ಊರಿಗೆ ಹೋದರೆ ಒಂದು, ಇಲ್ಲಿಯೇ ಉಳಿದರೆ ಇನ್ನೊಂದು...."

"ನಾಲ್ಕೆಂಟು ದಿವಸ ಇದ್ದು ಹೋಗಬಹುದಲ್ಲ? ಪರೀಕ್ಷೆ—ದೇವರೇ ಎಂದು ನಿನ್ನೆ ಮುಗಿದಿದೆ."

"ಇರಬಹುದಾಗಿತ್ತು. ಆದರೆ ಗೌಡನನ್ನು ತಪ್ಪಿಸುವುದಕ್ಕಾಗಿಯಾದರೂ ನಾನು ಕೂಡಲೇ ಊರು ಬಿಡಬೇಕಾಗಿದೆ. ಈ ಕ್ಷಣಕ್ಕೆ ಆತ ನನ್ನ ದಾರಿ ಕಾಯುತ್ತಿರಬಹುದು...."

"ಬರುತ್ತೇನೆಂದು ಹೇಳಿದ್ದೆಯಾ ?"

"ಹೌದು. ಆತನಿಂದ ದುಡ್ಡು ತೆಗೆದುಕೊಳ್ಳಬೇಕೆಂದು ಎಂದಿನಂತೆ ತಾಯಿಯ ಕಾಗದ ಬಂದಿತ್ತು. ಅದಕ್ಕಾಗಿ ಇಂದು ಬೆಳಿಗ್ಗೆ ಹೋಗಿಯೂ ಇದ್ದೆ.... ಸಾಯಂಕಾಲ ಬರಹೇಳಿದ.... ಇನ್ನುಮೇಲೆ ಹೋಗುವಂತಿಲ್ಲವೆಂದುಕೊಂಡೇ ಬಂದೆ, ದುಡ್ಡಿಲ್ಲದಿದ್ದರೆ ಇನ್ನೇನಾದರೂ ಮಾಡಲಿಕ್ಕೆ ಬಂದೀತೆಂದು...."

"ಇದುವರೆಗೆ ನಿನಗೆ ದುಡ್ಡನ್ನು ಗೌಡನೇ ಕೊಡುತ್ತಿದ್ದಾನೆಯೆ ?"

"ನಾನು ತೆಗೆದುಕೊಳ್ಳಬೇಕೆಂಬುದು ತಾಯಿಯ ಆಟ. ಆದರೆ ಇಡೀ ಟರ್ಮು ಹಾಗೂ ಹೀಗೂ ಬರುವಾಗ ತಂದಿದ್ದ ದುಡ್ಡಿನಿಂದಲೇ ಸಾಗಿಸಿದ್ದೇನೆ ....ಈಗ...." ಎಂದು ಅರ್ಧಕ್ಕೆಯೇ ತಡೆದಳು. ನೇರವಾಗಿ ಮಾಧವನ ಹತ್ತಿರ ದುಡ್ಡು ಬೇಡುವ ಮನಸ್ಸಾಗಲಿಲ್ಲ. ಆದರೆ ಮಾಧವನಿಗೆ ಆಕೆಯ ಮಾತಿನ ಸೂಚನೆ ಸಹಜವಾಗಿಯೇ ತಿಳಿಯಿತು.

"ಆತನಿಂದ ಇದುವರೆಗೆ ತೆಗೆದುಕೊಳ್ಳದಿದ್ದದ್ದು ಒಳ್ಳೆಯದೇ ಆಯಿತು. ಈಗ ನಿನಗೇನಾದರೂ ದುಡ್ಡು ಬೇಕೆ ?"

"ಒಬ್ಬ ಗೆಳತಿಗೆ ಹೇಳಿ ಇಟ್ಟಿದ್ದೇನೆ, ಕೈಗಡ ಎಂದು. ಆಕೆ ಕೊಟ್ಟರೆ ಊರಿಗೆ ಹೋದನಂತರ ಕಳಿಸಬೇಕು ಎಂದಿದ್ದೇನೆ...."

"ಅದೇನೂ ಬೇಡ, ಎಷ್ಟು ಬೇಡಿದ್ದೆ ? ಐವತ್ತಾದರೆ ಸಾಕೆ ?"

ಅರ್ಧ ಅನುಮಾನಿಸುತ್ತ, ಅರ್ಧ ತನ್ನ ಬಿಕ್ಕಟ್ಟು ತಾನಾಗಿಯೇ ಬಗೆ

ಹರಿಯಿತೆಂಬ ಸಮಾಧಾನದಿಂದ ಸರೋಜಿನಿ ಸುಮ್ಮನಾದಳು. ಸಂಘದ ದುಡ್ಡು ಮಾಧವನ ಜೇಬಿನಲ್ಲಿ ನೂರಕ್ಕೂ ಮಿಕ್ಕಿ ಇತ್ತು. ಅರವತ್ತು ರೂಪಾಯಿಗಳನ್ನು ಎಣಿಸಿ ಸರೋಜಿನಿಯ ಕೈಯಲ್ಲಿಟ್ಟ.

"ಯಾವ ಶತಕೃತ್ಯ ಮಾಡಿದಹಾಗಾಯಿತು ? ಗೌಡನ ಬದಲು ಮಾಧವನಿಂದ ದುಡ್ಡು ತೆಗೆದುಕೊಂಡೆಯಲ್ಲವೆ?" ಎಂದು ಒಂದು ಮನಸ್ಸು ಕೆಣಕಿತು.

"ಗೌಡ-ಮಾಧವ ಒಂದೆಯೆ ?"

"ಅಲ್ಲದೆ ಏನು ? ಇಬ್ಬರೂ ನಿನಗೆ ಪರಪುರುಷರು !"

"ಗೌಡ ಪರಪುರುಷ. ಮಾಧವನಲ್ಲ !"

"ಹಾಗೆ ನೀನು ಹೇಳುತ್ತೀ. ಯಾವ ಭೇದ ಅವರಲ್ಲಿ ?"

"ಗೌಡ ಕಾಮುಕ ರಾಕ್ಷಸ. ಮಾಧವ ಉದ್ಧಾರಕ ಪುರುಷ !"

"ಇದು ನಿನ್ನ ಭ್ರಮೆ. ಇಬ್ಬರೂ ಒಂದೇ. ವೇಷ ಬೇರೆ. ಅಷ್ಟೇ !"

"ಸಾಧ್ಯವಿಲ್ಲ ! ಮಾಧವ ಮೋಸಗಾರನೆ ? ಆತ ಮೋಸಗಾರನಾದರೆ ಯಾರಲ್ಲಿ ವಿಶ್ವಾಸವನ್ನಿಡಬಹುದು ?"

"ಅಷ್ಟು ದೊಡ್ಡ ಆಶ್ವಾಸನ ಮಾಧವನಲ್ಲಿ ನಿನಗೆ ದೊರಕಿದೆಯೆ ?"

"ಹೌದು ದೊರಕಿದೆ !"

"ಯಾವ ಮಾತನ್ನು ಹೇಳಿದ ?"

"ಮಾತಿನಿಂದ ಹೇಳಲಿಲ್ಲ. ಹೃದಯದ ಭಾಷೆಗೆ ಶಬ್ದಗಳಿಲ್ಲ. ಶಬ್ದವಿಲ್ಲದ ಭಾಷೆಯಿಂದ ಹೇಳಿದ್ದಾನೆ !"

"ಅದೇ ಮೋಸ !"

"ಹುಚ್ಚು ! ಅದು ಮೋಸವಾದರೆ ಅದಕ್ಕೆ ಬಲಿಬೀಳಲು ನಾನು ಯಾವಾಗಲೂ ಸಿದ್ಧ !"

"ಅದಕ್ಕೇ ನಾನು ಮರುಳುತನ ಎನ್ನುವುದು. ಇದೇ ತಿಳಿಯುವುದಿಲ್ಲ ನಿನಗೆ."

"ಇರಬಹುದು. ತಿಳಿದ ಮೋಸಕ್ಕಿಂತ ತಿಳಿಯದ ಮೋಸಕ್ಕೆ ಬಲಿ ಬೀಳುವುದು ತಪ್ಪಲ್ಲ !"

"ನಾನೀಗ ಹೇಳುತ್ತಿದ್ದೇನೆ. ತಿಳಿದೂ ಮೋಸ ಹೋಗುತ್ತಿದ್ದೀಯ !"

"ಇಲ್ಲ. ಇದು ಬದುಕಿನ ಮೋಸ. ಹಾಗಾದರೆ ಬದುಕೇ ಒಂದು ಮೋಸ. ತಿಳಿಯದೇ ಬಂದವರಲ್ಲವೆ ನಾವೆಲ್ಲ ?"

"ತಿಳಿಯದೆ ಬಂದವರಾದರೂ ಬಂದಮೇಲೆ ತಿಳಿಯುತ್ತದೆ."

"ತಿಳಿಯುತ್ತದೆ, ಬದುಕೇ ಒಂದು ಮೋಸ ಎನ್ನುವುದು ! ಇದರೆದುರು

ಮಾಧವನ 'ಪೋಸ' ಸರಿಯಾದದ್ದೆ. ನಾನೇತಕ್ಕೆ ಹೆದರಬೇಕು ? ಅಲ್ಲದೆ ಈತ ನನಗೆ ಈಗ ಕೊಡುತ್ತಿದ್ದ ದುಡ್ಡು ತನ್ನ ದುಷ್ಟ ಆಸೆಗೆ ಮುಂಗಡ ಬಾಡಿಗೆ ಯಲ್ಲ. ಆತನ ಸಹಾನುಭೂತಿಗೆ ಒಂದು ಸಂಕೇತ...."

ಎಂದು ಸಮಾಧಾನ ಹೇಳಿಕೊಂಡು ದುಡ್ಡನ್ನು ತೆಗೆದುಕೊಳ್ಳುವಾಗಿನ ಅನುಮಾನವನ್ನು ಜಯಿಸಿದಳು. ಸರೋಜಿನಿಯ ನೀರವತೆ ಮಾಧವನಿಗೆ ಅರ್ಥವಾಯಿತು. ಅವನೆಂದ :

"ನನ್ನಿಂದ ದುಡ್ಡು ತೆಗೆದುಕೊಳ್ಳಲಿಕ್ಕೆ ಅನುಮಾನವೆ, ಸರೋಜಾ ?"

"ಅನುಮಾನವಿದ್ದರೆ ಆ ಮಾತನ್ನೆ ಎತ್ತುತ್ತಿದ್ದಿಲ್ಲ. ಹೋದ ಕೂಡಲೆ ಕಳಿಸು ವಂತೆ ವ್ಯವಸ್ಥೆ ಮಾಡುತ್ತೇನೆ...."

"ಅಷ್ಟೇನೂ ಅವಸರವಿಲ್ಲ. ಆ ದುಡ್ಡಿನ ಮೇಲೆ ನಾನು ಅವಲಂಬಿಸಿಯೂ ಇಲ್ಲ...."

ಮುಚ್ಚಂಜೆ ಮಕಮಕ ಕವಿಯುತ್ತಿತ್ತು. ಆಕಾಶದ ಒಂದು ಅಂಗುಲವೂ ಕಾಣುತ್ತಿರಲಿಲ್ಲ. ಎತ್ತ ನೋಡಿದತ್ತ ಕಾರ್ಮೋಡ ತಾನೇತಾನಾಗಿ ತೂಗಾಡು ತ್ತಿತ್ತು. ಅಲ್ಲಿ ಇಲ್ಲಿ ಮಿಂಚು ನೂರು ನಾಲಗೆಯಾಗಿ ನೆಗದು ಗುಡುಗುಟ್ಟು ತ್ತಿತ್ತು. ಸುತ್ತಲಿನ ಶಾಂತತೆ ಹೆಚ್ಚು ಹೆಚ್ಚು ಗಂಭೀರವೆನಿಸುತ್ತಿತ್ತು. ಮಾಧವನೆಂದ : "ನಾವೀಗ ಹೊರಡದಿದ್ದರೆ ತೊಪ್ಪಲು ತೋಯಿಸಿಕೊಳ್ಳ ಬೇಕು. ಹೊರಡೋಣವೆ ?" ಎಂದು. ಸರೋಜಿನಿಗೆ ಹೊರಡುವ ಮನಸ್ಸು ಕಾಣಲಿಲ್ಲ. ಅತ್ತಿತ್ತ ಕಣ್ಣುಹಾಯಿಸಿ ನೋಡಿದಳು. ಸೆಳೆಮಿಂಚೊಂದು ಸರ್ರೆಂದು ಗಗನದಿಂದ ನೆಲಕ್ಕಿಳಿದು ದಿಗ್‌ದಿಗಂತಗಳನ್ನೂ ನೀರಲ ಬೆಳಕಿನಿಂದ ತುಂಬಿತು. ಬೆನ್ನಹಿಂದೆಯೇ ಕರಾಳಕತ್ತಲೆ ತೂರಿ ಬರುತ್ತಿರುವಾಗಲೇ ಖಟ್ ಖಟ್ ಖಡಲ್ ಎಂದು ಸೃಷ್ಟಿ ಬಿರಿದು ಇಬ್ಭಾಗವಾಗುವ ಹಾಗೆ ಸಿಡಿಲೊಡೆ ಯಿತು. ಸರೋಜಿನಿ ಬೆದರಿ ತಟ್ಟನೆ ಮಾಧವನ ಕೈ ಹಿಡಿದಳು. ದೂರದಲ್ಲಿ ಹೆಮ್ಮರವೊಂದು ತುತ್ತತುದಿಯವರೆಗೂ ಉರಿಯುತ್ತಿದ್ದಂತೆ ಕಂಡಿತು. ಸಿಡಿ ಲಿನ ಅಬ್ಬರ ಕಡಿಮೆಯಾದಂತೆ ಆ ಹೊಡೆತಕ್ಕೆ ಸುತ್ತಲಿನ ಸೃಷ್ಟಿಯೆಲ್ಲವೂ ಸೋತು ಗೋಳಿಡುತ್ತಿರುವಂತೆ ಸುಂಯ್ ಎಂದು ಗಾಳಿ ಬೀಸತೊಡಗಿತು. ಸರೋಜಿನಿ ಒಳಗಿನಿಂದಲೇ ನಡುಗಿ "ಹೊರಟುಬಿಡುವಾ" ಎಂದಳು.

ಅವಸರವಸರವಾಗಿ ಹೆಜ್ಜೆಹಾಕುತ್ತಿದ್ದ ಮಾಧವ-ಸರೋಜಿನಿಯರಿಗೆ ದಾರಿ ಗುಂಟ ಮುನ್ನುಗ್ಗಬೇಕಾಯಿತು. ಎದುರಿನಿಂದ ಕ್ಷಣಕ್ಷಣಕ್ಕೂ ಬಲವಾಗಿ ಬೀಸುತ್ತಿದ್ದ ಗಾಳಿಯು ದಾರಿಯುದ್ದಕ್ಕೂ ಇದ್ದುದನ್ನೆಲ್ಲ ತೇಲಿಸಿಕೊಂಡು

ಧೂಳಿಯನ್ನು, ತರಗೆಲೆಗಳನ್ನು ಗಗನಕ್ಕೇರಿಸುತ್ತಿತ್ತು. ಕ್ಷಣಾರ್ಧದಲ್ಲಿ ಮಳೆಗೆ ಪ್ರಾರಂಭ! ಇಬ್ಬರೂ ಕಾಲೇಜು ಗೇಟಿನ ಹತ್ತಿರ ಬರುತ್ತಿರುವಷ್ಟರಲ್ಲಿ ಧಾರಾಕಾರವಾಗಿ ಮಳೆ ಸುರಿಯತೊಡಗಿತು. ದೊಡ್ಡ ಕಟ್ಟಡದ ಆಶ್ರಯ ಪಡೆಯಬೇಕೆನ್ನುವಷ್ಟರಲ್ಲಿಯೇ ಇಬ್ಬರೂ ಅರ್ಧಮರ್ಧ ತೊಯ್ದೇಹೋದರು.

"ಅಂತೂ ಪಾರಾದಹಾಗಾಯಿತು...." ಎಂದು ಸರೋಜಿನಿ.

"ತೋಯಿಸದೆ ಬಿಡಲಿಲ್ಲ, ಎಷ್ಟು ಅವಸರದಿಂದ ಬಂದರೂ...." ಎಂಬ ಮಾಧವ.

ಮಾತು ಸಂದರ್ಭಕ್ಕೆ ಸರಿಯಾದದ್ದಾದರೂ ಮಾಧವನಿಗೆ ಒಂದು ನಿಮಿಷ ವಿಚಿತ್ರವೆನಿಸಿತು. ಸಾಯಂಕಾಲದ ಸಂದರ್ಶನದ ಇತ್ಯರ್ಥ ಆ ಮಾತಿನಲ್ಲಿದ್ದಂತೆ ಭಾಸವಾಯಿತು. ಆಕೆಯ ದೃಷ್ಟಿಯಿಂದ ತಾನು ಪಾರಾದೆ ಎಂದಾಕೆ ಹೇಳಿದ್ದು ಸರಿಯೇ, ಆದರೆ ತಾನು? ತನಗೆ ಇದರಲ್ಲಿ ತೋಯಿಸಿಕೊಳ್ಳದೆ ಮಾರ್ಗವಿಲ್ಲವೆ? ಎಂದುಕೊಂಡ....ಕೊನೆಯಲ್ಲಿ, ಯಾವ ಮಾತಿಗೆ ಯಾವ ಅರ್ಥ? ಹುಚ್ಚು! ಎಂದುಕೊಂಡು ಸುಮ್ಮನಾದ. ಸಂತತ ಧಾರೆಯಾಗಿ ಮಳೆ ಸುರಿಯುತ್ತಿತ್ತು. ಆದರೆ ಸರೋಜಿನಿಯ ಲಕ್ಷ್ಯ ಸುರಿಯುತ್ತಿರುವ ಆ ಮಳೆಗಿಂತ ಹೆಚ್ಚಾಗಿ ಮಾಧವ ತನಗೆ ಮತ್ತೆ ಸಿಗುವುದು ಹೇಗೆ ಎಂಬ ಯೋಚನೆಯಲ್ಲಿ ತೊಡಗಿತ್ತು. ಅದಕ್ಕೆಂದೇ ಕೇಳಿದಳು:

"ನಿಮ್ಮ ಪರೀಕ್ಷೆ ಯಾವತ್ತು?"

"ಇನ್ನೂ ಮೂರು ವಾರ. ಯಾಕೆ?"

"ನಿಮ್ಮ ಪರೀಕ್ಷೆ ನಡೆದಾಗ ನಾನೊಮ್ಮೆ ಇಲ್ಲಿಗೆ ಬಂದರೂ ಬರಬೇಕು ಎಂದಿರುವೆ?"

"ಸಾಧ್ಯವೇ.ಅದು?"

"ಓ.ಎಸ್. ಬರಬೇಕು ಎಂದರೆ ಬರಬಹುದು."

"ಯಾರು ಬರಬೇಕು ಎಂದರೆ?"

"ಯಾರೆಂದರೆ?"

"ನೀನೋ, ನಾನೋ?"

"ಇಬ್ಬರೂ...." ಎಂದು ಸರೋಜಿನಿ ಕಿಲಕಿಲನೆ ನಕ್ಕಳು.

"ಅದು ಸರಿ. ಆದರೆ ನೀನು ಹೊರಟುಹೋದಮೇಲೆ ಇಬ್ಬರಿಗೂ ಅನಿಸಿದ್ದು ಒಬ್ಬರೊಬ್ಬರಿಗೆ ತಿಳಿಯುವುದು ಹೇಗೆ....?"

"ನೀವೇ ಹೇಳಿದ್ದೀರಲ್ಲವೆ? ಅಂಚೆಯೆಂಬುದು ಇದೆ ಎಂದು!"

"ಅಂಜಿಯೇನು ಯಾವಾಗಲೂ ಇದೆ. ಆದರೆ ಅದರ ಉಪಯೋಗ ಮಾಡಿದರೆ...."

"ನೀವು ಮಾಡಿದರೆ ನಾನೂ ಮಾಡಬಹುದು!"

"ನೀನು ಮಾಡಿದರೆ ನಾನೂ ಮಾಡಬಹುದು!"

"ಮಾತನಾಡಲಿಕ್ಕೆ ಯಾರು ಕಲಿಸಿದರು ನಿಮಗೆ?"

"ನಿನಗೆ ಯಾರು ಕಲಿಸಿದರು ?"

"ದೇವರು!"

"ನನಗೆ ಕಲಿಸಿದವರು ದೇವರಲ್ಲ. ಬೇರೊಬ್ಬರು!" ಎಂದು ಮಾಧವ ನಕ್ಕ.

"ಯಾರವರು?"

"ದೇವತೆ!"

"ಎಲ್ಲಿದ್ದಾಳೆ ಆ ದೇವತೆ?" ಎಂದು ಸರೋಜಿನಿ ಮಾಧವನ ಅರ್ಥ ತಿಳಿದಿದ್ದರೂ ಕೇಳಿದಳು.

"ದೇವತೆ ಯಾವಾಗಲೂ ದೇವರ ಹತ್ತಿರ!"

"ಆ ದೇವರೆಲ್ಲಿ?"

"ದೇವರು ದೇವತೆಯ ಹತ್ತಿರ!" ಎಂದು ಮಾಧವ ಗಟ್ಟಿಯಾಗಿ ನಕ್ಕು ಸರೋಜಿನಿಯ ಭುಜ ತಟ್ಟಿದ. ಮಳೆ ನಿಲ್ಲುವುದರಲ್ಲಿತ್ತು. ಇಬ್ಬರೂ ನಿಧಾನವಾಗಿ ಹೊರಟರು. ಮಾಧವ ಕೇಳಿದ :

"ನಾಳೆ ಯಾವ ರೈಲಿನಿಂದ ಹೊರಡುವಿ ?"

"ಹನ್ನೊಂದರದು, ಯಾಕೆ ?"

"ಸುಮ್ಮನೆ ಕೇಳಿದೆ."

"ಸುಮ್ಮನೆ ಅಲ್ಲ. ನನಗೆ ಗೊತ್ತು. ದಯಮಾಡಿ ನಿಲ್ದಾಣಕ್ಕೆ ಬರಬೇಡಿರಿ!"

"ಇದೇನು ವಿಚಿತ್ರ ?''

"ವಿಚಿತ್ರ ಅಲ್ಲ, ಏನೂ ಅಲ್ಲ. ನನ್ನ ಜೊತೆಯಲ್ಲಿ ನಾಲ್ಕು ಜನ ಗೆಳತಿಯರಿದ್ದಾರೆ."

"ಇದ್ದರೆ ಏನಂತೆ ? ಅವರೇನು ನನ್ನನ್ನು ತಿಂದುಬಿಡುತ್ತಾರೆಯೆ ?"

"ನಿಮ್ಮನ್ನು ತಿನ್ನುವುದಿಲ್ಲ, ನನ್ನನ್ನು ಉಳಿಸುವುದಿಲ್ಲ! ಅವರೆಲ್ಲರ ಎದುರು ನಾನಂತೂ ನಿಮ್ಮೊಡನೆ ಮಾತನಾಡುವುದು ಸಾಧ್ಯವಿಲ್ಲ. ಅಂದಮೇಲೆ ಬಂದಾದರೂ ಏನು?"

"ಇದೊಳ್ಳೆಯ ನಿರ್ಬಂಧ. ನನ್ನಿಷ್ಟಕ್ಕೆ ನಾನು ನಿಲ್ದಾಣಕ್ಕೆ ಬರಕೂಡದೆ?"

"ಬರಬಹುದು. ಆದರೆ ಬಂದೇನು ಪ್ರಯೋಜನ ಎಂದೆ."

"ನಿನಗಿಲ್ಲದಿದ್ದರೂ ನನಗೆ ಇದೆ ಪ್ರಯೋಜನ !"

"ಏನದು ?"

"ಮಾತಿಲ್ಲದಿದ್ದರೂ, ನೋಡಿಯಾದರೂ ಹೋಗಬಹುದು !"

"ಏನದು ನೋಡುವುದು ? ರೈಲನ್ನೆ ?"

"ರೈಲನ್ನಲ್ಲ. ರೈಲಿನಿಂದ ಹೋಗುವ ಒಬ್ಬರನ್ನು !"

"ಅವರನ್ನು ನೋಡಿದರೂ ಸಂತೋಷವೆ ?"

"ಸಂತೋಷವಲ್ಲ. ದುಃಖ !"

"ದುಃಖವೆ ?"

"ಹುಂ....ಮತ್ತೆ ಸಮೀಪದಲ್ಲಿ ನೋಡಸಿಗುವುದಿಲ್ಲವಲ್ಲಾ ಎಂದು."

"ಆಯಿತು...." ಎಂದು ಸರೋಜಿನಿ ನಕ್ಕಾಗ ವಸತಿಗೃಹದ ಹತ್ತಿರ ಬಂದಿದ್ದರು.. ಮಾಧವ ಹೇಳಿದ ದುಃಖ ಎಂಬ ಮಾತೇ ಸರಿಯಾದದ್ದು ಎಂದೆನಿಸಿತು ಸರೋಜಿನಿಗೆ ಆ ಕ್ಷಣಕ್ಕೆ. ಒಂದೆಡೆ ಇನ್ನೂ ಒಂದೈದು ನಿಮಿಷ ಮಾಧವನ ಹತ್ತಿರವಿರಬೇಕೆಂಬ ಆಸೆ, ಇನ್ನೊಂದೆಡೆ ಯಾರಾದರೂ ನೋಡಿಯಾರೆಂಬ ಹೆದರಿಕೆ: ಹೀಗಾಗಿ ಸರೋಜಿನಿ ತೊಳಲಾಡುತ್ತಿದ್ದಳು. ಉಕ್ಕಿಬರುತ್ತಿದ್ದ ಭಾವನೆಗಳನ್ನು ಅದುಮಿ ಮಾಧವನ ಕೈಯಿಂದ ತನ್ನ ಕೈಯನ್ನು ಬಿಡಿಸಿಕೊಳ್ಳುತ್ತ ಕೇಳಿದಳು.

"ಹೊರಡಲಾ ?" ಎಂದು.

"ಹೊರಡಬಹುದು. ಕಾಗದ ಎಂದು ಬರೆಯುತ್ತೀ ?"

"ಒಳ್ಳೆ ನೆನಪು ಮಾಡಿದಿರಿ. ನಮ್ಮಿಬ್ಬರ ಹತ್ತಿರ ಇಬ್ಬರ ವಿಳಾಸವೂಇಲ್ಲ!"

ಕತ್ತಲೆಯ ಮೂಲಕ ಬರೆದುಕೊಳ್ಳುವುದಾಗಲಿ, ಬರೆದುಕೊಡುವುದಾಗಲಿ ಅಸಾಧ್ಯವಾದ್ದರಿಂದ ಇಬ್ಬರೂ ನೆನಪಿನ ನೆರವನ್ನೇ ಪಡೆಯಬೇಕಾಯಿತು. ಮಾಧವ ಸರೋಜಿನಿಯ ಕೈಯನ್ನು ಮತ್ತೊಮ್ಮೆ ಗಟ್ಟಿಯಾಗಿ ಅದುಮಿ ಬಿಟ್ಟುಕೊಟ್ಟ. ಸರೋಜಿನಿ ಕಾಲ್ದೆಗೆದಳು, ನಿರುಪಾಯಳಂತೆ. ಹೋಗುವಾಗ ಮಾಧವ ಮತ್ತೆ ಹೇಳಿದ "ಹೋದ ಕೂಡಲೆ ಅಲ್ಲಿ ಎಲ್ಲವೂ ಹೇಗೆ ಎಂಬ ಬಗ್ಗೆ ವಿವರವಾಗಿ ಕಾಗದ ಬರೆ" ಎಂದು. ಮಾತು ಕತ್ತಲೆಯಲ್ಲಿ ಅಡಗಿತು, ಬೈಸಿಕಲ್ಲಿನೊಡನೆ ದೂರ ಹೋಗುತ್ತಿದ್ದ ಮಾಧವನ ಆಕೃತಿಯಂತೆಯೇಇಬ್ಬರ ನಡುವೆಯೂ ಅಪಾರವಾದ ಕತ್ತಲೆ-ಸಾಮಾಜಿಕನ ವಿಚಾರಶೂನ್ಯತೆಯೆ ಮೂರ್ತಿವೆತ್ತಂತೆ ತಾನೇತಾನಾಗಿ ನಿಂತಿತ್ತು !

## 8

ಮಾಧವ ಮನೆ ಸೇರುವ ಹೊತ್ತಿಗೆ ಮಳೆ ನಿಂತು ಹೊರಗಿನ ವಾತಾವರಣ ಶಾಂತವಾಗಿದ್ದರೂ ಮನೆಯಲ್ಲಿಯ ವಾತಾವರಣ ಮಾತ್ರ ಅಂದಿನ ಮುಚ್ಚಂಜೆಯ ಮುಗಿಲಿನಕಿಂತಲೂ ಹೆಚ್ಚಾಗಿ ಕಾರ್ಮೋಡಗಳಿಂದ ಕವಿದಂತಾಗಿತ್ತು. ಹೊರಗಡೆ ತಂಪು ಸೂಸುತ್ತಿದ್ದರೂ ರಾಯರ ಸಿಟ್ಟು ಬಿಸಿಬಿಸಿಯಾಗಿ ಉರಿಯುತ್ತಿತ್ತಲ್ಲದೆ ಕಾವು ಇನ್ನೂ ಏರುವುದರಲ್ಲಿಯೇ ಇತ್ತು. ಮನೆ ಸೇರಿದ ಒಂದೆರಡು ನಿಮಿಷಗಳಲ್ಲಿಯೇ ಇದನ್ನು ಕಂಡುಹಿಡಿದ ಮಾಧವ ಯಾವ ಮಾತನ್ನೂ ಆಡದೆ ತನ್ನ ಕೋಣೆಯನ್ನು ಸೇರಿದ. ತೀರ ಅನಿರೀಕ್ಷಿತವಾಗಿ ರಾಯರು ಅಂದು ಮಡದಿಯ ಮೇಲೆ ಕೂಡ ಹರಿಹಾಯ್ದಿದ್ದರು. ಮಳೆಯಲ್ಲಿ ಸಿಕ್ಕು ತೋಯಿಸಿಕೊಂಡಿದ್ದರಿಂದಲೊ, ಮನೆಗೆ ಬಂದು ನೋಡಿದಾಗ ತಮ್ಮ ಕೋಣೆಯಲ್ಲಿ ಕಿಟಕಿಗಳೊಳಗಿನಿಂದಲ್ಲದೆ ಮೇಲಿನಿಂದಲೂ ಸೋರಿ ಪುಸ್ತಕ ಕಾಗದಪತ್ರಗಳು ನೆನೆದುಹೋಗಿದ್ದರಿಂದಲೊ, ಇನ್ನಾವ ಕಾರಣಕ್ಕಾಗಿಯೊ, ರಾಯರ 'ಟೆಂಪರೇಚರ್' ಮಾತ್ರ ತೀರ ಮೇಲಕ್ಕೇರಿಯೇ ನಿಂತಿತ್ತು. ಮನೆಯಲ್ಲಿ ಅತ್ತಿತ್ತ ಅಡ್ಡಾಡುತ್ತಿದ್ದ ಅವರ ಗುಡುಗಾಟ ನಡೆದೇ ಇತ್ತು. ಅವರ ಕಣ್ಣು ತಪ್ಪಿಸಿದರೆ ಮಾತ್ರ ಅವರ ಬಾಯಿಂದ ಪಾರಾಗುವುದು ಸಾಧ್ಯವೆಂದುಕೊಂಡಿದ್ದ ಮಾಧವನ ಎಣಿಕೆ ಮಾತ್ರ ತಪ್ಪಿತ್ತು. ಯಾಕೆಂದರೆ ಐದೇ ನಿಮಿಷಗಳಲ್ಲಿಯೇ ಅವರ ಕೋಣೆಯೊಳಗಿನಿಂದ ಕರೆ ಬಂದಿತು :

"ಮಾಧವಾ...." ಎಂದು. ದನಿಯಲ್ಲಿಯ ಸಿಡುಕು ಸ್ಪಷ್ಟವಾಗಿಯೇ ಇತ್ತು.

"ಆ ನಸ್ಯದ ನಾರಾಯಣಾಚಾರಿಗೆ ಹೇಳಿದೆ ಏನು ?"

"ಮಳೆಯಲ್ಲಿ ಸಿಕ್ಕುಬಿದ್ದೆ. ಹೋಗಲಾಗಲಿಲ್ಲ. ನಾಳೆ ಬೆಳಿಗ್ಗೆ ಹೋಗುತ್ತೇನೆ...."

"ನನಗೆ ಗೊತ್ತೇ ಇತ್ತು. ಮನೆಯ ಕೆಲಸ ಅಂದರೆ ನಿನಗಂತೂ ಏನಾದರೊಂದು ನೆಪ ಇದ್ದೇ ಇರುತ್ತದೆ. ಇಂದೊಂದು ಮಳೆಯಾಯಿತು. ಈಗ ಮೂರು ದಿವಸ ಹಿಂದಿಯೇ ಹೇಳಿದ್ದೆ...."

"ಮೊನ್ನೆ ಹೋದಾಗ ಮನೆಯಲ್ಲಿರಲಿಲ್ಲ ಅವರು...."

"ಇರಲಿಕ್ಕಿಲ್ಲ. ಸಾಕುಮಾಡು. ಮುಂಜಾನೆಯಿಂದ ಮೂರು ತಾಸು ರಾತ್ರಿಯವರೆಗೂ ಅಲೆದಾಡುತ್ತೀ. ಹೇಳಿದ ಒಂದು ಕೆಲಸ ಮಾಡಲಿಕ್ಕಾಗುವುದಿಲ್ಲ...."

ಮಾತನಾಡಿದರೆ ಅವರ ಕೋಪ ಕೆರಳುವುದು ಖಂಡಿತವಾಗಿದ್ದರಿಂದ ಮಾಧವ ಮೂಕನಾಗಿಯೇ ಉಳಿದ. ಆದರೆ ರಾಯರು ಮಾತ್ರ ಇನ್ನೂ ಉರಿಯುತ್ತಲೇ ಇದ್ದರು.

"ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದಿ ಹಾಗಾದರೆ...."

"ಎಲ್ಲಿಗೆ ಹೋಗುವುದು ? ನಾಲ್ಕು ಗಂಟೆಯ ಸುಮಾರಿಗೆ ಕಾಲೇಜಿಗೆ ಹೋಗಿದ್ದೆ...."

"ಕಾಲೇಜಿನಲ್ಲಿ ಏಸಿಟ್ಟದ್ದೆ ನಿಮ್ಮಪ್ಪನ ಗಂಟು....?"

ಮಾಧವನಿಗೆ ಮಾತಿನ ರೀತಿಯು ಅರ್ಥವಾಗಲಿಲ್ಲ. ಕೋಪ ಮಾತ್ರ ಪುಟಿದೇಳತೊಡಗಿತ್ತು. ಅದರಲ್ಲಿಯೂ ನಿಷ್ಕಾರಣವಾಗಿ ತನ್ನ ತಂದೆಯನ್ನು ಮಾತಿನಲ್ಲಿ ಸೇರಿಸಿ ಇಬ್ಬರನ್ನು ಅವಮಾನ ಮಾಡುತ್ತಿದ್ದ ಬಗೆಯನ್ನು ನೆನೆದು ಕಿಡಿಕಿಡಿಯಾದ.

"ನಿನ್ನ ಎಲ್ಲ ಆಟವೂ ನನಗೆ ತಿಳಿದಿದೆ. ನೀನೂ, ನಿನ್ನ ಕಾಲೇಜೂ, ನಿನ್ನ ಓದೂ...."

ರಾಯರ ಸಿಟ್ಟು ಕೇವಲ ತನ್ನ ಮೇಲೆಯೇ ಇತ್ತೆಂಬುದೂ, ಅಲ್ಲದೆ ಅಂದಿನ ಸಿಟ್ಟಿಗೆ ಏನಾದರೊಂದು ವಿಶೇಷವಾದ ಕಾರಣವಿತ್ತೆಂಬುದೂ, ಅದಕ್ಕಾಗಿಯೇ ಈ ಎಲ್ಲ ಉಗ್ರವಾದ ಪೂರ್ವ ಸೂಚನೆಯೆಂಬುದೂ ಮಾಧವನಿಗೆ ಮನದಟ್ಟಾಯಿತು. ಸಿಟ್ಟು ಸೈರಣೆಯನ್ನು ಮೀರುತ್ತಿದ್ದರೂ ಸುಮ್ಮನೆ ಉಳಿದ. ರಾಯರು ಸುಮ್ಮನಿರುವಂತಿರಲಿಲ್ಲ.

"ನನಗೆಲ್ಲವೂ ತಿಳಿದಿದೆ. ಎಂದಿನಿಂದಲೋ ಅನಿಸುತ್ತಿತ್ತು. ಇಂದಿಗೆ ಮನದಟ್ಟಾಯಿತು...."

ಮಾಧವನಿಗೆ ಸುಮ್ಮನಿರಲಾಗಲಿಲ್ಲ. ಕಕ್ಕನ ಸಿಟ್ಟು ಹೆಚ್ಚಾಗುವುದೆಂದು ತಿಳಿದೂ ಕೇಳಿಬಿಟ್ಟ :

"ಏನದು ಮನದಟ್ಟಾದದ್ದು ?"

"ನೀನು ಮಾತನಾಡಬೇಡ. ನನಗೆಲ್ಲವೂ ತಿಳಿದಿದೆ. ಯಾರ ಮೋರೆಗೆ ಕಪ್ಪು ಹಚ್ಚಬೇಕೆನ್ನುತ್ತಿದ್ದೀ ?"

"ಅಂಥದು ಏನು ಮಾಡಿದ್ದೇನೆ ಹೇಳಬಾರದೆ ?"

"ಸಾಕು ಅಂತ ಹೇಳಿದೆನಲ್ಲ ಈ ಮಾತು. ನನಗೆ ಮಾತ್ರ ಇಂಥ ನಡತೆ ಸರ್ವಥಾ ಬಗೆಹರಿಯುವುದಿಲ್ಲ, ತಿಳಿಯಿತೆ ?"

ಈ ಮಾತು ಸೀತಾಬಾಯಿಯವರನ್ನು ನಡುಮನೆಯ ಬಾಗಿಲವರೆಗೆ ಕರೆ

ತಂದಿದ್ದಿತು. ಅವರೆದುರಿನಲ್ಲಿ ಇಂಥ ಮಾತನ್ನು ಆಡಿಸಿಕೊಳ್ಳಬೇಕಾಯಿತೆಂದು ಮಾಧವನಿಗೆ ಒಂದೆಡೆ ಕೋಪವಾದರೆ ಅವರ ನಿರ್ದಿಷ್ಟವಾದ ಆಪಾದನೆಯನ್ನು ತಿಳಿಯದೆ ಅವರ ಮಾತಿನ ಹೊಳವನ್ನು ಗೊತ್ತುಹಿಡಿಯಬೇಕೆನ್ನುವ ಕುತೂಹಲ ಇನ್ನೊಂದೆಡೆಯಾಗಿ ಮಾಧವನಿಗೆ ವಿಪರೀತ ವೇದನೆಯಾಯಿತು. ಸಿಟ್ಟು ಆ ಕುತೂಹಲವನ್ನು ಮೀರಿ ಹೇಳಿತು :

"ನೀವು ಹಿರಿಯರು. ಯಾವ ಮಾತನ್ನೂ ಆಡಬಹುದು...." ಎಂದುಬಿಟ್ಟ.

"ಹೌದು, ನೀನು ಮನೆ ಬಿಟ್ಟು ಹೊರಗೆ ತಿರುಗಿ ಬೇಕಾದುದನ್ನು ಮಾಡಬಹುದು. ಹೀಗೆ ಮಾಡಿದೆ ಎಂದರೆ 'ಹಿರಿಯರು' ಎಂದು ಅಣಕಿನ ಮಾತನ್ನು ಆಡುತ್ತೀಯಾ ?"

"ಅಂಥ ಏನನ್ನು ಮಾಡಿದೆ ಎಂಬುದನ್ನಾದರೂ ಹೇಳಬಾರದೆ ?"

"ಅದನ್ನೆಲ್ಲ ಹೇಳಿ ನನ್ನ ನಾಲಿಗೆಯನ್ನು ಹೊಲಸು ಮಾಡಿಕೊಳ್ಳಬೇಕಾಗಿಲ್ಲ ನನಗೆ. ಎಷ್ಟಾದರೂ ನಿಮ್ಮಪ್ಪನ ಮಗ ನೀನು....!"

ಈಗ ಮಾತ್ರ ಮಾಧವನ ಸಹನೆ ಮೀರಿತು. ಗಟ್ಟಿಯಾಗಿ ಹೇಳಿದ :

"ನನ್ನ ಮಟ್ಟಿಗೆ ನೀವು ಏನು ಬೇಕಾದುದನ್ನೂ ಹೇಳಿರಿ. ಅಪ್ಪನ ಹೆಸರನ್ನು ಎತ್ತಬೇಡಿರಿ...."

"ಅಪ್ಪನ ಗುಣಗಳನ್ನೇ ಎತ್ತಿಕೊಂಡು ಹೆಜ್ಜೆ ಹಾಕಲಿಕ್ಕೆ ಈಗಿನಿಂದಲೇ ಪರಿಪಾಠ ; ಮೇಲೆ ಹೆಸರು ಎತ್ತಬೇಡ ಅನ್ನುತ್ತೀಯಲ್ಲವೇ ?"

"ನನಗೆ ಕೆಟ್ಟ ಮಾತು ಆಡುವುದು ಬೇಕಾಗಿಲ್ಲ...."

"ನನಗೆ ಬೇಕಾಗಿದೆಯಲ್ಲವೇ?"

"ನಿಮಗೆ ಬೇಕಾಗಿರಬಹುದು. ಅಂತೆಯೇ ಆಡುತ್ತೀದ್ದೀರಿ...."

"ಸಾಕುಮಾಡು, ಎದುರು ಮಾತನಾಡುವುದು, ನಾಚಿಗೆಗೇಡಿ....!"

"ನನಗೆ ನೀವು ಬೈಯುವ ಕಾರಣವಿಲ್ಲ...." ಮಾಧವ ಖಂಡತುಂಡವಾಗಿ ಹೇಳಿದ.

ಸೀತಾಬಾಯಿಯವರಿಗೂ ವಿಷಯ ತಿಳಿಯದಾಗಿತ್ತು. ಮಾಧವನನ್ನು ಸಮರ್ಥಿಸುವುದಕ್ಕಿಂತ ಹೆಚ್ಚಾಗಿ ನಡೆದ ವಿಷಯವಾದರೂ ಏನೆಂಬುದನ್ನು ತಿಳಿಯುವ ಕುತೂಹಲದಿಂದ ನಡುವೆ ಬಾಯಿಹಾಕಿದರು :

"ಅಲ್ಲ. ಆದದ್ದಾದರೂ ಏನು ಅಂದೆ? ಯಾಕೆ ಸುಮ್ಮನೆ ಆಡುತ್ತೀರಿ ?"

"ಸಾಕು ಮಾಡೆ, ನೀನು ನಡುವೆ ಬರಬೇಡ. ನಿನಗೆ ತಿಳಿಯುವುದೂ ಅಷ್ಟರಲ್ಲಿಯೇ...."

"ಅಲ್ಲ, ಅಂಥಾದ್ದೇನು ಇದ್ದೀತು ಅಂದೆ...."

"ಹಗಲುರಾತ್ರಿ ದುಡಿಯಬೇಕು. ಇವರಿಗೆ ದುಡ್ಡು ಕೊಡಬೇಕು. ಯಾತಕ್ಕೆಂದರೆ ಇವರು ಕಾಲೇಜು ಕಲಿಯುತ್ತಾರೆ! ಇವರು ದುಡ್ಡು ಒಯ್ದು ಸೂಳೆಯರ ಮನೆಯುವರೆಗೂ ತೂರುತ್ತಾರೆ! ಇದೇ ಇವರ ವಿದ್ಯಾಭ್ಯಾಸ....ನನ್ನ ಮಕ್ಕಳಾಗಿದ್ದರೆ ಜೀವ ತೆಗೆಯುತ್ತಿದ್ದೆ...."

"ಅಪ್ಪಯ್ಯ, ಏನಂತೀರಿ....ಅಂತೀರಾದರೂ ಏನೂ ಅಂದೆ...." ಎಂದು ಸೀತಮ್ಮನವರು ನೆಲಕ್ಕೇ ಕೂಡುವುದರಲ್ಲಿದ್ದರು. ಮಾಧವ ಅವಾಕ್ಕಾಗಿ ನಿಂತ. ಸಿಟ್ಟು ಮಾತನ್ನು ಅಡಗಿಸಿತ್ತು. ಒಂದು ನಿಮಿಷ ಸುಮ್ಮನಾಗಿದ್ದು ನಿಧಾನವಾಗಿ ಹೇಳಿದ :

"ನಾನು ನಿಮಗೆ ಮನೆಯಲ್ಲಿ ಬೇಡವಾಗಿದ್ದರೆ ಹಾಗೆ ಸ್ಪಷ್ಟವಾಗಿ ಹೇಳಬಹುದು. ಇಂಥ ಹೇಸಿ ಆಪಾದನೆ ಮಾಡಿ ಹೊರಗೆ ಹಾಕುವುದಕ್ಕಿಂತ ನೇರವಾಗಿ ಒಂದು ಮಾತು ಹೇಳಿಬಿಟ್ಟರೆ...."

"ಹೌದಪ್ಪಾ....ಮಾಡುವವರು ನೀವು ದೊಡ್ಡವರು. ಆಡಿದವರೇ ನಾವು ಪಾಪಿಗಳು, ದುಷ್ಟರು...."

"ಎಲ್ಲ ಮಾತನ್ನೂ ನೀವೇ ಹೇಳುತ್ತಿದ್ದೀರಿ. ನಾನು ಯಾವ ಮಾತನ್ನೂ ಆಡಿಲ್ಲ...."

"ಮಾತನ್ನು ಯಾತಕ್ಕೆ ಆಡಬೇಕು ನೀನು ? ಬೇಡಿದಾಗ ಬೇಡಿದ ಹಾಗೆ ದುಡ್ಡು ಕೊಡುತ್ತೇನೆ....ಏನು ಮಾಡುತ್ತೀ ಎಂದು ಕೇಳುವುದೂ ಇಲ್ಲ.... ಅದಕ್ಕೆ ಬಂತಲ್ಲ ಇಂದಿಗೆ ಪ್ರಾಯಶ್ಚಿತ್ತ....ಹುಡುಗನನ್ನು ನೋಡಿಕೊಳ್ಳಲಿಲ್ಲ ....ಹಾದಿಗೆಟ್ಟ ಎಂದು...."

"ಅಷ್ಟೇನೂ ನನ್ನ ಸಲುವಾಗಿ ಯಾರೂ ಚಿಂತೆಮಾಡಿ ಕೊರಗಬೇಕಿಲ್ಲ...." ಎಂದು ಮಾಧವ ಯಾರನ್ನೂ ಉದ್ದೇಶಿಸದೆ ಹೇಳಿ ತನ್ನ ಕೋಣೆಯ ಕಡೆಗೆ ಹೊರಟ. ರಾಯರಿಗೆ ಬೇಕಾದ ಉತ್ತೇಜನ ಮಾತ್ರ ಸಿಕ್ಕಂತೆ ಆಯಿತು.

"ಹೌದಪ್ಪಾ, ಅದೇ ನನಗೆ ತಿಳಿಯಲಿಲ್ಲ. ಪ್ರಬುದ್ಧರು ನೀವು. ಮೊದಲೇ ತಿಳಿಯಬೇಕಾಗಿತ್ತು ನನಗೆ. ಗತಿಗೆಟ್ಟವರಿಗೆ ಒಂದು ಹಾದಿಗೆ ಹಚ್ಚಿದ್ದಕ್ಕೆ ಇಷ್ಟು ಮಾತೂ ಬೇಡವೆ ?"

"ಯಾರಿಗೆ ಯಾರೂ ಹಾದಿಗೆ ಹಚ್ಚಬೇಕಾಗಿಲ್ಲ...." ಮಾಧವನ ಕೊನೆಯ ಮಾತು.

ಎದುರು ಮಾತನಾಡಬಾರದೆಂದು ಮಾಧವ ಎಷ್ಟು ಹೇಳಿಕೊಂಡರೂ

ರಾಯರ ಮಾತು ಮಾಧವನ ಸ್ಥೈರಣೆಯನ್ನು ಕೆಣಕುತ್ತಿತ್ತು. ತನ್ನ ತಂದೆಯು ದುಡ್ಡಿನ ಮೂಲಕ ತಾನೇ ಒಂದು ಹಾದಿಗೆ ಹತ್ತಿದವನಾದ ಕಕ್ಕ ಅದೇ ಮಾತನ್ನು ತನಗೆ ಹೇಳುತ್ತಿದ್ದನೆಂಬುದನ್ನು ನೆನೆದಾಗ ಅವನ ವಿಚಾರಶೂನ್ಯ ಕೃತಘ್ನತೆಯ ಬಗ್ಗೆ ಖೇದವೆನಿಸಿತು. ಮರುಕ್ಷಣದಲ್ಲಿ ತನಗೆ ವಿಚಿತ್ರವೆನಿಸಿತು. ತನ್ನ ತಂದೆಯ ವಿಚಾರವೂ ತನಗೆ ಬೇಡವಾದಾಗ ಅದೇ ವಿಚಾರ ತನ್ನ ಕಕ್ಕನ ವಿರುದ್ಧ ಮಾತನಾಡಲಿಕ್ಕೆಂದು ತನಗೆ ಸಮರ್ಥನೆಯಾಗುತ್ತಿದೆಯೆಂಬುದನ್ನು ನೆನೆದಾಗ ಅಂದುಕೊಂಡ: 'ಎಷ್ಟು ಪರಿ ವಿಚಾರ ಮಾಡಿದರೇನು ? ಅವರ ರಕ್ತ ನಾಳಗಳಲ್ಲಿ ಹರಿಯುತ್ತಿಲ್ಲವೆ ? ಅದನ್ನು ತಪ್ಪಿಸುವುದು ಹೇಗೆ ?' ಎಂದು.

ರಾಮರಾಯರು ಅತ್ತಿತ್ತ ಅಲೆದಾಡುತ್ತಿದ್ದರು. ಅವರ ಕೋಪ ಇಳಿಯುತ್ತಿರುವಂತಿತ್ತು. ಹೇಳಬೇಕಾದುದನ್ನು ಹೇಳಿ ಮುಗಿಸಿದ ಸಮಾಧಾನ ಅವರ ಕೋಪಾತಿರೇಕವನ್ನು ತಗ್ಗಿಸಿದಂತಿತ್ತು. ಹೆಚ್ಚು ಕಡಿಮೆ ಶಾಂತರಾಗಿಯೇ ಹೇಳಿದರು :

"ಇದು ನೋಡು, ಮಾಧವಾ....ಮಾತಿಗೊಂದು ಮಾತು ಬೆಳೆಸುವುದು ನನಗೆ ಬೇಡ. ಒಂದು ಮಾತಿನಲ್ಲಿ ಹೇಳಿಬಿಡುವೆ. ಈ ನಡತೆ ನನಗೆ ಸರಿ ಬರುವುದು ಸಾಧ್ಯವಿಲ್ಲ. ನಿಮ್ಮಪ್ಪ ಒಂದು ರೀತಿಯಿಂದ ಮನೆತನದ ಮಾನ ಕಳೆದ. ಈಗ ಅದಷ್ಟೇ ಸಾಕಾಗಿದೆ. ನಿನ್ನಿಂದ ನನಗೆ ಮತ್ತೆ ಪುರಸ್ಕಾರ ಸಿಗುವುದು ಬೇಡ....ತಿಳಿಯಿತೆ ?"

ಮಾಧವ ಸಿಡುಕಿನಿಂದ ಹೇಳಿದ :

"ಎಂದಿಗೋ ತಿಳಿದಿದೆ. ಹೊಸದಾಗಿ ನೀವು ಹೇಳಿ ನಾನು ತಿಳಿಯತಕ್ಕದ್ದು ಏನೂ ಇಲ್ಲ...."

"ತಿಳಿದಿದ್ದರೆ ಒಳ್ಳೆಯದಾಯಿತು....ನಿನಗೂ ಈಗ ಸಕ್ಕ ಬಲಿತಂತಾಗಿದೆ. ನಮ್ಮ ಮಾನ ಉಳಿಸಿಕೊಳ್ಳಬೇಕಾದರೆ ನಾವೇ ಸುಮ್ಮನಾಗಿರುವುದು ಒಳಿತು...."

"ಇಷ್ಟು ತಿಳಿದವರು ಇಷ್ಟು ಮಾತನಾಡುತ್ತಿದ್ದೀರಿ...." ಎಂದು ಹೇಳಬೇಕೆಂದಿದ್ದ ಮಾಧವ ಮಾತು ಬೆಳೆಸಲಿಷ್ಟಪಡದೆ ಸುಮ್ಮನಾದ. ಕೋಣೆಯನ್ನು ಸೇರಿ ವಿರಾಮಕುರ್ಚಿಯಲ್ಲಿ ಬಿದ್ದುಕೊಂಡ. ಕಕ್ಕಿಯಿಂದ ಎರಡು ಮೂರು ಸಲ ಊಟಕ್ಕಾಗಿ ಕರೆ ಬಂದರೂ ಏಳಲಿಲ್ಲ. ಎರಡನೆಯ ಸಲ ಕರೆದಾಗ "ನನಗೆ ಹಸಿವೆಯಿಲ್ಲ" ಎಂದು ಹೇಳಿದ. ಮತ್ತೂ ಒತ್ತಾಯಪಡಿಸಿದಾಗ "ಸಾಕಲ್ಲಮ್ಮ. ಇಷ್ಟಾದಮೇಲೆ ಊಟ ಯಾತಕ್ಕೆ?" ಎಂದೂ ಕೇಳಿದ್ದ.

ಇದಕ್ಕೆ ಪ್ರತಿಯಾಗಿ ರಾಯರ ಮಾರ್ದನಿಯೂ ಕೇಳಬಂದಿತ್ತು. "ಯಾತಕ್ಕೆ ಕರೆಯುತ್ತೀ ಬಿಡು. ಹೊಟ್ಟೆ ಹಸಿದರೆ ತಾನಾಗಿಯೇ ಬರುವ" ಎಂದು. ಇದನ್ನು ಕೇಳಿದನಂತರವಂತೂ ಊಟಮಾಡವಹಾಗಿಲ್ಲವೆಂಬ ನಿರ್ಧಾರ ದಿಂದಲೇ ಮಾಧವ ಸುಮ್ಮನಾಗಿಯೇ ಉಳಿದ.

ಎಷ್ಟೋ ಹೊತ್ತು ಅಡುಗೆಮನೆಯಲ್ಲಿ ಗಂಡಹೆಂಡಿರ ಗುಜುಗುಜು ಮಾತು ನಡೆದೇ ಇತ್ತು. ಮಾತು ನಡೆದದ್ದು ತನ್ನ ವಿಷಯದಲ್ಲಿಯೇ ಎಂಬುದು ಗೊತ್ತಿದ್ದರೂ ಮರೆಯಾಗಿ ನಿಂತು ಕೇಳುವ ಮನಸ್ಸಾಗಲಿಲ್ಲ. ಕೇಳಿಯಾದರೂ ಏನು ? ಹೇಳುವುದನ್ನೆಲ್ಲ ಹೇಳಿಬಿಟ್ಟದ್ದರು. ಸ್ಪಷ್ಟವಾಗಿ 'ಮನೆ ಬಿಟ್ಟು ಹೊರಡು' ಎಂದು ಹೇಳಿರದಿದ್ದರೂ ಅವರ ಮಾತಿನ ಅರ್ಥ ಅದಕ್ಕಿಂತಲೂ ಕಡಿಮೆಯಾಗುತ್ತಿರಲಿಲ್ಲ. ಮಾಧವನನ್ನು ಮುಖ್ಯವಾಗಿ ಕಾಡುತ್ತಿದ್ದ ವಿಷಯ ವೆಂದರೆ ಹೀಗೆ ಒಮ್ಮಿಂದೊಮ್ಮೆಗೆ ಈ ರೀತಿಯ ಸ್ಫೋಟವಾಗುವುದಕ್ಕೆ ಕಾರಣ ವೇನಿರಬಹುದು ಎಂಬುದು. ಮಾಧವನೆಂದುಕೊಳ್ಳುತ್ತಿದ್ದ : "ಸ್ಪಷ್ಟವಾಗಿ ತಾನು ಸೂಳೆಯರ ಸಂಬಂಧವನ್ನಿಟ್ಟುಕೊಂಡಿದ್ದೇನೆ ಎಂಬ ಆಪಾದನೆಯನ್ನು ಇವರು ಮಾಡಿದ್ದು ಯಾವ ಆಧಾರದ ಮೇಲಿಂದ?....ಸರೋಜಿನಿಯ ಸಂಬಂಧ ಇವರಿಗೆ ತಿಳಿದುಬಂದಿರಬಹುದೆ ? ಸಾಧ್ಯವೇ ಇಲ್ಲ. ಸರೋಜಿನಿಯ ಕೂಡ ನಾಲ್ಕಾರು ಬಾರಿ ಸಲಿಗೆಯಿಂದ ಮಾತನಾಡಿದ್ದರೂ ಅದು ಕಾಲೇಜಿನಲ್ಲಿ ಸರೋಜಿನಿಯ ಕೂಡ ಏನಾದರೂ ಸಮೀಪದ ಸಂಬಂಧ ಬೆಳೆದಿದ್ದರೆ ಅದು ಇಂದು ಸಾಯಂಕಾಲ. ಅಲ್ಲಿಂದ ಆಕೆಯನ್ನು ವಸತಿಗೃಹದವರಿಗೆ ಮುಟ್ಟಿಸಿ ಮನೆಗೆ ಬರುವಷ್ಟರಲ್ಲಿ ತಾನೂ ಅವಳೂ ಕೂಡಿ ತಿರುಗಾಡಹೋದ ವಿಷಯ ಇವರಿಗೆ ತಿಳಿಯುವುದು ಸಾಧ್ಯವೇ ಇಲ್ಲ. ಎಂದಮೇಲೆ ಯಾರಾದರೂ ತನ್ನ ವಿರುದ್ಧವಾಗಿ ಬೇಕೆಂತಲೇ ಸುಳ್ಳು ಹೇಳಿರಬೇಕು. ಎಷ್ಟು ಯೋಚನೆ ಮಾಡಿ ದರೂ ತನ್ನ ಕಕ್ಕ ಹೀಗೆ ಅಪಾದಿಸಿರಬಹುದೆಂಬುದು ಮಾಧವನಿಗೆ ತಿಳಿಯ ಲಿಲ್ಲ. ತಾನು ಮತ್ತು ಸರೋಜಿನಿ ಆಡ್ಡಾಡಿದ್ದ ಸಂದರ್ಭಗಳನ್ನೆಲ್ಲ ನೆನೆದ. ತಟ್ಟನೆ ಆ ದಿವಸ ಸಾಯಂಕಾಲ ಎದುರು ಸಿಕ್ಕಿದ ಗೋವಿಂದಗೌಡನ ನೆನ ಪಾಯಿತು. ಗೋವಿಂದಗೌಡನೇ ರಾಯರ ಮುಂದೆ ಬಂದಿದ್ದುದನ್ನು ಹಿಗ್ಗಿಸಿ ಕಥೆ ಕಟ್ಟಿ ಹೇಳಿರಬಹುದೆ ? ಒಂದು ಕ್ಷಣ ಸಾಧ್ಯವೆನಿಸಿತು. ಆದರೆ ಹಾಗೆ ಆತ ಹೇಳಲು ಏನು ಕಾರಣ ? ಆತ ಸರೋಜಿನಿಯ ಬೆನ್ನು ಕಾಯುತ್ತಿದ್ದ ಎಂಬುದನ್ನು ಸಾಯಂಕಾಲವೇ ತಿಳಿದಿದ್ದ. ಆದರೆ ಅದರಲ್ಲಿ ತನ್ನದೇನು ಸಂಬಂಧ ? ಆಕೆಯಜತೆಯಲ್ಲಿ ತನ್ನನ್ನು ಒಂದು ಕ್ಷಣ ನೋಡಿದ ಮಾತ್ರಕ್ಕೆ,

ಗೌಡೆನಿಗೆ ಸಂಶಯ ಬರುವಂಥ ಯಾವ ಸಂದರ್ಭವೂ ಇಲ್ಲದಿದ್ದಾಗ, ಗೌಡ ನಿಗೆ ತನ್ನ ವಿರುದ್ಧವಾಗಿ ರಾಯರ ಮನಸ್ಸನ್ನು ದೂಷಿತಗೊಳಿಸಲಿಕ್ಕೆ ಯಾವ ಕಾರಣವೂ ಇರಲಿಲ್ಲ ಎಂದುಕೊಂಡೆ. ಯಾರು ಬಲ್ಲರು ಇದ್ದರೂ ಇರ ಬಹುದು ಎಂದುಕೊಳ್ಳುತ್ತಿರುವಾಗಲೇ ಯೋಚನೆ ಬೇರೆ ದಿಕ್ಕಿನಲ್ಲಿ ಓಡಿತು.

ಒಟ್ಟಿನಲ್ಲಿ ತನ್ನ ಸುತ್ತಮುತ್ತಲಿನ ಪರಿಸ್ಥಿತಿಯನ್ನು ಎದುರಿಸುವುದು ಹೇಗೆ ಎಂಬುದನ್ನು ಯೋಚಿಸತೊಡಗಿದ. ಇಷ್ಟು ಮಾತುಗಳನ್ನಾಡಿಕೊಂಡು ಅಲ್ಲಿಯೆ ಉಳಿಯಲು ಮಾಧವನ ಮನಸ್ಸು ಸುತರಾಂ ಒಪ್ಪಲಿಲ್ಲ. ಹೇಗಿ ದ್ದರೂ ಪರೀಕ್ಷೆಯಾದ ಕೂಡಲೆ ತಾನು ಹೊರಟುಹೋಗುವವನೆ ಇದ್ದ. ಆದರೆ ಆಗ ಹೊರಡುವುದಕ್ಕೂ ಈಗ ಹೊರಡುವುದಕ್ಕೂ ಎಷ್ಟು ಅಂತರ ? ಹಾಗೆ ನೋಡಿದರೆ ಮಾಧವನ ದೃಷ್ಟಿಯಿಂದ ಯಾವ ಅಂತರವೂ ಕಾಣಲಿಲ್ಲ. ಯಾವಾಗ ಹೋದರೂ ತಿರುಗಿ ಬರುವ ವಿಚಾರವನ್ನಂತೂ ಇಟ್ಟುಕೊಂಡಿರಲೇ ಇಲ್ಲ. ಆಪಾದನೆಯ ವಿಷಯ ಅವರಿಗೆ ಸೇರಿದ್ದು. ಅವರು ಏನೆಂದರೆ ಏನಾಗ ಬೇಕು? ಮನಸ್ಸು ಮತ್ತೆ ಸರೋಜಿನಿಯ ಕಡೆಗೆ ಓಡಿತು. ತನ್ನ ಪರಿ ಸ್ಥಿತಿಯೇ ಹೀಗೆ ಒಮ್ಮಿಂದೊಮ್ಮೆ ಹದಗೆಟ್ಟಾಗ ಆಕೆಗಾಗಿ ತಾನೇನು ಮಾಡ ಬಲ್ಲನೆಂಬುದನ್ನು ಯೋಚಿಸಿದಾಗ ಒಂದು ಕ್ಷಣ ನಿರಾಶೆಯಾಯಿತು. ಈಗೇಕೆ ಅದರ ಯೋಚನೆ ? ಪರೀಕ್ಷೆಯಂತೂ ಮುಗಿಯಲಿ, ಎಂದು ಸಮಾಧಾನ ತಂದುಕೊಂಡ. ಪರೀಕ್ಷೆ ಇನ್ನು ಮೂರು ವಾರ. ಅವರೆಗೆ ಇಲ್ಲಿಯೇ ಇರು ವುದೇ ? ಇಲ್ಲಿಯೇ ಇದ್ದು ಅವರ ಕಣ್ಣಿಗೆ ಕೀಸರಾಗಿ ಚಿಕ್ಕಪುಟ್ಟ ಮಾತಿಗಾಗಿ ಅವರಿಂದ ಬಾಯಿಗೆ ಬಂದುದನ್ನು ಅನ್ನಿಸಿಕೊಂಡು ಇರುವುದಕ್ಕಿಂತ ಪರೀಕ್ಷೆಯ ವರೆಗೆ ಊರಲ್ಲಿಯ ತನ್ನ ಒಬ್ಬಿಬ್ಬ ಗೆಳೆಯರ ಹತ್ತಿರ ಇದ್ದರೆ ಹೇಗೆ ಎಂದು ಯೋಚಿಸಿದ. ಆದರೆ ಗಳೆಯರೆದುರು ಎಲ್ಲವನ್ನು ಹೇಳಿ ಒಂದೇ ಊರಲ್ಲಿ ಹೀಗೆ ಇರುವುದಕ್ಕೆ ಮನಸ್ಸು ಒಪ್ಪಲಿಲ್ಲ. ಅಲ್ಲದೆ ಕಕ್ಕನಿಗೆ ತನ್ನ ವಿರುದ್ಧ ವಾಗಿ ಇಲ್ಲದ ಅಪಪ್ರಚಾರವನ್ನು ಹೂಡಲಿಕ್ಕೆ ಮಾತ್ರ ಅದೂ ಒಂದು ಅನುಕೂಲ ಸಂದರ್ಭವಾದೀತೆಂದೆಣಿಸಿ ಪರೀಕ್ಷೆ ದಿನದವರೆಗೆ ದೇವನೂರಿಗೆಯೆ ಹೋಗತಕ್ಕದೆಂದು ನಿಶ್ಚಯಿಸಿದ. ಊರಿಗೆ ಹೊರಡುವುದೆಂದ ಕೂಡಲೆ ಮಾಧವನಿಗೆ ನೂರು ಯೋಚನೆ. ಕಕ್ಕ, ಕಕ್ಕಿ ಮತ್ತೆ ಏನನ್ನಾದರೂ ಆಡು ವುದು ಖಂಡಿತ. ಏನೆಂದರೇನು ? ಅವರು ಆಡಿದ್ದೇನು ಕಡಿಮೆ ? ಅವರನ್ನು ಬಿಟ್ಟು ಒಮ್ಮೆ ಹೊರಟುಹೋಗುವುದೆಂದಮೇಲೆ ಅವರೇನೆಂದಾರೆಂಬುದರ ಕಡೆಗೆ ಗಮನವೇಕೆ? ಅಲ್ಲದೆ ಈ ಮನೆಯನ್ನು, ಕಕ್ಕನ ಆಶ್ರಯವನ್ನು

ಬಿಟ್ಟುಹೋಗುವುದರಲ್ಲಿ ಮಾಧವನಿಗೆ ಬೇರೆಯಾದ ಒಂದು ರೀತಿಯ ಸಮಾಧಾನವೂ ಎನಿಸುತ್ತಿತ್ತು. ಆ ಮನೆಯನ್ನು ಬಿಟ್ಟುಹೋಗುವಂತಾದರೆ ತನಗೆ ಬೇಡವಾದ ತಂದೆಯ ಸಂಬಂಧವನ್ನು—ಇಡೀ ಗತಕಾಲವನ್ನೇ—ಮರೆಯುವುದು ಸಾಧ್ಯವಾಗಿ ಕಾಣುತ್ತಿತ್ತು. ಕಕ್ಕನ ಆಶ್ರಯದಲ್ಲಿದ್ದರೂ—ಅದು ತಂದೆಯ ಅನ್ಯಾಯದ ದುಡ್ಡಿನ ಆಶ್ರಯವೇ ಎಂದುಕೊಳ್ಳುತ್ತಿದ್ದ ಮಾಧವನಿಗೆ ಅದರಿಂದ ಸಾಧ್ಯವಾದಷ್ಟು ಬೇಗ ಬಿಡುಗಡೆಯನ್ನು ಪಡೆಯಬೇಕಾಗಿತ್ತು. ಆ ದೃಷ್ಟಿಯಿಂದ ಸಾಯಂಕಾಲ ನಡೆದ ಮಾತು ಒಳ್ಳೆಯದಕ್ಕೇ ಆಯಿತು ಎಂದುಕೊಂಡು ಊರು ಬಿಟ್ಟು ತಾಯಿ ಮತ್ತು ಸೋದರಮಾವನನ್ನು ಕೂಡುವುದೇ ಒಳ್ಳೆಯದೆಂದು ಗೊತ್ತುಮಾಡಿದ.

ಮುಂಜಾನೆ ಬೇಗನೆ ಎದ್ದು ತನ್ನ ಕೋಣೆಯಲ್ಲಿಯ ತನ್ನ ಪುಸ್ತಕ, ಸಾಮಾನುಗಳನ್ನು ಕಟ್ಟಿಟ್ಟು ಮನೆಯಲ್ಲಿ ಚಹಾ ಸಿದ್ಧವಾಗುವುದರೊಳಗಾಗಿಯೆ ಸೈಕಲ್ಲನ್ನೇರಿ ಹೋದ. ಸಂಘಕ್ಕೆ ಸಂಬಂಧಪಟ್ಟ ಹಣಕಾಸಿನ ವಿಚಾರವನ್ನೆಲ್ಲ ಸಹಕಾರ್ಯದರ್ಶಿಯೊಡನೆ ಗೊತ್ತುಮಾಡಿ, ಕಡಿಮೆ ಇದ್ದ ದುಡ್ಡನ್ನು ತಾನು ಊರಿನಿಂದ ಕಳುಹಿಸುವುದಾಗಿ ಹೇಳಿ, ತನಗೆ ಬೇಕಾದ ಕೆಲವು ಸಾಮಾನುಗಳನ್ನು ಕೊಂಡು ಮನೆಗೆ ಬರಬೇಕಾದರೆ ಹತ್ತು ಗಂಟೆಯೇ ಆಗಿತ್ತು. ಹೊರಡುವಾಗ ಎಂದಿನಂತೆ ಮಾಧವ ತನ್ನ ಕೋಣೆಗೆ ಬೀಗ ಹಾಕಿಕೊಂಡು ಹೋಗಿದ್ದರಿಂದ ಆತ ಊರಿಗೆ ಹೊರಡುವ ಸಿದ್ಧತೆಯನ್ನು ನಡೆಸಿದ್ದು ಮನೆಯಲ್ಲಿ ಯಾರಿಗೂ ತಿಳಿಯಲಿಲ್ಲ. ಮನೆಗೆ ಬಂದು ಕೋಣೆಯಲ್ಲಿ ತಂದ ಸಾಮಾನುಗಳನ್ನು ಟ್ರಂಕಿನಲ್ಲಿರಿಸುವಾಗ ಕಕ್ಕಿಯ ದನಿ ಕೇಳಿಸಿತು :

"ಎಲ್ಲಿ ಹೋಗಿದ್ದೆ ಮಾಧು, ಮುಂಜಾನೆ ಎದ್ದ ಕೂಡಲೆ ? ಚಹವನ್ನೂ ತೆಗೆದುಕೊಳ್ಳಲಿಲ್ಲ....ನಿನ್ನೆ ರಾತ್ರಿ ಊಟವನ್ನೂ ಮಾಡಲಿಲ್ಲ...."

"ಒಂದಿಷ್ಟು ಕೆಲಸವಿತ್ತು....."

"ಇಷ್ಟು ಅವಸರದಿಂದ ನಡೆಸಿದ್ದೀಯಾದರೂ ಏನು ?"

"ಅವಸರವೇನೂ ಇಲ್ಲ. ನಾನೀಗ ಹನ್ನೆರಡರ ರೈಲಿಗೆ ಊರಿಗೆ ಹೋಗುತ್ತೇನೆ..."

"ಯಾವ ಊರಿಗೆ ?"

"ದೇವನೂರಿಗೆ ಮತ್ತೆಲ್ಲಿ ಹೋಗುವುದು ?"

ಕಕ್ಕಿ ನಿಜವಾದ ಸಹಾನುಭೂತಿಯಿಂದ ಮಾತನಾಡುತ್ತಿದ್ದರೊ ಅಥವಾ ತೋರಿಕೆಗಾಗಿ ಹಾಗೆ ಹೇಳುತ್ತಿದ್ದರೊ ಮಾಧವನಿಗೆ ತಿಳಿಯಲಿಲ್ಲ. ತಿಳಿಯುವ

ಕುತೂಹಲವೂ ಅವನಲ್ಲಿರಲಿಲ್ಲ. ಅವರೆಂದರು :

"ಬೆಳಗಾದರೆ ಪರೀಕ್ಷೆ ಬಂದಿತು. ಈಗ ಹೋಗಿ ಏನು ಮಾಡುತ್ತೀ?''

"ಬೇಡಮ್ಮ. ಯಾತಕ್ಕೆ ಸುಮ್ಮನೆ ಹೋಗಿಬಿಡುತ್ತೇನೆ, ನನ್ನಿಂದ ಅವರಿಗೆ ತೊಂದರೆ ಬೇಡ....''

"ನಿನಗೇನು ಹುಚ್ಚು; ಮಾಧೂ ? ಏನೋ ಸಿಟ್ಟಿನ ಭರದಲ್ಲಿ ಆಡಿರಬಹುದು. ಅಷ್ಟಕ್ಕೆ ಹೀಗೆ ಮನೆ ಬಿಟ್ಟು ಹೊರಡುವುದೆ? ಛೀ....! ಬಿಡು....''

ಅದೆಂಥ ಸಿಟ್ಟಿನ ಭರವಮ್ಮ? ಸುಮ್ಮಸುಮ್ಮನೆ ಬಾಯಿಗೆ ಬಂದ ಹಾಗೆ ಆಡಿದರೆ? ಆಯಿತು, ಅಂದುಕೊಳ್ಳುವಲ್ಲರೇಕೆ. ಹೇಗಾದರೂ ಪರೀಕ್ಷೆ ಮುಗಿದ ಮೇಲೆ ಹೋಗುವವನೇ ಇದ್ದೆ. ಈಗಲೇ ಹೋಗಿಬಿಡುತ್ತೇನೆ....''

"ಹಾಗೆಲ್ಲ ಮಾಡಬೇಡ. ನಾಲ್ಕು ಜನ ಏನೆಂದಾರು ? ಪರೀಕ್ಷೆ ಮುಗಿದ ಮೇಲೆ ಹೋಗುವಿಯಂತೆ....''

"ನಾನೆಲ್ಲ ಯೋಚನೆ ಮಾಡಿದ್ದೇನೆ. ಬೆಳ್ಳಬೆಳತನಕ ಅದನ್ನೇ ಯೋಚಿಸಿದ್ದೇನೆ. ಹೊರಡುವುದೇ ಒಳ್ಳೆಯದು ಅಂದುಕೊಂಡಿದ್ದೇನೆ...."

"ಅವರೆದುರು ಹೇಳಿದ್ದೀಯಾ ?"

"ಏನೆಂದು ಹೇಳುವುದು ?"

"ಊರಿಗೆ ಹೊರಟುಹೋಗುತ್ತೇನೆಂದು....?"

"ಅದನ್ನೇನು ಹೇಳುವುದು ಅವರಿಗೆ ? ಅವರೇ ಹೇಳಿದ್ದಕ್ಕಿಂತಲೂ ಹೆಚ್ಚು ಮಾತಾಡಿದ್ದಾಗೆ ?"

"ಹಾಗೆಲ್ಲ ಹುಚ್ಚನಂತೆ ಮನಸ್ಸಿಗೆ ಹಚ್ಚಿಕೊಳ್ಳಬಾರದು. ನನ್ನ ಮಾತು ಕೇಳು...."

"ಈ ವಿಷಯದಲ್ಲಿ ಇನ್ನು ಮೇಲೆ ಯಾರ ಮಾತನ್ನೂ ನಾನು ಕೇಳುವಂತಿಲ್ಲ-"

ಮಾಧವ ಖಂಡಿತವಾಗಿ ಹೇಳಿಬಿಟ್ಟ. ಇಷ್ಟರಲ್ಲಿ ಮಾಧವ ಮುಂಜಾನೆ ಹೇಳಿಟ್ಟ ಕುದುರೆ ಗಾಡಿಯೂ ಬಂದುಬಿಟ್ಟಿತು ಆ ಕ್ಷಣಕ್ಕೆ ಮಾತ್ರ ಸೀತಮ್ಮನವರಿಗೆ ನಿಜವಾಗಿಯೂ ಕೆಡಕೆನಿಸಿರಬೇಕು. ಆವರೆಂದರು :

"ಸುಮ್ಮನೆ ಹಟಕ್ಕೆ ಬೀಳುತ್ತಿ ನೋಡು, ಮಾಧವಾ. ಅವರ ಸ್ವಭಾವ ನಿನಗೆ ಗೊತ್ತಿಲ್ಲವೆ ?"

"ಇದೇನೂ ಒಂದೆರಡು ದಿವಸದ ಮಾತಲ್ಲ" ಕಕ್ಕಿ. ಎಂದಿಲ್ಲೊಂದು ದಿನ ಇಷ್ಟು ಆಗತಕ್ಕದ್ದೇ ಇತ್ತು. ಇಂದಿಗೆ ಬಂದುಬಿಟ್ಟಿತು. ಅಷ್ಟೇ. ಯಾರೂ

ಬಾಯಿಂದ ಒಪ್ಪದಿದ್ದರೂ ಮನಸ್ಸಿನಿಂದ ಎಲ್ಲರೂ ಇದನ್ನು ಬಯಸುವವರೇ. ಸುಮ್ಮನೆ ಒಳಗೊಂದು ಹೊರಗೊಂದು ಯಾತಕ್ಕೆ ?"

ಎಂದು ಗಾಡಿಯವನಿಗೆ ಸಾಮಾನು ತೆಗೆದುಕೊಳ್ಳ ಹೇಳಿದ. ಸೀತಮ್ಮ ನವರಿಗೆ ತಡೆಯದಾಗಿ,

"ಅಲ್ಲೋ ಮಾಧವಾ, ಅವರೆಲ್ಲಿಯೋ ಹೊರಗೆ ಹೋಗಿದ್ದಾರೆ. ಮನೆಗೆ ಬಂದಾದರೂ ಬರಲಿ...."

"ಅವರು ಬಂದೇನು, ಮತ್ತೆ ಸುಮ್ಮನೆ ಮಾತು, ಮನಸ್ತಾಪ...."

"ಊಟವನ್ನು ಮಾಡಲಿಲ್ಲ. ಹಾಗೆಯೇ ಹೊರಟುಬಿಟ್ಟೆಯಲ್ಲಪ್ಪಾ...."

"ಊಟ ಇನ್ನು ಊರು ಮುಟ್ಟಿದ ಮೇಲೆಯೇ...."

ಎಂದು ಸಣ್ಣ ಪುಟ್ಟ ಸಾಮಾನುಗಳನ್ನು ಗಾಡಿಯಲ್ಲಿಟ್ಟು ಕಕ್ಕಿಗೆ ಬೀಳ್ಕೊಡಲು ಬಂದ. ಪರಿಸ್ಥಿತಿ ಈ ಮಟ್ಟವನ್ನು ಮುಟ್ಟಬಹುದೆಂದು ಎಣಿಸಿರದ ಸೀತಾಬಾಯಿಯವರು ನಿಜವಾಗಿಯೂ ಹೀಗಾಗಬಾರದಾಗಿತ್ತು ಎಂದು ಕೊಂಡರು. ಸಾಧ್ಯವಿದ್ದಮಟ್ಟಿಗೆ ಮಾಧವನನ್ನು ತಡೆಯಲು ಅವರು ಮಾಡಿದ ಯತ್ನಗಳೆಲ್ಲವೂ ನಿಷ್ಫಲವಾಗಿದ್ದವು. ಮಾಧವ ಮನೆಯಲ್ಲಿರುವುದು ಅವರಿಗೆ ಬೇಕಾಗಿತ್ತೊ, ಇಲ್ಲವೊ. ಆದರೆ ಮಾಧವ ಹೀಗೆ ಹಠಾತ್ತಾಗಿ ಮನೆ ಬಿಟ್ಟು ಹೋಗುವುದು ಮಾತ್ರ ಅವರಿಗೆ ಖಂಡಿತವಾಗಿ ಬೇಡವಾಗಿತ್ತು. ಅದಕ್ಕೆಂದೇ ಅವರ ಕಣ್ಣುಗಳು ಹನಿಗೂಡಿದ್ದವು. ಹೊರಡಲೇಬೇಕೆಂಬ ಹಟ ಮಾಧವನಲ್ಲಿ ಇರದಿದ್ದರೆ ಆ ಅವರ ನೋಟಕ್ಕೆ ಮಾಧವ ಕರಗಬಹುದಿತ್ತು. ಹಟ ಕರಗ ದಿದ್ದರೂ ಹೋಗಬೇಡವೆಂದುಬೇಡುತ್ತಿದ್ದ ಕಕ್ಕಿಯನ್ನು ನೋಡಿ ಕೆಡಕೆನಿಸಿತು. 'ಎಷ್ಟಾದರೂ ಹೆಣ್ಣುಜೀವ. ತನ್ನ ತಾಯಿ ಬೇರೆ, ಇವರು ಬೇರೆಯೆ ?' ಎಂದುಕೊಂಡ.

ಮಾಧವನಿಗೂ ಮಾತು ಬಾರದಾಗಿತ್ತು.

"ನಾನು ಹೊರಡುವೆ...." ಎಂದು ಆತ ನಮಸ್ಕರಿಸಿದಾಗ ಅವನ ಕಣ್ಣಿ ಲ್ಲಿಯೂ ನೀರೂರಿತ್ತು.

"ಬೇಡ ಎಂದರೆ ನೀನು ಕೇಳುವುದಿಲ್ಲಪ್ಪಾ....ಇನ್ನು ಮನೆಗೆ ಬಂದು ಕೇಳಿದರೆ ನಾನು ಏನು ಹೇಳಲಿ?" ಎಂದು ಕಣ್ಣೊರಸಿಕೊಂಡರು. ಮಾಧವ ನಿಧಾನವಾಗಿ ಹೇಳಿದ :

"ನೀವೇನೂ ಯೋಚಿಸಬೇಡಿರಿ. ಊರಿಗೆ ಹೊರಟುಹೋದ ಎಂದು ಹೇಳಿ ಬಿಡಿರಿ...."

"ಅದಂತೂ ಆಯಿತಪ್ಪಾ....ಹೋಗಬೇಡ, ಮಾಧವಾ....ನನ್ನ ಮಾತು ಕೇಳು....ಹೀಗೆ ಹೊರಟುಹೋಗಬೇಡ."

"ಸುಮ್ಮನೆ ನೀವು ಮನಸ್ತಾಪ ಮಾಡಿಕೊಳ್ಳಬೇಡಿರಮ್ಮ....ನಾನು ಬರು ತ್ತೇನೆ...."

ಎಂದವನೆ ಮಾಧವ ಹೊರಬಿದ್ದು ಗಾಡಿಯನ್ನೇರಿದ. ಮತ್ತೊಮ್ಮೆ ತಿರುಗಿ ಮನೆಯನ್ನು ನೋಡಬೇಕೆಂಬ ಆಸೆಯಾಯಿತು. ತಿರುಗಿ ನೋಡಿದ. ನೀರು ತುಂಬಿದ ಕಣ್ಣುಗಳಿಂದ ಮಾಧವನನ್ನೇ ನೋಡುತ್ತಿದ್ದ ಸೀತಮ್ಮ ಬಾಗಿಲಲ್ಲಿ ನಿಶ್ಚಲರಾಗಿ ನಿಂತಿದ್ದರು. ಮಾಧವ ಹೊರಟುಹೋದನೆನ್ನುವುದಕ್ಕಿಂತ ಹೆಚ್ಚಾಗಿ ತಮಗೆ ಮಕ್ಕಳಿರಲಿಲ್ಲವೆಂಬ ಅರಿವು ಆ ಕ್ಷಣಕ್ಕೆ ಅವರನ್ನು ಬಾಧಿಸು ತ್ತಿರುವಂತಿತ್ತು !

ಮಾಧವ ಹಿಡಿಯಬೇಕೆಂದಿದ್ದ ರೈಲು ಹನ್ನೆರಡು ಗಂಟೆಗೆ ಹೊರಡು ತ್ತಿದ್ದರೂ ಆತ ಅವಸರದಿಂದ ಹೊರಟದ್ದು ರಾಯರು ಮನೆಗೆ ತಿರುಗಿ ಬರುವ ಮೊದಲು ಹೊರಟುಬಿಡಬೇಕೆಂಬುದಕ್ಕಾಗಿ.ಅಲ್ಲದೆ ಸಾಧ್ಯವಾದರೆ ಹನ್ನೊಂದು ಗಂಟೆಗೆ ಮೊದಲೇ ನಿಲ್ದಾಣವನ್ನು ಸೇರಿ, ಸಿಕ್ಕರೆ ಸರೋಜಿನಿಯನ್ನು ಮಾತ ನಾಡಿಸೋಣ ಎಂಬ ಉದ್ದೇಶದಿಂದ. ಎಷ್ಟು ಅವಸರ ಮಾಡಿದರೂ ಕಕ್ಕಿಯ ಮಾತು ಅನಿರೀಕ್ಷಿತವಾಗಿ ವಿಲಂಬವನ್ನುಂಟುಮಾಡಿ ಮಾಧವ ನಿಲ್ದಾಣವನ್ನು ಸೇರಿದಾಗ ಹನ್ನೊಂದರ ರೈಲು ಹೊರಡುವುದರಲ್ಲಿತ್ತು. ಗಾಡಿಯವನಿಗೆ ದುಡ್ಡು ಕೊಟ್ಟು, ಸರೋಜಿನಿ ಕುಳಿತ ಕಂಪಾರ್ಟ್‌ಮೆಂಟನ್ನು ಹುಡುಕುವಷ್ಟ ರಲ್ಲಿಯೇ ಗಾಡಿ ಹೊರಟುಬಿಟ್ಟಿತು. ನಾಲ್ಕೈದು ಗೆಳತಿಯರ ಕೂಡ ಒಳ್ಳೇ ಜೋರುಜೋರಾಗಿ ಏನನ್ನೋ ಮಾತನಾಡುತ್ತಿದ್ದ ಸರೋಜಿನಿಯ ಮುಖ ನೋಡಲೇನೋ ಸಿಕ್ಕಿತು. ಮಾತನಾಡುವ ಅವಕಾಶವಂತೂ ಹಾಗಿರಲಿ, ಆಕೆಗೆ ಮಾಧವ ನಿಲ್ದಾಣಕ್ಕೆ ಬಂದದ್ದು ತಿಳಿಯದೆಯೂ ಹೋಯಿತು.

ತನ್ನ ರೈಲು ಬರಲು ಇನ್ನೂ ಮುಕ್ಕಾಲು ಗಂಟೆಗಿಂತ ಹೆಚ್ಚಾಗಿ ಅವಕಾಶ ವಿದ್ದಿತಾದ್ದರಿಂದ ಪ್ಲಾಟ್‌ಫಾರ್ಮಿನ ಮೇಲೆ ಅತ್ತಿಂದಿತ್ತ ಅಲೆದಾಡುವ ಹೊರತು ಬೇರೆ ಯಾವ ಕೆಲಸವೂ ಇರಲಿಲ್ಲ. ಆಚೆ ಈಚೆ ಹೆಜ್ಜೆಹಾಕುತ್ತಿದ್ದ ಹಾಗೆ ಮುನ್ನಾದಿನ ಮುಚ್ಚುಂಜೆಯಿಂದ ನಡೆದ ಘಟನೆಗಳೆಲ್ಲವನ್ನು ಮೆಲುಕು ಹಾಕತೊಡಗಿದ. ಮನುಷ್ಯನ ಬಾಳನ್ನು ನದಿಯ ಪ್ರವಾಹಕ್ಕೆ ಹೋಲಿಸುವುದು ಎಷ್ಟು ಸಮಂಜಸ ಎನಿಸಿತು ಮಾಧವನಿಗೆ. ಹತ್ತಾರು ಮೈಲಿ ನಿಧಾನವಾಗಿ ಹರಿದು ಎಲ್ಲಿಯೋ ಎತ್ತರದ ಮೇಲಿಂದ ಧುಮುಕಿ,

ಕಲ್ಲು ಕಂಟೆಗಳ ಮಧ್ಯದಲ್ಲಿ ವೇಗವಾಗಿ ದಾರಿ ಕಡಿದುಕೊಂಡು ಹೋಗುವಂತೆ ಜೀವನವಾದರೂ ಕೆಲವು ದಿವಸ ಯಾವ ಏರಿಳಿತವೂ ಇಲ್ಲದೆ ನಡೆದು ಒಮ್ಮೆಲೆ ಘಟನೆಗಳು ನುಗ್ಗಿ ಬಂದು ಮನುಷ್ಯನಿಗೆ ಯೋಚಿಸಲೂ ಅವಕಾಶವನ್ನು ಕೊಡುತ್ತಿರಲಿಲ್ಲ ಎನಿಸಿತು. ಕಳೆದ ಇಪ್ಪತ್ತು ಗಂಟೆಗಳ ಘಟನೆಗಳಲ್ಲಿ ಸಿಲುಕಿ ಯೋಚಿಸಲಾಗದ ಮನಸ್ಸು ಒಟ್ಟಿನಲ್ಲಿ ನಿರಾಶೆಯಲ್ಲಿ ಸಿಕ್ಕು ಒದ್ದಾಡುತ್ತಿತ್ತು. ಅದರಲ್ಲಿ ಸರೋಜಿನಿಯನ್ನು ಕಾಣಲಾಗದ್ದಕ್ಕಾಗಿ ಆದ ಅಸಮಾಧಾನ ನಿರಾಶೆಯನ್ನು ಇಮ್ಮಡಿಸಿ ಬದುಕು ಬಯಸಿದಂತೆ ನಡೆಯುವುದಿಲ್ಲವೆಂಬುದನ್ನು ಒತ್ತಿ ಹೇಳುತ್ತಿತ್ತು. ಗೆಳೆಯನೊಂದಿಗೆ ತಿಂದ ಫಲಾಹಾರದ ಹೊರತಾಗಿ ಮುಂಜಾನೆಯಿಂದ ಹೊಟ್ಟೆಗೆ ಏನೂ ಬಿದ್ದಿರಲಿಲ್ಲವಾದ್ದರಿಂದ ಏರುತ್ತಿದ್ದ ಬಿಸಿಲಿನೊಡನೆ ಒಡಲ ದಾಹವೂ ಬೆಳೆಯುತ್ತಿತ್ತು. ಫಲಾಹಾರದ ಕಟ್ಟೆಯವರೆಗೂ ಸುಳಿದಾಡಿ ಬಂದ. ಯಾವ ಪ್ರಯೋಜನವೂ ಕಾಣಲಿಲ್ಲ. ಮನೆ ಬಿಟ್ಟು ಬರುವಾಗಿನ ಹುಮ್ಮಸ್ಸು ಆಗಲೇ ಕರಗತೊಡಗಿ, ಹಸಿದ ಹೊಟ್ಟೆ ಕೆರಳಿದ ಮನಸ್ಸನ್ನು ಇನ್ನೂ ಕೆರಳಿಸುತ್ತಿತ್ತು.....

ರೈಲು ನಿಧಾನವಾಗಿ ಹೊರಟಿತು—ಸರೋಜಿನಿಯು ಹೋದ ದಿಕ್ಕಿಗೆ ವಿರುದ್ಧವಾಗಿ! ಸರೋಜಿನಿಯಾದರೂ ತನ್ನನ್ನೇ ನೆನೆಯುತ್ತ ಕ್ಷಣಕ್ಷಣಕ್ಕೂ ದೂರವಾಗುತ್ತಿದ್ದರೂ ಇಬ್ಬರ ನೆನಕೆಯಿಂದಇಬ್ಬರೂಒಬ್ಬರೊಬ್ಬರ ಹತ್ತಿರವೇ ಎಂದುಕೊಂಡ. ಮಾರ್ಚ್ ತಿಂಗಳ ಮಧ್ಯಾಹ್ನದ ಬಿಸಿಲು ಚುರುಕಾಗಿ ಉರಿಯುತ್ತಿತ್ತು. ಧಾರಾಳವಾಗಿ ಬೆವರನ್ನು ಸುರಿಯಿಸಿ ಸಾಯಂಕಾಲದ ಮಳೆಯ ಆಶ್ವಾಸನವನ್ನು ಕೊಡುತ್ತಿತ್ತು.

ತಂದೆ ತೀರಿಹೋದಾಗಿನಿಂದ ತನ್ನನ್ನೂ ತನ್ನ ತಾಯಿಯನ್ನೂ ಮನೆಯಲ್ಲಿರಿಸಿಕೊಂಡು, ಎಂಥ ಬಿರುಮಾತುಗಳನ್ನೇ ಆಡಿರಲಿ, ಅವುಗಳಿಗೆ ಏನಾದರೂ ಸಂದರ್ಭ ಸಮರ್ಥನೆ ಇದ್ದಿರಬಹುದು—ಮನೆತನವನ್ನು ನಡೆಯಿಸಿಕೊಂಡು ಬಂದ ಕಕ್ಕ ಆಡಿದ ಒಂದು ಮಾತಿಗಾಗಿ ಹೀಗೆ ತಾನು ಅವರಿಗೆ ಒಂದು ಮಾತನ್ನೂ ಹೇಳದೆ ಹೊರಟುಬಂದದ್ದು ಸರಿಯೇ? ಎಂದು ವಿಚಾರ ಆಗಾಗ ಕೆಣಕುತ್ತಿತ್ತು. ಸರಿಯಲ್ಲದೆ ಏನು ? ಅಲ್ಲದೆ ಅವರು ತಮಗಾಗಿ ಮಾಡಿದಾದ್ದರೂ ಏನು ? ತನ್ನ ತಂದೆಯ ದುಡ್ಡು ಕೈಗೆ ಬಿದ್ದಿರದಿದ್ದರೆ ಈ 'ಔದಾರ್ಯ'ವನ್ನು ತೋರಿಸುವುದು ಸಾಧ್ಯವೇ ಇರಲಿಲ್ಲ ಎಂಬುದನ್ನು ರಾಮರಾಯರನ್ನು ಬಲ್ಲ ಯಾರೂ ಹೇಳಬಹುದಿತ್ತು. ದುಡ್ಡನ್ನು ಎತ್ತಿ ಹಾಕಿಯೂ ತನ್ನನ್ನು, ತನ್ನ ತಾಯಿಯನ್ನು, ಹೊರದೂಡಿಬಿಟ್ಟಿದ್ದರೆ ?

ಅಷ್ಟನ್ನಾದರೂ ಮಾಡಿರಲಿಲ್ಲ. ಅದಕ್ಕೆ ಒಮ್ಮೊಮ್ಮೆ ಕಕ್ಕನ ಬಗೆಯಲ್ಲಿ ಕೃತಜ್ಞತೆಯೆನಿಸಿ ತಾನು ಮಾಡಿದ್ದು ತೀರ ತಪ್ಪು ಎನಿಸುತ್ತಿತ್ತು. ಆದರೆ ಮರುಕ್ಷಣದಲ್ಲಿಯೇ ಸ್ವಾಭಿಮಾನ ಪುಟಿದೆದ್ದು ಕೇಳುತ್ತಿತ್ತು. 'ಅವರು ಏನು ಮಾಡಿದರೂ ಮಾಡಲಿ. ಪರಾವಲಂಭಿಯಾಗಿ ಎಷ್ಟು ದಿನಸ ಹೀಗೆಯೇ ಬಾಳುವವ ನೀನು ? ತಂದೆಯ ಬಾಳಿಗೆ ಅಂಟಿದ ಕಲಂಕದಿಂದ ದೂರವಾಗಿರ ಬೇಕೆಂದಲ್ಲವೆ ನಿನ್ನ ಆಕಾಂಕ್ಷೆ? ಹಾಗಾದರೆ ಅದರಿಂದ—ಅದರ ಆಶ್ರಯದಿಂದ —ನೀನೀಗ ದೂರವಾಗುತ್ತ ಇದ್ದಾಗ ಈ ಮರುಕ ಯಾತಕ್ಕಾಗಿ' ಎಂದು ಕಕ್ಕನಾಡಿದ ಕಟುಮಾತು ಎದೆಯನ್ನು ಕೊರೆಯುತ್ತಿತ್ತು. ಮನೆತನಕ್ಕೆ ತನ್ನ ತಂದೆ ತಂದ 'ಮಾನ' ಸಾಕಾಗಿತ್ತಂತೆ! ಎಷ್ಟಾದರೂ ತಂದೆಯ ಮಗನಲ್ಲವೆ ?—ಎಂದೂ ಮೂದಲಿಸಿದ್ದರು. ಆ ಒಂದು ಮಾತಿನಿಂದ ಇದು ವರೆಗೆ ತಾನು ತಿಳಿಯದ ತನ್ನ ತಂದೆಯ ಜೀವನದ ಒಂದಂಶದ ಮೇಲೆ ಬೆಳ ಕನ್ನು ಕೆಡಹಿದಂತಾಗಿತ್ತು, ಆದರೆ ಯಾರು ಬಲ್ಲರು ? ತನ್ನ ತಂದೆಯ ಬಗೆ ಯಲ್ಲಿ ಊರವರ ಬಾಯಲ್ಲಿ ಒಳ್ಳೆಯ ಮಾತುಗಳನ್ನು ಕೇಳಿದಷ್ಟೂ ಪಿಸು ಮಾತುಗಳನ್ನೂ ಕೇಳಿದ್ದ. ಆದರೆ ಆ ಯಾವ ಮಾತಿನಲ್ಲಿಯೂ ಅವರ ವಿವಾಹಬಾಹಿರ ಸಂಬಂಧಗಳ ಬಗ್ಗೆ ಸೂಚನೆ ಬಂದಿರಲಿಲ್ಲ. ಇರಬಹುದು. ಯಾರು ಬಲ್ಲರು? ಒಳ್ಳೆ ಘನವಂತನೆನಿಸಿಕೊಂಡು ದುಡ್ಡಿದ್ದವರ ಠೀವಿಯಲ್ಲಿ ಮೆರೆದಿದ್ದ ಆತ ಇಂಥ ಸಂಬಂಧಗಳನ್ನು ಬೆಳೆಸಿದ್ದರೂ ಇರಬಹುದು ಎಂದು ಕೊಂಡ. ಯೋಚಿಸುತ್ತಿದ್ದ ಹಾಗೆಯೇ ತನ್ನಷ್ಟಕೆಯೇ ಅಂದುಕೊಂಡ: 'ಥೂಃ! ಎಂಥ ವಿಚಾರಹೀನ ಜೀವನ ಸುಖವಾಗಿರಬೇಕೆಂಬ ಮಾತ್ರಕ್ಕೆ ಏನು ಬೇಕಾದುದನ್ನು ಮಾಡಬಹುದೆ ?' ಇನ್ನೊಬ್ಬರನ್ನು ಮೋಸ ಮಾಡ ಬಹುದೆ? ಪಾಪದ ಬೆಲೆ ಕೊಟ್ಟು ಸುಖವನ್ನು ಕೊಳ್ಳಬಹುದೆ ?' ಎಂದು ಅವನ ವಿಚಾರಗಳಿಗೆ ಸರಿಹೋಗುವಂತೆ ರೈಲುದಾರಿಯ ಬದಿಯಲ್ಲಿ ನಿಂತ ಮಳೆ ನೀರಿನಲ್ಲಿ ಯಾವುದೋ ಹೊಲದಲ್ಲಿಯ ಎಮ್ಮೆಯೊಂದು ಸುಖವಾಗಿ ಹೊರಳಾಡುತ್ತಿತ್ತು. ಅರೆಗಣ್ಣು ಮುಚ್ಚಿ ಬಾಲವನ್ನು ಒಳ್ಳೆ ಉಲ್ಲಾಸದಿಂದ ಕುಣಿಸುತ್ತಿತ್ತು. 'ಈ ಎಮ್ಮೆಗೆ ಈಗ ಬ್ರಹ್ಮಾನಂದ ! ಆದರೆ ಮೈಯೆಲ್ಲ ಕೆಸರು ಕೊಳೆ ಮೆತ್ತಿಕೊಂಡಿದೆ ಎಂಬುದರ ಅರಿವೂ ಇಲ್ಲ !' ಎಂದ. ತನಗೇ ತಿಳಿಯದಲೆ ಈ ಪ್ರಾಣಿಗೂ ತನ್ನ ತಂದೆಗೂ ಏನು ವ್ಯತ್ಯಾಸ ? ಎಂಬ ವಿಚಾರವೂ ಸುಳಿದುಹೋಯಿತು. ಹಾಗೆ ನೋಡಿದರೆ ಈ ಪ್ರಾಣಿಯೇ ಮೇಲು. 'ಬುದ್ಧಿಯಿಲ್ಲದ ವಶ' ಎಂಬ ಸಮರ್ಥನೆಯಾದರೂ ಇದೆ ! ಆದರೆ

ಬುದ್ಧಿಯಿದ್ದ ಮನುಷ್ಯನೆಂದೆನಿಸಿಕೊಂಡವನಿಗೆ ?....

ಮನೆಯನ್ನು ಕುರಿತು ಯೋಚಿಸಿದ ಹಾಗೆಲ್ಲ ಮನಸ್ಸು ಗತಕಾಲದಲ್ಲಿ ಸಿಲುಕಿಬಿಡುತ್ತಿತ್ತು. ಆ ಗತಕಾಲ ಮಾಧವನಿಗೆ ಬೇಡವಾಗಿತ್ತು. ತಂದೆ ಇದ್ದಾಗಿನ ಅನ್ಯಾಯದ ವೈಭವ, ತಂದೆ ಇಲ್ಲದಾದನಂತರದ ಅಸಹಾಯಕ ಬಾಳು ಇವೆರಡನ್ನೂ ಮರೆತು ಹೊಸದಾದ, ಸುಖವಾದ ಬಾಳನ್ನು ಕಟ್ಟಬೇಕೆನ್ನುತ್ತಿದ್ದ ಮಾಧವ ಭೂತಕಾಲವನ್ನು ಮರೆಯದೆ ಗತಿಯಿಲ್ಲವೆಂದುಕೊಂಡಷ್ಟೂ ಆ ಭೂತಕಾಲ ಅವನ ಬೆನ್ನು ಬಿಡದಂತಿತ್ತು. ಗಾಡಿ ವೇಗವಾಗಿ ಸಾಗಿತ್ತು. ಕಿಟಕಿಯಲ್ಲಿ ಮೋರೆಯನ್ನಿಟ್ಟು ವೇಗವಾಗಿ ಹಿಂದೆ ಓಡುತ್ತಿದ್ದ ನೆಲವನ್ನು ದಿಟ್ಟಿಸುತ್ತ ಇದ್ದ. ನೆಲ ಓಡುತ್ತಿದೆ—ಕ್ಷಣಕ್ಷಣಕ್ಕೂ ಹಿಂದೆ ಬೀಳುತ್ತಿದೆ. ಆದರೆ ಆ ನೆಲ ತನ್ನ ಸ್ಥಳ ಬಿಟ್ಟು ಕದಲಲಿಲ್ಲ. ಮಾಧವನಿಗೆ ಎನಿಸಿತು, ಭೂತಕಾಲವೂ ಹೀಗೆಯೇ ಇರಬಹುದೆ ? ಓಡುವವರು ನಾವು, ಕಾಲ ಹಿಂದೆ ಸರಿಯಿತೆನ್ನುವುದು ಬುದ್ಧಿಯ ಭ್ರಮೆಯೆ' ಹಾಗಾದರೆ ? ಹುಚ್ಚು ವಿಚಾರ, ಎಂದುಕೊಂಡು ಬಲದಲ್ಲಿ ನೋಡಿದ. ರೈಲು ಸಲೀಲವಾಗಿ ದೊಡ್ಡದಾದ ಒಂದು ಸುತ್ತುದಾರಿಯಗುಂಟ ವೇಗವಾಗಿ ಸಾಗಿತ್ತು. ನೋಡಬೇಕಾದ ದೃಶ್ಯ ಎಂದುಕೊಂಡ ಮಾಧವ. ಎಂಜಿನ್ನು ಉದ್ದಾಮವಾಗಿ, ಧೈರ್ಯವಾಗಿ, ಸಂಪೂರ್ಣವಾದ ಆತ್ಮವಿಶ್ವಾಸದಿಂದ ಮುನ್ನುಗ್ಗುತ್ತಿತ್ತು. ಹಿಂದಿನ ಬಂಡಿಗಳು ಅದರ ನಾಯಕತ್ವವನ್ನು—ಅದರ ಶಕ್ತಿಯನ್ನು—ಮೀರದ್ದಕ್ಕೆ ತಮ್ಮ ಶಕ್ತಿಮೀರಿ ಓಡುತ್ತಿರುವಂತೆ ಭಾಸವಾಗುತ್ತಿತ್ತು. ಎಡಗಡೆಗೆ ತಿರುಗಿ ನೋಡಿದ. ಗಾರ್ಡನ ಬಂಡಿ ಕೊನೆಯದಾಗಿ ನಿರುಪಾಯವಾಗಿ ಎಂಬಂತೆ ಓಡಿಬರುತ್ತಿತ್ತು. ಮಾಧವನಿಗೆನಿಸಿತು, ಮುಂದೆ ಸಾಗಬೇಕೆಂದು ಮುನ್ನುಗ್ಗುತ್ತಿದ್ದ ಈ ಎಂಜಿನ್ನಿಗೆ ಕೂಡ ಹಿಂದೆ ನೇತುಬಿದ್ದ ಈ ಎಲ್ಲ ಬಂಡಿಗಳೂ ಗತಕಾಲದಂತೆಯೇ ಅದರ ವೇಗವನ್ನು ತಡೆಯುತ್ತಿಲ್ಲವೆ ? ಎಂದು. ಮತ್ತೆ ಹುಚ್ಚು ವಿಚಾರ, ಎಂದುಕೊಂಡ. ಎಂಜಿನ್ನು ಮುನ್ನುಗ್ಗುತ್ತಿದ್ದುದು ನಿಜ. ಆದರೆ ಹಿಂದಿನದನ್ನು ಅದು ತಪ್ಪಿಸಲೆಳಸುತ್ತಿಲ್ಲ. ಹಿಂದಿನದನ್ನು ಕೂಡಿಕೊಂಡೇ—ಅದನ್ನು ಎಳೆದುಕೊಂಡೇ—ಮುಂದೆ ಸಾಗಬೇಕೆನ್ನುತ್ತಿರುವಂತಿತ್ತು. ಹಾಗಾದರೆ ಇದು ತನಗೊಂದು ಸೂಚನೆಯೆ ? ಇಂಥ ಯೋಚನೆಗಳಲ್ಲಿ ಪ್ರವಾಸ ಮುಂದರಿಯಿತು.

ದೇವನೂರಿಗೆ ಹೋಗಬೇಕಾದರೆ ಸುಲದಹಳ್ಳಿಯ ನಿಲ್ದಾಣದಲ್ಲಿಳಿದು ಕಾಲ್ನಡಿಗೆಯಿಂದ ಒಂದುವರೆ ಮೈಲಿ ಸಾಗಬೇಕು. ಮಧ್ಯಾಹ್ನದ ಊಟ

ಇಲ್ಲದೆ ಕಂಗಾಲಾಗಿ ಹಸಿದಿದ್ದ ಮಾಧವ ನಿಲ್ದಾಣದಲ್ಲಿ ನಾಲ್ಕೂವರೆಯ ಸುಮಾರಿಗೆ ಇಳಿದಾಗ ಈ ಕಾಲು ದಾರಿಯನ್ನು ಸವೆಯಿಸುವುದು ಹೇಗೆ ಎಂಬ ಯೋಚನೆಯಲ್ಲಿದ್ದ. ಸಣ್ಣ ನಿಲ್ದಾಣವಾದ್ದರಿಂದ ಊರಿನವರಿಗೆ ಸಾಮಾನು ಗಳನ್ನು ಒಯ್ಯಲು ಕೂಲಿಯವರು ಸಿಗುವುದಂತೂ ಸಾಧ್ಯವಿರಲಿಲ್ಲ. ಸ್ಟೇಷನ್ ಮಾಸ್ತರರಿಗೆ ಹೇಳಿ ಸಾಮಾನುಗಳನ್ನು ಅವರ ವಶದಲ್ಲಿ ಕೊಟ್ಟು ನಡೆದ— ಕಾಲೆಳೆಯುತ್ತ.

ಮಾಧವ ಸೋದರಮಾವನ ಮನೆ ಸೇರಿದಾಗ ಐದು ಗಂಟೆಯಾಗಿ ಹೋಗಿತ್ತು. ರಾಧಕ್ಕ ಮತ್ತು ಅವರ ಅತ್ತಿಗೆ ನಡುಮನೆಯಲ್ಲಿ ಕಾಳು ಆರಿಸುತ್ತ ಕುಳಿತ್ತಿದ್ದರು. ಅನಿರೀಕ್ಷಿತವಾಗಿ ಬಂದ ಮಾಧವನನ್ನು ನೋಡಿಇಬ್ಬರೂ ತಮ್ಮ ಕಣ್ಣುಗಳನ್ನು ನಂಬಲಾರದಂತಾದರು. ರಾಧಕ್ಕನಂತೂ ಕುಳಿತಲ್ಲಿಂದ ಎದ್ದು ಬಂದು,

"ಏನೋ ಮಾಧವ, ಒಮ್ಮೆಲೆ ಬಂದುಬಿಟ್ಟೆಯಲ್ಲೋ.... ಎಂದರು.?"

"ಹುಂ....ಬಂದುಬಿಟ್ಟೆ, ಆಯಿತು" ಎಂದ ಮಾಧವ.

ಮಾಧವನ ಬಗೆಯಲ್ಲಿ ಪ್ರತಿನಿತ್ಯವೂ ನೂರು ಚಿಂತೆಗಳಿಗೊಳಗಾಗುತ್ತಿದ್ದ ರಾಧಕ್ಕ ಮಾಧವ ಬಂದುದರಿಂದ ಸಮಾಧಾನ ಹೊಂದಿದ್ದರೂ ಹೀಗೆ ಅಕಸ್ಮಾತ್ತಾಗಿ ಬಂದುದೇಕಿರಬಹುದು ಎಂಬ ಯೋಚನೆಗೂ ಒಳಗಾದರು. ಪರೀಕ್ಷೆಯಂತೂಮುಗಿದಿರುವುದು ಸಾಧ್ಯವಿರಲಿಲ್ಲ. ಅಂದಮೇಲೆ ಆತ ಹೊರಟು ಬರಲಿಕ್ಕೆ ಏನಾದರೂ ವಿಶೇಷವಾದ ಸಂದರ್ಭವೊದಗಿರಲಿಕ್ಕೆ ಸಾಕು ಎಂದೇ ಕೇಳಿದರು !

"ನಾವು ಹೊರಡುವಾಗ ಪರೀಕ್ಷೆ ಇನ್ನೂ ಒಂದು ತಿಂಗಳು ಇದೆ ಎನ್ನುತ್ತಿದ್ದೆಯಲ್ಲೋ...."

"ಹೌದು....ಇನ್ನೂ ಹದಿನೈದು ಇಪ್ಪತ್ತು ದಿವಸಕ್ಕೆ ಪರೀಕ್ಷೆ."

"ಹಾಗಾದರೆ ಇಷ್ಟೇಕ್ಕೆ ಅವಸರದಿಂದ ಬಂದುಬಿಟ್ಟೆ ?"

"ಅದನ್ನೆಲ್ಲ ಆಮೇಲೆ ಹೇಳುವೆ....ಈಗ ನನಗೆ ತುಂಬ ಹಸಿವು....ತಿನ್ನಲಿಕ್ಕೆ ಏನಾದರೂ ಕೊಡುವಿರೊ ಇಲ್ಲವೊ....?" ಎಂದು ಆತ ಕೈಕಾಲು ಮೋರೆ ತೊಳೆಯಲು ಹೋದ. ಅತ್ತಿಗೆಯವರು ಅಡುಗೆಮನೆ ಸೇರಿದರು. ರಾಧಕ್ಕನ ಯೋಚನೆ ಅವರ ಕುತೂಹಲವನ್ನು ಇಮ್ಮಡಿಸಿತು. ಮಾಧವನ ಸ್ವಭಾವವನ್ನು ಬಲ್ಲ ಅವರು ಆತ ಬಂದಿರಲಿಕ್ಕೆ ಏನಾದರೂ ಒಂದು ಪ್ರಕರಣ ನಡೆದಿರಲೇ ಬೇಕೆಂದು ಕಳವಳಪಟ್ಟರು. ಮಾಧವ ಬರುತ್ತಲೇ ಕೇಳಿದರು :

"ಮುಂಜಾನೆ ಯಾವಾಗ ಊಟ ಮಾಡಿದ್ದಿ ?"

"ಮುಂಜಾನೆ ಊಟ ಮಾಡಲಿಲ್ಲ. ತುಂಬ ಅವಸರವಾಗಿಬಿಟ್ಟಿತು....ನಿನ್ನೆ ರಾತ್ರಿ ಊಟವನ್ನು ನಾನೇ ಮಾಡಲಿಲ್ಲ...."

ರಾಧಕ್ಕನಿಗೆ ಈಗ ಮನವರಿಕೆಯಾಗಿಬಿಟ್ಟಿತು. ಮಾಧವ ಏನೋ ಒಂದು ಮನಸ್ತಾಪದ ಮೂಲಕವೇ ಹೊರಟುಬಂದಿದ್ದಾನೆಂದು. ನೇರವಾಗಿ ಕೇಳಿಯೇ ಬಿಟ್ಟರು :

"ಮನೆಯಲ್ಲಿ ಏನಾದರೂ ಮಾತು ನಡೆಯಿತೆ ?"

"ಮಾತೇಕೆ ? ಒಳ್ಳೇ ಜಗಳವೇ ಆಯಿತು."

"ಏನು ? ಏನಾಯಿತು ?"

"ಆಗುವುದೇನು ಮಣ್ಣು ? ನಿನ್ನೆ ಮನೆಗೆ ಬರಲಿಕ್ಕೆ ನನಗೆ ಒಂದಿಷ್ಟು ತಡ ವಾಯಿತು. ಆ ನಾರಾಯಣಚಾರಿಗೆ ಭೆಟ್ಟಿಯಾಗಲಿಕ್ಕೆ ಹೇಳಿದ್ದರು. ಮಳೆ ಯಾಯಿತೆಂದು ಹೋಗಲಿಲ್ಲ. ಅದಕ್ಕೊಂದು ಸಾವಿರ ಮಾತನಾಡಿದರು."

"ಅದಕ್ಕೆಂದು ಹೊರಟು ಬಂದುಬಿಟ್ಟೆಯಾ ?"

"ಹುಂ...."

"ಬರುವ ಮುಂದೆ ಏನು ಹೇಳಿ ಬಂದಿ ಹಾಗಾದರೆ ?"

"ನಾನವರಿಗೆ ಭೆಟ್ಟಿಯೇ ಆಗಲಿಲ್ಲ...."

"ಅಂದರೆ, ಊರಿಗೆ ಹೊರಟು ಬಂದದ್ದು ಅವರಿಗೆ ಗೊತ್ತೇ ಇಲ್ಲವೆ ?"

"ಕಕ್ಕಿಗೆ ಗೊತ್ತಿದೆಯಲ್ಲ. ನಾನು ಹೊರಡುವಾಗ ಕಕ್ಕ ಮನೆಯಲ್ಲಿರಲಿಲ್ಲ, ಅವರು ಬರುವವರೆಗೆ ನಾನೂ ತಡೆಯಲಿಲ್ಲ...."

"ಕಕ್ಕಿ ಹೊರಡಬೇಡ ಅನ್ನಲಿಲ್ಲವೆ ?"

"ಅಂದರು, ಪಾಪ! ಅವರನ್ನು ನೋಡಿ ಹೊರಡಬಾರದು ಎಂದೂ ಅಂದು ಕೊಂಡೆ. ಆದರೆ ಕಕ್ಕ ಆಡಿದ ಮಾತುಗಳನ್ನು ನೆನೆದರೆ ಅಲ್ಲಿ ಒಂದು ಕ್ಷಣವೂ ಇರುವುದು ಸಾಧ್ಯವಿರಲಿಲ್ಲ. ಅಷ್ಟು ಮಾತಾಡಿದನಂತರ ಅಲ್ಲಿ ಬಾಯಲ್ಲಿ ನೀರು ಕೂಡ ಹಾಕುವುದಿಲ್ಲ ಎಂದೆ. ಅದರಂತೆ ಮಾಡಿದ್ದೇನೆ...."

ರಾಧಕ್ಕನಿಗೆ ವಿಷಯ ತಿಳಿಯದೆ ಕುತೂಹಲಪಟ್ಟು ಕೇಳುವುದಕ್ಕೆ ಕಾತರ ರಾಗಿದ್ದರು. ಹೊರಟುಬಂದದ್ದು ಒಳ್ಳೆಯದೇ ಆಗಿದ್ದರೂ ಜಗಳವಾಡಿ ಬಂದ ನಲ್ಲಾ ಎಂಬುದು ಅವರ ಮನಸ್ಸನ್ನು ಕೊರೆಯುತ್ತಿತ್ತು. ಅಲ್ಲದೆ ನಿನ್ನೆಯಿಂದ ಉಪವಾಸ ಇದ್ದುಕೊಂಡು ಮಾಧವ ಎಷ್ಟು ಕಷ್ಟಪಟ್ಟ ಎಂಬ ಯೋಚನೆ ಬೇರೆ.

"ಅಂಥ ಏನು ಮಾತು ಆಡಿದರೊ, ಮಾಧೂ...."

"ಅದನ್ನೆಲ್ಲ ಕಟ್ಟಿಕೊಂಡು ಏನು ಮಾಡುತ್ತೀಯಮ್ಮ....? ಕೆಟ್ಟ ಮಾತು ....ನಿನಗೇನು ಗೊತ್ತಿಲ್ಲವೆ....?"

"ಆಡಿದ್ದರೂ ಆಡುತ್ತಿದ್ದರು. ಪರೀಕ್ಷೆ ಮುಗಿಯುವವರೆಗೆ ನೀನು ಹೇಗಾದರೂ ಮಾಡಿ ನಡೆಸಿಕೊಂಡು ಹೋಗಬೇಕಾಗಿತ್ತಪ್ಪಾ...."

"ಪರೀಕ್ಷೆಗೇನಂತೆ? ಅಲ್ಲಿದ್ದುಕೊಂಡು ಓದುವುದೇ ಇಲ್ಲಿಯೇ ಓದುತ್ತೇನೆ. ಪರೀಕ್ಷೆಗಾಗಿ ಹೋಗಿ ಬಂದರಾಯಿತು...."

"ಪುಸ್ತಕಗಳನ್ನೆಲ್ಲ ತೆಗೆದುಕೊಂಡೇ ಬಂದೆಯೇನು ?"

"ಪುಸ್ತಕ ಅಷ್ಟೇ ಏಕೆ? ನನ್ನ ಎಲ್ಲ ಸಾಮಾನು ತಂದುಬಿಟ್ಟಿದ್ದೇನೆ. ಇನ್ನುಮೇಲೆ ಅಲ್ಲಿಗೆ ಹೋಗುವ ಸಂದರ್ಭವೂ ಇಲ್ಲ, ಅಗತ್ಯವೂ ಇಲ್ಲ...."

"ಅಲ್ಲಪ್ಪಾ....ಅಂಥಾದ್ದು ಆದದ್ದಾದರೂ ಏನು ?"

"ಮಾಧವ ನಡದುದೆಲ್ಲವನ್ನು ವಿವರವಾಗಿ ಹೇಳಿದ. ಹೇಳುತ್ತಿದ್ದಾಗ ಅತ್ತಿಗೆ ತಂದಿಟ್ಟ ಅವಲಕ್ಕಿ ಮೊಸರಿನ ಕಡೆಗೆ ಮಾಧವನ ಲಕ್ಷ್ಯವೂ ಹೋಗಿರಲಿಲ್ಲ. ಅದನ್ನು ನೋಡಿ ರಾಧಕ್ಕ ಹೇಳಿದರು :

"ಅವರ ಬಾಯಿಗಂತೂ ತಾಳವಿಲ್ಲ, ಮೇಳವಿಲ್ಲ....ಹೋಗಲಿಬಿಡು. ಇಲ್ಲಿ ಅವಲಕ್ಕಿ ಇಟ್ಟಿದ್ದಾಳೆ ನೋಡು...."

"ಮುಖ್ಯ, ನಾವು ಅವರಿಗೆ ಬೇಡವಾಗಿದ್ದೆವು. ಪರೀಕ್ಷೆ ಮುಗಿದನಂತರವಾದರೂ ಒಂದಿಲ್ಲೊಂದು ನೆಪ ಹೂಡಿ ಇಷ್ಟನ್ನು ಮಾಡಿಯೇ ಮಾಡುತ್ತಿದ್ದರು...."

"ಏನು ಮಾಡಿದರೂ ಅವರ ಧರ್ಮ ಕರ್ಮ ಅವರ ಪಾಲಿಗೆ. ಆದರೆ ನೀನು ಹೀಗೆ ಒಮ್ಮೆಲೆ ಬಂದುಬಿಟ್ಟದ್ದನ್ನು ನೋಡಿದವರು ಏನೆನ್ನಬಹುದು? ಅಲ್ಲದೆ ಹೀಗೆ ಹೊರಟುಬಂದದ್ದು ಅವರಿಗೆ ಮತ್ತೆ ಜನರೆದುರು ಆಡಿಕೊಳ್ಳಲಿಕ್ಕೆ ಅವಕಾಶ ಮಾತ್ರ ಆದಂತಾಯಿತು."

"ಅದಕ್ಕೇನು ? ಏನಿಲ್ಲದೆಯೂ ಅವರು ಆ ಕೆಲಸ ಮಾಡಿಯೇ ಮಾಡುತ್ತಾರೆ. ನಾನಲ್ಲಿದ್ದುಕೊಂಡರೆ ಅವರಿಗೇನು ಹೆದರಿಕೆಯೆ ? ಏನಿಲ್ಲದೆಯೆ ಈಗ ಈ ಅಪವಾದನೆ ಮಾಡಲಿಲ್ಲವೆ ? ಇಷ್ಟಕ್ಕೆಯೆ ಬಗೆಹರಿಯಿತು. ಇದೂ ಒಂದು ಪುಣ್ಯ ಅಂದುಕೊಳ್ಳುತ್ತೇನೆ, ನಾನಂತೂ...."

"ಅದೇನೋ ಸರಿಯೇ. ಆದರೆ...."

"ಆದರೇನು ?"

"ನೀನಿಲ್ಲಿಗೆ ಬಂದುಬಿಟ್ಟೆ; ಮುಂದೆ ಹೇಗೆ ಎಂಬುದರ ಬಗ್ಗೆ ವಿಚಾರ ಮಾಡಿದ್ದೀಯಾ ?"

"ಅದರಲ್ಲಿ ವಿಚಾರ ಮಾಡಬೇಕಾದದ್ದಾದರೂ ಏನು ? ಪರೀಕ್ಷೆ ಮುಗಿದ ಕೂಡಲೆ ಮುಂಬಯಿಗೆ ಹೋಗಿ, ಎಲ್ಲಿಯಾದರೂ ಒಂದು ಕೆಲಸ ಸೇರುವುದು.."

"ಆಯಿತು. ನಿನಗೇನೂ ತಿಳಿಯುವುದಿಲ್ಲ, ಮಾಧವಾ. ಎಲ್ಲಿಯೋ ಹೋಗಿ, ಏನೋ ಕೆಲಸ ಹಿಡಿದರೆ ಮುಗಿಯಿತೆ ?"

ತಾಯಿಯ ಮನಸ್ಸಿನಲ್ಲಿ ಏನೋ ಬೇರೆಯಾದ ಏರ್ಪಾಡಿದ್ದಿರಬೇಕೆಂಬ ಸಂಶಯ ಮಾಧವನ ಮನಸ್ಸಿನೆದುರು ಸುಳಿಯಿತು. ಅದರಲ್ಲಿ ಹೊಸತೇನೂ ಇರಲಿಲ್ಲ. ಎಂದಿನಿಂದಲೂ ಆಕೆಯ ಹತ್ತಿರವೇ ಇದ್ದ ತಾನು ಈಗ ಮುಂಬಯಿಗೆ ಹೋಗುವ ಮಾತನ್ನೆತ್ತಿದಾಗ ಆ ಯೋಚನೆ ಆಕೆಗೆ ಬೇಡವೆನಿಸಿರಬೇಕೆಂದೇ ಮಾಧವ ಮಾತು ಮುಂದುವರಿಸಿದ :

"ಹಾಗಾದರೆ ನನಗೆ ಎಲ್ಲಿಯೂ ಕೆಲಸವನ್ನೇ ಹಿಡಿಯಬೇಡ ಅನ್ನುತ್ತೀಯಾ ?"

"ಏನಿಲ್ಲದೆ ಗತಿಗೆಟ್ಟವರ ಹಾಗೆ, ನೀನು ಕೆಲಸಕ್ಕಾಗಿ ಊರು ಬಿಡಬೇಕೆ ?" ಎಂದು ಸೋದರತ್ತೆ ನಡುವೆಯೆ ಪ್ರಶ್ನಿಸಿದಳು. ಆಕೆಯ ಅಭಿಪ್ರಾಯವನ್ನು ರಾಧಕ್ಕ ಸಂಪೂರ್ಣವಾಗಿ ಒಪ್ಪುತ್ತಿರುವಂತಿತ್ತು. ಅಂತೆಯೇ ಅವರೆಂದರು :

"ಹೌದು; ಅದೇನು ಸುಳ್ಳೇ ? ಎಲ್ಲಿ ಮುಂಬಯಿ ? ಏನು ಕೆಲಸ..?"

ಮಾಧವನಿಗೆ ಯೋಚನೆಯಾಯಿತು. ತನ್ನ ಮುಂದಿನ ಕಾರ್ಯಕ್ರಮವನ್ನು ಸ್ಪಷ್ಟವಾಗಿ ತನ್ನ ಮಟ್ಟಿಗಾದರೂ ನಿರ್ಧರಿಸಿಕೊಂಡಿದ್ದರೆ, ತಾಯಿ ಸೋದರತ್ತೆಗೆ ಸಮರ್ಪಕವಾದ ಉತ್ತರವನ್ನು ಹೇಳಬಹುದಿತ್ತು. ಅಲ್ಲದೆ ಹಿಂದಿನ ಯಾವ ಸಂಬಂಧವನ್ನೂ ಬಯಸದೆ, ಸರ್ವಪ್ರಯತ್ನದಿಂದಲೂ ಆ ಸಂಬಂಧಗಳನ್ನು ಕಿತ್ತೊಗೆದು ಹೊಸತಾಗಿ, ಹೊಸ ಮನುಷ್ಯನಾಗಿ ಬಾಳಬೇಕೆಂದು ಬಯಸುತ್ತಿದ್ದ ತನ್ನ ಹೃದಯದಲ್ಲಿಯ ದುಗುಡ ಅವರಿಬ್ಬರಿಗೆ ತಿಳಿಯುವುದು ಹೇಗೆ ಎಂದುಕೊಂಡು ಸುಮ್ಮನಾದ. ಕೊನೆಯಲ್ಲಿ ಅವರಿಗೂ ಸಮಾಧಾನವಿರಲೆಂದು ಸುಮ್ಮನೆ ಹೇಳಿಬಿಟ್ಟ :

"ನೋಡೋಣವಂತೆ. ಪರೀಕ್ಷೆ ಮುಗಿದಮೇಲಲ್ಲವೆ ಮುಂದಿನ ಆ ಎಲ್ಲ ಮಾತು ?"

ಕೆಲಮಟ್ಟಿಗೆ ರಾಧಕ್ಕನಿಗೆ ಸಮಾಧಾನವೆನಿಸಿರಬೇಕು. ಅದಕ್ಕೆಂದೇ ಅವರು ಹೇಳಿದರು :

"ಹೌದು, ಮಾಧೂ. ಈಗ ಆದದ್ದಂತೂ ಆಯಿತಲ್ಲ. ಇನ್ನಾದರೂ ಗಟ್ಟಿ ಮುಟ್ಟಾಗಿ ಓದಿಕೊ. ಪರೀಕ್ಷೆಯಾಯಿತೆಂದರೆ...."

"ಪರೀಕ್ಷೆಯಾಯಿತೆಂದರೆ ಮದುವೆ! ಅಹುದಲ್ಲವೆ?" ಎಂದು ನಗೆಯಾಡಿದ ಬೇಕೆಂತಲೆ.

"ಹೌದು ಮತ್ತೆ!" ಎಂದು ಸೋದರತ್ತೆ.

"ಆಯಿತು. ನಿಮಗಂತೂ, ಮದುವೆ, ಮಕ್ಕಳು, ಮನೆ ಇದರ ಹೊರತು ಮತ್ತೆ ಏನೂ ಕಾಣಿಸುವುದಿಲ್ಲ!" ಎಂದು ಅರ್ಧ ನಕ್ಕು ಮಾಧವ ಮೂದಲಿಸಿದ.

"ಹೌದಪ್ಪಾ. ನಮ್ಮ ತಿಳಿವಳಿಕೆಗೆ ಅಷ್ಟೇ. ಆದರೆ ಆ ಮೂರು ಬಿಟ್ಟು ಇನ್ನು ಏನು ಇರಬೇಕು ಹೇಳು ನೀನಾದರೂ...."

"ನಿಮ್ಮ ಮಾತಿಗೆ ನಾನು ಒಪ್ಪುತ್ತೇನೆ. ಆದರೆ ಮೊದಲು ಮದುವೆಯಲ್ಲ. ಮೊದಲು ಮನೆ...."

"ಮದುವೆ ಅಂದರೇನೆ ಮನೆ!" ಎಂದು ಸೋದರತ್ತೆ ನಗು ಬೀರಿದಳು.

"ಮದುವೆ ಅಂದರೆ ಮನೆ ಅಲ್ಲ. ಮದುವೆ ಅಂದರೆ ಮಕ್ಕಳು...."ಎಂದ ಮಾಧವ. "ಅದು ಹೋಗಲಿ. ಮದುವೆಯಾಯಿತು, ಮಕ್ಕಳಾಯಿತು, ಭೀಮಣ್ಣ ಎಲ್ಲಿ? ಎಲ್ಲಿಯೂ ಕಾಣಿಸುವುದೇ ಇಲ್ಲ. ಊರಲ್ಲಿಲ್ಲವೇನು?"

"ಇದ್ದಾನೆ. ಇದೇ ಮಧ್ಯಾಹ್ನ ಕೊಪ್ಪದ ಹೊಲದವರೆಗೆ ಹೋಗಿಬರುತ್ತೇನೆಂದು ಹೋದ. ನೀನು ಬರುವ ಮುಂಚೆ ಒಂದರ್ಧಗಂಟೆ ಮೊದಲು ಹೋಗಿರಬೇಕು, ಅಷ್ಟೆ" ಎಂದರು ರಾಧಕ್ಕ.

ಮಾತು ಭೀಮಣ್ಣನ ಬಗೆಯಲ್ಲಿ ಪ್ರಾರಂಭವಾಗಿ ಎಲ್ಲೆಲ್ಲಿಯೊ ಹರಿಯಿತು. ಆ ಎಲ್ಲ ಮಾತಿನಲ್ಲಿ ಒಂದು ವಿಷಯ ಮಾತ್ರ ಮಾಧವನ ಮನಸ್ಸನ್ನು ಕದಡಿಸಿತು. ಆ ವಿಷಯವೆಂದರೆ ಭೀಮಣ್ಣ ತನ್ನ ತಾಯಿಯನ್ನು ಊರಿಗೆ ಕರೆ ತಂದು ಕೆಲವೇ ದಿನಗಳಾಗಿದ್ದರೂ ಅಷ್ಟರಲ್ಲಿಯೇ ಆತ ಆಕೆಗಾಗಿಯಾಗಲಿ, ಆಕೆಯ ಮಗನಾದ ತನಗಾಗಿಯಾಗಲಿ ಕಕ್ಕ ರಾಮರಾಯನಿಂದ ಆಸ್ತಿಯಲ್ಲಿ ಪಾಲುಪಡೆದುಕೊಂಡು ಒಂದು ಏರ್ಪಾಡು ಮಾಡಬೇಕೆಂಬ ಯೋಚನೆಯಲ್ಲಿದ್ದದ್ದು. ಭೀಮಣ್ಣನ ಈ ಯೋಚನೆ ತನಗೇನೂ ಹೊಸದಾಗಿರಲಿಲ್ಲವಾದರೂ ಆ ಕ್ಷಣಕ್ಕೆ ಮಾಧವನಿಗೆ ತೀರ ಬೇಸರವೆನಿಸಿತು. ಎಲ್ಲವನ್ನೂ ಬಿಟ್ಟುಕೊಟ್ಟು ತಾನು ಹೊಸದಾಗಿಯೇ ಬದುಕನ್ನು ಪ್ರಾರಂಭಿಸಬೇಕೆನ್ನುತ್ತಿದ್ದ ತನ್ನ ಯೋಚನೆಗೆ ಯಾರಿಂದಲೂ ಪ್ರೋತ್ಸಾಹ ದೊರೆಯುವಂತಿರ

ಲಿಲ್ಲವೆಂದು ಇನ್ನೂ ನಿರಾಶೆಯೆನಿಸಿತು. ಭೀಮಣ್ಣ ಒಂದು ನಿರ್ಧಾರಕ್ಕೆ ಬಂದವನಾದ್ದರಿಂದ ಮುಂದಿನ ಒಂದೆರಡು ದಿವಸಗಳಲ್ಲಿಯೇ ಆ ವಿಷಯವನ್ನು ಪ್ರಸ್ತಾಪಿಸುವವನೇ ಆದ್ದರಿಂದ ಮಾಧವನಿಗೆ ಇನ್ನೂ ಯೋಚನೆಯಾಯಿತು. ಯಾವುದಾದರೊಂದು ಕೊನೆಯ ನಿರ್ಧಾರವನ್ನು ಮಾಡಿಕೊಳ್ಳದ ಹೊರತು ಬೇರೆ ದಾರಿ ಕಾಣಲಿಲ್ಲವಾದ್ದರಿಂದ ತನ್ನ ಸುತ್ತಲಿನ ಪರಿಸ್ಥಿತಿಯನ್ನು ಸಂಪೂರ್ಣವಾಗಿ ಅಳೆದು ನೋಡಿ, ತನ್ನ ಯೋಚನೆಗಳಿಗೊಂದು ದಾರಿ ಹುಡುಕಬೇಕೆಂದುಕೊಂಡು ಸಾಯಂಕಾಲವಾಗುತ್ತಲೇ ಊರ ಹೊರಗಡೆ ತಿರುಗಾಡಲು ಹೊರಟ.

ಊರು ಚಿಕ್ಕದಾದ್ದರಿಂದ ಐದು ನಿಮಿಷಗಳಲ್ಲಿಯೇ ಊರ ಅಗಸೆಯನ್ನು ದಾಟಿದ. ಚಿಕ್ಕವನಿದ್ದಾಗ ದೊಡ್ಡದಾಗಿ ಕಾಣುತ್ತಿದ್ದ ನಡುವಿನ ಬೀದಿ ಈಗ ತೀರ ಇಟುಕರಾಗಿ ಕಾಣುತ್ತಿತ್ತು. ಮೂಲೆಯಲ್ಲಿ ಮುದುಡಿಕೊಂಡು ಕುಳಿತ—ಹಣ್ಣುಮುದುಕಿಯರ ಹಾಗೆ ಯಾವ ಕ್ಷಣಕ್ಕೂ ಕುಸ್ಸಳಿಸಬಹುದೆಂದು ತೋರುತ್ತಿದ್ದ ಮನೆಗಳನ್ನು ನೋಡಿ ಮಾಧವನಿಗೆ ಏನೋ ವಿಚಿತ್ರವೆನಿಸಿತು. 'ಎಂದು ಕಟ್ಟಿಸಿದ ಮನೆಗಳೋ, ಯಾರು ಬಲ್ಲರು ?' ಎಂದುಕೊಂಡು ಊರ ಹೊರಗಡೆ ಬಂದ. ಚಿಕ್ಕಂದಿನಿಂದಲೂ ಚಿರಪರಿಚಿತವಾದ ವಿಸ್ತಾರವಾದ ಉಸುಕಿನ ಬಯಲು. ಆ ಬಯಲಿನಾಚೆಯಲ್ಲಿಯೆ ಎತ್ತರವಾದ ಗುಡ್ಡ. ಮಾಧವ ಸುತ್ತಲೂ ಕಣ್ಣು ಹೊರಳಿಸಿದ. ಯಾವುದರಲ್ಲಿಯೂ ಏನೂ ಎಳ್ಳಷ್ಟೂ ಬದಲಾದಂತೆ ಕಾಣಲಿಲ್ಲ. ಅದೇ ಬಯಲು. ಅದೇ ಮಾವಿನ ಮರಗಳು, ಅದೇ ಗುಡ್ಡ. ದೂರದಿಂದಲೇ ಕಾಣುವ ಆ ಗುಡ್ಡದ ತುದಿಯಲ್ಲಿಯ ಶಂಕರನ ದೇವಸ್ಥಾನ. ಹದಿನೈದು ವರ್ಷಗಳ ಹಿಂದೆ ಪ್ರತಿನಿತ್ಯವೂ ಅಲ್ಲಿಗೆ ಬಂದು ಆ ಉಸುಕಿನಲ್ಲಿ ಆಡಿ ಹಿಂದಿರುಗುತ್ತಿದ್ದ ನೆನಹು ಮಾಧವನ ಕಣ್ಣೆದುರು ನಿಂತಾಗ ಅವನಿಗೆನಿಸಿತು : 'ಆಗ ಇದ್ದ ಉಸುಕು, ಬಯಲು, ಬೆಟ್ಟ ಎಲ್ಲವೂ ಅಚ್ಚಳಿಯದೆ ಇದೆ. ಯಾವ ಬದಲಾವಣೆಯೂ ಇಲ್ಲ. ಈ ಕ್ಷಣಕ್ಕೆ ಆ ಹದಿನೈದು ವರ್ಷದ ಹಿಂದಿನ ನಾನು ಕೂಡ ಇಲ್ಲಿ ಇದ್ದೇನೆ....ಏನು ವಿಚಿತ್ರ? ಮನಸ್ಸಿನಲ್ಲಿತೋರುವ ಬದಲಾವಣೆ ಬರೀ ಆಭಾಸವೇ? ಎಲ್ಲೆಲ್ಲಿಯೋ ಹೋಗಿ ನಾನೆಲ್ಲ ಬೇರೆಯಾಗಿದ್ದೆನೆಂದುಕೊಂಡರೂ ನನ್ನ ಬಾಲ್ಯವೇ ಇಲ್ಲಿ ಅಳಿಯದೆ ಉಳಿದುಬಿಟ್ಟಂತಿದೆಯಲ್ಲ !' ಎಂದು ಸರಸರನೆ ಉಸುಕಿನಲ್ಲಿ ಹೆಜ್ಜೆ ಹಾಕುತ್ತ ಗುಡ್ಡದ ಓರೆಯನ್ನು ಏರತೊಡಗಿದ. ಸೂರ್ಯ ಅದೇ ಮುಳುಗುತ್ತಿದ್ದ. ಏರುತ್ತಿದ್ದಹಾಗೆ ಪೂರ್ವದ ಕಡೆಯಲ್ಲಿಯ ಹೊಲಗಳ ದೃಶ್ಯ ಕಣ್ಣು

ಕೊರೆಯುವಂತೆ ನಿಶ್ಚಲವಾಗತೊಡಗಿತು. ದೃಷ್ಟಿ ದೂರದೂರ ಹರಿಯುತ್ತಿತ್ತು. ಪ್ರಪಂಚದ ವಿಸ್ತಾರದ ಅರಿವು ಆ ಕ್ಷಣಕ್ಕೆ ಮಾಧವನಿಗೆ ಬಂದಿರಬೇಕು !

ಮಾಧವ ಸುತ್ತಲೂ ಕಣ್ಣು ತಿರುವಿದ. ಸೂರ್ಯ ಅದೇ ಮುಳುಗುತ್ತಿದ್ದ. ಹೊಸ ವಿಶ್ವಗಳನ್ನೇ ಎರಕ ಹೊಯ್ಯುತ್ತಿದ್ದ ಕಮ್ಮಾರನ ಕುಲುಮೆಯಂತೆ ಪಶ್ಚಿಮ ಉರಿಯುತ್ತಿತ್ತು. ಅದರ ಬೆಳಕೇ ಪೂರ್ವದ ದಿಗಂತದವರೆಗೂ ಸೂರೆ ಗೊಂಡಿತ್ತು. ಎದುರಿಗೆ ವಿಸ್ತಾರವಾಗಿ ದೂರದ ಗುಡ್ಡದವರೆಗೆ ಹಬ್ಬಿದ ಹೊಲ ಗದ್ದೆಗಳು ಚದುರಂಗದ ಪಟದಲ್ಲಿಯ ಮನೆಗಳಂತೆ ಅಚ್ಚುಕಟ್ಟಾಗಿ ಕಣ್ಣನ್ನು ತಣಿಸುತ್ತಿದ್ದವು. ಎಡಗಡೆ ಆಕಾಶದ ಮೂಲೆಯೊಂದರಲ್ಲಿ ಮಿಂಚುಗೂಡಿದ ಕಿರುಮೋಡವೊಂದು ಆಗೀಗ ಕಣ್ಣು ಚಿವುಟುತ್ತಿತ್ತು. ಸುತ್ತಲಿನ ಈ ಸೌಭಾಗ್ಯ ವನ್ನು ನೋಡಿ—ಆದೇಕೊ ತಿಳಿಯದು—ಮಾಧವನಿಗೆ ಸರೋಜಿನಿಯು ನೆನ ಪಾಯಿತು. ಆಕೆ ನೃತ್ಯ ಮಾಡಿದ ರಾತ್ರಿ ಕಣ್ಣೆದುರು ನಿಂತಿತು. ಆ ರಂಗ ಮಂಚದಂತೆಯೆ ರಂಜಿತವಾದ ಪ್ರಪಂಚ ಕಣ್ಣೆದುರು ನಿಂತಾಗ ಅದರ ಚೆಲು ವಿನ ಮಾಯೆಯೇ ಮೂರ್ತಿವೆತ್ತು ನಿಂತಂತೆ ಸರೋಜಿನಿ ಕಣ್ಣೆದುರು ಹತ್ತಾರು ಭಂಗಿಗಳಲ್ಲಿ ಕುಣಿಯತೊಡಗಿದಳು. ಆದರೆ ಆ ಚೆಲುವಿನ ಕನಸು ಮಸು ಕಾಗತೊಡಗಿತು—ಸುತ್ತಲಿನ ಬಣ್ಣಗಳ ಸಿರಿಯಂತೆ. ಕತ್ತಲೆ ಪ್ರಪಂಚ ವನ್ನಾವರಿಸತೊಡಗಿದ ಹಾಗೆ ಹತ್ತಾರು ಯೋಚನೆಗಳು ಮಾಧವನ ಮನ ಸ್ಸನ್ನು ಮುತ್ತತೊಡಗಿದವು. ಕತ್ತಲೆಯ ಕರಾಳ ರಾಕ್ಷಸನನ್ನು ಎದುರಿಸ ಬೇಕಾದಾಗಿನ ಪ್ರಪಂಚದ ಕಾತರಭಾವ ಆಕೆಯ ಹೃದಯದಲ್ಲಿಯ ಕಾತುರ ತೆಯ ಸಂಕೇತವಿದ್ದಂತೆನಿಸಿತು....ಆಕೆ ಈಗ ಏನು ಮಾಡುತ್ತಿರಬಹುದು ? ಆಕೆ ಹೇಳಿದ ಕಠಿನ ಪರಿಸ್ಥಿತಿಯ ಕತೆಯನ್ನೇ ನೆನೆಯುತ್ತ ಗುಡ್ಡವನ್ನು ಇಳಿಯತೊಡಗಿದ. ಹಿಂದಿನದರ ನೆನಪಿಲ್ಲದೆ, ಇಂದಿನದರಲ್ಲಿ ಆಸಕ್ತಿಯಿಲ್ಲದೆ, ಮುಂದಿನದರ ಬಗೆಯಲ್ಲಿ ಆಸೆಯಿಲ್ಲದೆ, ಕಾಲಾತೀತವಾಗಿ ಬಾಳುತ್ತಿದ್ದ ತನ್ನ ಕಾಲ ಕೆಳಗಿನ ಕಲ್ಲುಮಣ್ಣುಗಳಂತೆಯೇ ಮನುಷ್ಯನೂ ಯೋಚನೆಯಿಂದ ಮುಕ್ತನಾಗಿ ಬಾಳುವುದು ಸಾಧ್ಯವಿದ್ದರೆ ಎಂಥ ಸುಖ ? ಎಂಬ ವಿಚಾರವೂ ಕೆಣಕಿಹೋಯಿತು....ಸರೋಜಿನಿ ಏನು ಮಾಡುತ್ತಿರಬಹುದು ?

## 9

ಸರೋಜಿನಿ ಏನನ್ನೂ ಮಾಡುತ್ತಿರಲಿಲ್ಲ. ಹಳೆಯದಾದರೂ ಭವ್ಯವಾದ ತನ್ನ ತಾಯಿಯ ಮನೆಯ ಮಹಡಿಯ ಮೇಲೆ ಮುಸುಕುತ್ತಿದ್ದ ಕತ್ತಲೆ

ಯಲ್ಲಿ ಏನನ್ನೋ ಯೋಚಿಸುತ್ತ ಕುಳಿತ್ತಿದ್ದಳು. ಎದುರಿನಲ್ಲಿಯ ಪಲ್ಲಂಗದ ಮೇಲೆ ದಣಿದುಹೋದ ದಿವಸದಂತೆ ಕ್ಷೀಣಳಾಗಿ ತಾಯಿ ಮಲಗಿದ್ದಳು. ನಡನಡುವೆ ಮಗಳನ್ನು ಉದ್ದೇಶಿಸಿ ಮಾತನಾಡುತ್ತಿದ್ದಳು, ಪ್ರಶ್ನೆ ಕೇಳು ತ್ತಿದ್ದಳು. ಸರೋಜಿನಿಯು ಮೂಕಭಾವದಿಂದ ಬೇಸರಗೊಳ್ಳುತ್ತಿದ್ದಳು. ಇಂಥ ನೀರವತೆಯಲ್ಲಿ ಎದ್ದು ದೀಪಉರಿಯಿಸಲು ಇಬ್ಬರಿಗೂ ಆತುರ ಕಾಣುತ್ತಿರಲಿಲ್ಲ. ಮನೆಯನ್ನಾವರಿಸಿದ ಮೂಕಭಾವದ ಮುಚ್ಚಂಜೆ ಅವರಿಬ್ಬರ ಹೃದಯಗಳ ಪ್ರತೀಕವಾದಂತಿತ್ತು. ಸರೋಜಿನಿಯ ಈ ಮನಃಸ್ಥಿತಿಗೆ ಮುಖ್ಯ ಕಾರಣ ಎಂದರೆ ಆಕೆ ಬಂದ ನಂತರ ಆಕೆಯ ತಾಯಿ ಆಡಿದ ಮಾತುಗಳು. ಆ ಮಾತು ಗಳನ್ನು ನೆನೆದ ಹಾಗೆಲ್ಲ ನನನ್ನು ಸುತ್ತುಗಟ್ಟಿ ಬಿಗಿದು ಬಾಯಿಲ್ಲದಂತೆ ಮಾಡುತ್ತಿದ್ದ ಪರಿಸ್ಥಿತಿಯ ಅರಿವು ಬರುತ್ತಿತ್ತು. ಮುಂದಿನ ದಾರಿ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಕತ್ತಲೆಯಲ್ಲಿ ಎಲ್ಲಿಯೋ ಮಿನುಗಿ ಮಾಯವಾಗುವ ದೀಪದ ಹುಳುವಿನ ಬೆಳಕಿನಂತೆ ಮಾಧವನ ಸಹಾನುಭೂತಿ ನೆನಹಿನೆದುರು ನಿಂತು ಮತ್ತೆ ಮರೆಯಾಗುತ್ತಿತ್ತು. ತನ್ನ ದೈವವನ್ನು ಹಳಿದುಕೊಳ್ಳುತ್ತಿದ್ದಳು. ತನ್ನಂತೆ ಪರೀಕ್ಷೆಯನ್ನು ಮುಗಿಸಿಕೊಂಡು ಮನೆಗೆ ಮರಳಿದ ಗೆಳತಿಯರನ್ನು ಅವರವರ ತಂದೆ ತಾಯಿಗಳು ಎಷ್ಟು ಅಕ್ಕರೆಯಿಂದ ಬರಮಾಡಿಕೊಂಡು ಎಷ್ಟು ಪರಿಯಿಂದ ಸುಖದುಃಖ ಸಮಾಚಾರಗಳನ್ನು ತಿಳಿದುಕೊಂಡು ಸಂತಸ ಪಡುತ್ತಿರಬಹುದು ?

ಆದರೆ ನಾಲ್ಕು ಗಂಟೆಯ ಸುಮಾರಿಗೆ ತಾನು ಬಂದಿಳಿದಾಗ ತಾಯಿಯ ಮುಖದಲ್ಲಿ ಯಾವ ಆತುರವೂ ಕಾಣಲಿಲ್ಲ. ಮಾತ್ರವಲ್ಲದೆ ಆಕೆಯ ಮೊದಲ ಮಾತುಗಳಲ್ಲಿಯೇ ಬೇಸರ ಕೂಡಿದ ಸಿಡುಕು ತೋರುತ್ತಿತ್ತು. ಅದರ ಕಾರಣ ವನ್ನು ಸರೋಜಿನಿ ತಿಳಿಯದಿರಲಿಲ್ಲ. ಆದರೆ ಆ ಕ್ಷಣಕ್ಕೆ ತೀರ ಕೆಡಕೆನಿಸಿತು.

"ಹೀಗೇನು ಒಮ್ಮಿಲೆ ಬಂದುಬಿಟ್ಟೆಯೆ—?" ಎಂದಿದ್ದಳು ತಾಯಿ.

"ಹೂಂ.... ಪರೀಕ್ಷೆ ಮುಗಿದನಂತರ ಸುಮ್ಮನೆ ಅಲ್ಲಿದ್ದುಕೊಂಡೇನು ಎಂದು ಬಂದುಬಿಟ್ಟೆ."

"ಹೌದು. ಆದರೆ ನಾನು ಹೇಳಕಳಿಸಿದ್ದೆನಲ್ಲ ? ನಾಲ್ಕಾರು ದಿನಗಳಲ್ಲಿ ನಾನಾಗಿಯೇ ಅಲ್ಲಿಗೆ ಬರಬೇಕಾಗಿದೆ ಎಂದು. ಗೌಡರು ನಿನಗೆ ಆ ಮಾತು ತಿಳಿಸಲಿಲ್ಲವೆ ?

ಸರೋಜಿನಿಗೆ ಸುಮ್ಮನಿರದೆ ಬೇರೆ ಮಾರ್ಗ ಕಾಣಲಿಲ್ಲ. ಅರೆನಿಮಿಷ ದಲ್ಲಿಯೇ ತಾಯಿ ಕೇಳಿದ್ದಳು :

"ಗೌಡರನ್ನು ನೀನು ಭೆಟ್ಟಿಯಾಗಲೇ ಇಲ್ಲವೆ ?

"ಆಗಿದ್ದೆ...."

"ಹಾಗಾದರೆ ಅವರು ಹೇಳಲೇ ಇಲ್ಲವೇ ನಿನಗೆ—ನಾನು ಬರುವ ವಿಷಯ?"

"ಏನೋ ಒಂದು ಮಾತು ಹೇಳಿದಹಾಗಾಯಿತು. ಆದರೆ ನನಗೇನು ಪೂರ್ತಿ ಅರ್ಥವಾಗಲಿಲ್ಲ...." ಎಂದು ಸುಳ್ಳು ಹೇಳಿದಳು ಸರೋಜಿನಿ—ಗತಿಯಿಲ್ಲದೆ.

"ಏನೋ ತಾಯಿ. ನಿನ್ನ ಮಾತೇ ಅರ್ಥವಾಗುವುದಿಲ್ಲ ನನಗೆ....ನಿನಗೆ ಎಷ್ಟು ಪರಿ ಹೇಳಿದರೂ ಅಷ್ಟೆ....ಹೀಗಾದರೆ ಹೇಗೆ ನಡೆಯಬೇಕು, ಇದೇ ತಿಳಿಯುವುದಿಲ್ಲ ನನಗಂತೂ...."

"ಹೇಗೇನು ನಡೆಯುವುದು ?"

"ನಾನು ಹೇಳದ್ದಕ್ಕೆಲ್ಲ ವಿರುದ್ಧವಾಗಿ ನಡೆದು ಮತ್ತೆ ನನ್ನನ್ನೇ ಕೇಳು, ಹೇಗೇನು ನಡೆಯುವುದು ಎಂದು....ಸಾಕಾಗಿಹೋಯಿತು...."

"ಹೀಗೇನು ಮಾತನಾಡುತ್ತೀಯೆ ಅಮ್ಮ....ಯಾವಾಗಲೂ ನಿನ್ನ ಮಾತೇ ಹೇಳುತ್ತೀ. ನಾನು ಹೇಳುವುದಕ್ಕೆ...."

"ಹುಂ....ನೀನು ಹೇಳುವುದು. ನೀನೇನು ಹೇಳುವುದೇ ಬೇಡ. ನನಗೆ ಎಲ್ಲವೂ ತಿಳದಿದ್ದೇ ಇದೆ....ನಾನು ಸತ್ತರೇನೇ ನಿನಗೆ ಸುಖ....ಇದೇ ಅಲ್ಲವೆ ನೀನು ಹೇಳುವುದು....?"

ಸರೋಜಿನಿಯ ಕಣ್ಣೊಳಗಿನಿಂದ ಪಳಕ್ಕನೆ ನೀರು ಉದುರಿದ್ದುವು. ಇವನ್ನು ನೋಡಿ ತಾಯಿಗೂ ಕೆಡಕೆನಿಸಿರಬೇಕು. ಒಂದೆರಡು ನಿಮಿಷ ತಡೆದು ಸರೋಜಿನಿಯ ಹತ್ತಿರ ಬಂದು ಬೆನ್ನಮೇಲೆ ಕೈಯಾಡಿಸಿ ಹೇಳಿದಳು :

"ಇರಲಿ ಬಿಡು. ಸುಮ್ಮನೆ ಅತ್ತರೆ ಯಾತಕ್ಕೆ ಬಂತು ? ಹಾಗೆಲ್ಲ ಮಾಡಬಾರದು....ನಾನು ಹೇಳಿದ್ದೆಲ್ಲ ನನಗೆ ಕೆಡಕಾಗಲಿ ಎಂದು ಹೇಳುತ್ತೇನೆಯೆ ? ಇಷ್ಟಾದರೂ ನೀನು ಯೋಚನೆ ಮಾಡಬೇಡವೆ....?"

ಏನಾದರೂ . ಆಕೆ ಸೂಚಿಸುತ್ತಿದ್ದ ಮಾರ್ಗ ಸಾಧ್ಯವಿಲ್ಲವೆಂದು ಹೇಳಿಬಿಡಬೇಕೆಂಬ ಮಾತು ಸರೋಜಿನಿಯ ಬಾಯಿಗೆ ಬಂದಿತ್ತು. ಆದರೆ ಅದೇ ಎದೆ ಕರಗಿ ಅಕ್ಕರೆಯಿಂದ ಮಾತನಾಡಿಸುತ್ತಿದ್ದವಳನ್ನು ಯಾಕೆ ಸುಮ್ಮನೆ ಕೆರಳಿಸಬೇಕೆಂದು ಸುಮ್ಮನಾದಳು. ಆಗಿನ ಮಟ್ಟಿಗೆ ಸುಮ್ಮನಾದರೂ ಉಪಾಹಾರ ಮುಗಿದನಂತರ—ಮನೆಯ ಮೇಲಟ್ಟವನ್ನೇರಿ ತಾಯಿ-ಮಗಳು ಮಾತಿಗೆ ಕುಳಿತಾಗ ಹೆಜ್ಜೆಹೆಜ್ಜೆಗೂ ಅದೇ ಪ್ರಶ್ನೆ ! ಅದೇ ತೊಡಕು !—ಸರೋಜನಿಯ

ಎದುರು ನಿಲ್ಲುತ್ತಿದ್ದವು.ಅಲ್ಲಿ ಇಲ್ಲಿಯ ಮಾತುಗಳುಮುಗಿದನಂತರ ರಂಗಸಾನಿ ಕೇಳಿದಳು :

"ಬರುವಾಗ ಗೌಡರಿಂದ ಎಷ್ಟು ದುಡ್ಡು ತೆಗೆದುಕೊಂಡೆ ?"

"ಎಷ್ಟೂ ಇಲ್ಲ...."

"ಅಂದರೆ ? ಏನೂ ದುಡ್ಡು ಕೊಡಲಿಲ್ಲವೆ ?"

"ಹುಂ...." ಬೇರೆ ಏನನ್ನೂ ಹೇಳಲಾರದಕ್ಕೆ ಹಾಗೆಂದಳು.

"ಬೇಡಲಿಕ್ಕೆ ಹೋಗಿದ್ದೆಯಾ ಅವರ ಹತ್ತಿರ?"

"ಹೋಗಿದ್ದೆ. ಆದರೆ ಅವರ ಹತ್ತಿರ ಇರಲಿಲ್ಲವೆಂದು ಕಾಣುತ್ತದೆ—" ಎಂದಳು, ವಿಷಯವನ್ನು ಸಮಾಧಾನದಲ್ಲಿ ಸಾವರಿಸಿಕೊಳ್ಳಬೇಕೆಂದು. ಆದರೆ ರಂಗಸಾನಿಗೆ ಮಗಳುದುಡ್ಡುತರಲಿಲ್ಲವೆಂಬುದು ಸಂಕಟವನ್ನುಂಟುಮಾಡಿತ್ತು. ಅಂತೆಯೇ ಕೇಳಿದಳು :

"ನೀನು ಮತ್ತೊಮ್ಮೆ ಹೋಗಲಿಲ್ಲವೆ ?"

"ಇಲ್ಲ...."

"ದುಡ್ಡು ಬೇಡವಾಗಿತ್ತೇ ನಿನಗೆ ? ಯಾಕೆ ಹೋಗಲಿಲ್ಲ ?"

"ನನ್ನ ಹತ್ತಿರ ಒಂದು ಕಾಸಿಲ್ಲದಿದ್ದರೂ ಅಲ್ಲಿಗೆ ಹೋಗಬೇಕು ಅನಿಸಲಿಲ್ಲ !"

"ಹೋಗಬೇಕು ಅನಿಸಲಿಲ್ಲ! ಯಾಕೆ ಅನಿಸೀತು ? ಬುದ್ಧಿ ಕಲಿತಿದ್ದೀಯ ....ನೀನೇನು ಮಾಡೀಯ...." ತಾಯಿಯ ಮಾತಿನಲ್ಲಿ ಅಣಕು, ಬೇಸರ ಸ್ಪಷ್ಟವಾಗಿದ್ದುವು.

"ಹತ್ತು ಬಾರಿ ನಾನು ಹೇಳಿದ್ದೇನೆ, ಅಮ್ಮ. ಅಲ್ಲಿಗೆ ನಾನು ಹೋದಾಗ ಅವರ ವರ್ತನೆ ನನಗೆ ಎಷ್ಟೂ ಸರಿಯಾಗಿ ಕಾಣುವುದಿಲ್ಲ...."

"ಹೋ !— ಅದಕ್ಕೇ ಹೇಳಿದೆ ನಿನಗೆ ಬುದ್ಧಿ ಬಹಳವಾಗಿದೆ ಎಂದು. ಹೊಟ್ಟೆಗೆ ಅನ್ನ ಕೊಡುವವರ ವರ್ತನೆಯ ಮಾತು ಆಡುತ್ತಿದ್ದೀ — ಇಷ್ಟೂ ತಿಳಿಯಬಾರದೆ ನಿನಗೆ?"

ಅವರ ಕಡೆಯಿಂದ ಇಡೀ ವರ್ಷ ನಾನು ಒಂದು ಕಾಸನ್ನೂ ತೆಗೆದುಕೊಂಡಿಲ್ಲ !"

"ದೊಡ್ಡ ಶೌರ್ಯ ಮಾಡಿದಿ. ಆದರೆ ನನ್ನ ಕಡೆಯಿಂದ ತೆಗೆದುಕೊಂಡಿದ್ದೀಯಲ್ಲ."

"ಅದರದೇನು ?"

"ಆದರದೇನು? ನಾನೇನೂ ಹಿತ್ತಲಲ್ಲಿ ದುಡ್ಡಿನ ಗಿಡ ನೆಟ್ಟಿಲ್ಲ. ನಾನು ಕೊಟ್ಟ ದುಡ್ಡೂ ಅವರದ್ದೇ...."

"ಅದಕ್ಕೆ ನಾನೇನು ಮಾಡಬಲ್ಲೆ? ನಾನಂತೂ ಹಾಗೆ ಎಂದಿಗೂ ತಿಳಿದು ಕೊಂಡಿಲ್ಲ...."

"ಅಂತೆಯೇ ಉಂಡ ಮನೆಗೆ ಎರಡು ಬಗೆಯುತ್ತಿದ್ದೀ...."

ಸರೋಜಿನಿಗೆ ಸಹಿಸದಾಯಿತು, ಆದರೆ ಯಾವ ಉತ್ತರವನ್ನೂ ಹೇಳುವುದು ಸಾಧ್ಯವಾಗಿ ಕಾಣಲಿಲ್ಲ. ಎಷ್ಟು ಯೋಚಿಸಿದರೂ ಗೌಡನಿಂದ ಬಿಡುಗಡೆಯೂ ಸಾಧ್ಯವಾಗಿ ಕಾಣಲಿಲ್ಲ. ಆದರೆ ಬಿಡುಗಡೆ ಅಸಾಧ್ಯವಾಗಿ ಕಂಡಷ್ಟೂ ಬಿಡುಗಡೆ ಹೊಂದಲೇಬೇಕೆಂಬ ಹಟ ಮಾತ್ರ ಬೆಳೆಯತೊಡಗಿತ್ತು. ತಾಯಿ ಯಿಂದಲೂ ದೂರವಾಗದ ಹೊರತು ಅದು ಸಾಧ್ಯವಾಗಿ ತೋರಲಿಲ್ಲ. ಎಂಥ ವಿಪರ್ಯಾಸ ! ಹೊರಗಿನವರಿಂದ ದೂರವಾಗಬೇಕಾದರೆ ಹೆತ್ತ ತಾಯಿ ಯಿಂದಲೂ ದೂರವಾಗಬೇಕು ! ಸರೋಜಿನಿ ಯೋಚಿಸುತ್ತಲೇ ಇದ್ದಳು. ಕೊನೆಗೆ ತಾಯಿ ನೇರವಾಗಿ ಹೇಳಿದಳು:

"ಇದು ನೋಡು, ಸರೋಜಾ....ಹೀಗಾದರೆ ಮುಂದೆ ನಡೆಯುವುದು ಸಾಧ್ಯವಿಲ್ಲ...."

"ಏನದು ನಡೆಯುವುದು ?" ಸರೋಜಿನಿಯ ದನಿಯಲ್ಲಿ ಸಿಡುಕು ಸ್ಪಷ್ಟ ವಾಗಿತ್ತು.

"ನಾನು ಸಾಯಬೇಕು ಅನ್ನುತ್ತೀಯೇನು ಹಾಗಾದರೆ ?"

"ಸಾಯುವ ಮಾತೇಕೆ, ಅಮ್ಮ....ಅದಕ್ಕೂ ಇದಕ್ಕೂ ಯಾವ ಸಂಬಂಧ?"

"ಯಾವ ಸಂಬಂಧವೆ ? ಈ ಮೂರು ತಿಂಗಳಲ್ಲಿ ನಾನು ಬದುಕಿಕೊಂಡು ಇದ್ದೇನೆ—ಇದೇ ದೊಡ್ಡ ಮಾತು...."

"ಅಂಥದೇನು ಆದದ್ದು ?"

"ಪೊರಹೊರಗೇ ಇರಬೇಕೆನ್ನುವ ನಿನಗೆ ನನ್ನ ಬೇನೆಯ ಕಲ್ಪನೆಯಾಗು ವುದೂ ಸಾಧ್ಯವಿಲ್ಲ. ಔಷಧ ಉಪಚಾರಕ್ಕಾಗಿ ಅಲ್ಲಿಗೆ ಬರುತ್ತೇನೆ ಎಂದು ಹೇಳಿ ಕಳಿಸಿದರೂ ನೀನಾಗಿಯೇ ಬಂದುಬಿಟ್ಟಿದ್ದೀ...."

"ಅಲ್ಲಿ ಬಂದೇನು ? ಇಲ್ಲಿಯೇ ಆಗುವುದಿಲ್ಲವೆ ?"

"ಇಲ್ಲಿಯದೆಲ್ಲ ಮುಗಿಯಿತು. ಈ ಮೂರು ತಿಂಗಳಲ್ಲಿ ನಾಲ್ಕಾರು ನೂರು ರೂಪಾಯಿ ಹೋಯಿತು. ಬೇನೆ ಮಾತ್ರ ಬೆಳೆಯುತ್ತಲೇ ಇದೆ....ಇದಕ್ಕೆಲ್ಲಿ ದುಡ್ಡು....?"

"ಈ ಎಲ್ಲ ದುಡ್ಡು ಗೌಡರೇ ಕೊಟ್ಟಿದ್ದಾರೆಯೇ ?"

"ಮತ್ತೆ ಯಾರು ಕೊಡಬೇಕು ?"

"ಆ ದುಡ್ಡಿಗಾಗಿ ನಾನು ಜೀವ ಕೊಡಬೇಕು ?" ಸರೋಜಿನಿ ತನ್ನಷ್ಟಕ್ಕೆಯೆ ಎಂಬಂತೆ ಅಂದಳು.

"ನೀನು ಹಾಗೆ ತಿಳಿದುಕೊಂಡದ್ದೆ ತಪ್ಪು, ಸರೋಜಾ...."

ಸರೋಜಿನಿಯ ಬಾಯಿಂದ ಮಾತು ಹೊರಡಲಿಲ್ಲ.

"ನೀನು ಸುಖವಾಗಿರಬಹುದು....ನಾನು ಬದುಕಬಹುದು....!"

ಸರೋಜಿನಿ ಇನ್ನೂ ಸುಮ್ಮನಿದ್ದುದನ್ನು ನೋಡಿ ತಡೆಯಲಾಗದೆ ತಾಯಿ ಕೇಳಿದಳು :

"ನಿನ್ನ ಮನಸ್ಸಿನಲ್ಲಿದ್ದುದಾದರೂ ಏನು? ಅದನ್ನಾದರೂ ಹೇಳಬಾರದೆ ?"

"ಅದನ್ನೆಲ್ಲ ಹೇಳಿ ಏನು ಪ್ರಯೋಜನ, ಅಮ್ಮ ? ನಿನಗೆ ಅದು ಸರಿಬೀಳುವುದೇ ಸಾಧ್ಯವಿಲ್ಲ...." ದನಿಯಲ್ಲಿ ನಿರಾಶೆ ತುಂಬಿತುಳುಕುತ್ತಿತ್ತು. ಕೊನೆಗೆ ತಡವರಿಸಿದಳು :

"ನನಗೆ ಸುಖವಾಗಿ ಇರಬೇಕಾಗಿದೆ, ಅಮ್ಮ....ನನಗೆ ಸುಖವಾಗಿ ಇರಬೇಕಾಗಿದೆ...."

"ನಾನು ಬೇಡ ಎನ್ನುತ್ತಿದ್ದೇನೆಯೆ....ಸರೋಜಿನಿ....ನೀನು ಸುಖವಾಗಿರಬೇಕೆಂದೇ ನಾನು ಹೇಳಿದ ಹಾಗೆ ಇರು ಎನ್ನುತ್ತಿದ್ದೇನೆ...."

"ಅದರಲ್ಲಿ ಸುಖವಿಲ್ಲ...."

"ನಿನಗೆ ತಿಳಿಯುವುದಿಲ್ಲ, ಸರೋಜಾ...."

"ನಾನೆಲ್ಲವನ್ನೂ ಯೋಚಿಸಿದ್ದೇನೆ....ಆ ಒಂದು ಮಾತು ನನ್ನಿಂದ.... ಸರ್ವಥಾ ಸಾಧ್ಯವಿಲ್ಲ....!"

"ಹಾಗಾದರೆ ಮಾತೇ ಮುಗಿಯಿತಲ್ಲ ನನಗೆ ಸಾಲದ ಹೊರೆ, ಔಷಧ ಉಪಚಾರವಿಲ್ಲದೆ ಸಾವು....! ನನ್ನನ್ನು ಬದುಕಿಸುವುದು ನಿನ್ನಿಂದ ಮಾತ್ರ ಸಾಧ್ಯ .."

"ನೀನು ಬದುಕಬೇಕಾದರೆ ನಾನು ಸಾಯಬೇಕು!"

"ನಾನು ಹೇಳುವ ಮಾರ್ಗದಿಂದ ಇಬ್ಬರೂ ಬದುಕಬಹುದು !"

"ಅದು ನಿನ್ನ ಮಟ್ಟಿಗೆ ಬದುಕೆನಿಸಬಹುದು. ಆ ಬದುಕೇ ಸಾವು ನನಗೆ."

"ನಿನ್ನನ್ನು ನಾನು ಶಾಲೆಗೆ ಕಳಿಸಿದ್ದೇ ಮೂರ್ಖತನವಾಗಿದೆ....!"

ಸರೋಜಿನಿಗೆ ಬಿಕ್ಕಟ್ಟು ಸಂಪೂರ್ಣವಾಗಿ ಅರ್ಥವಾಯಿತು. ಎತ್ತ

ನೋಡಿದರೂ ಆಸೆಯ ಸುಳಿವು ಕಾಣಲಿಲ್ಲ. ಮುಚ್ಚಂಜೆ ಮಕಮಕನೆ ಕವಿಯುತ್ತಿತ್ತು. ತನ್ನ ಹೃದಯದಾಸೆಯನ್ನು ಉಳಿಸಿಕೊಳ್ಳಬೇಕಾದರೆ ತಾಯಿಯನ್ನು ಬಲಿಕೊಡಬೇಕು—ಅಥವಾ ಸಾಯಗೊಡಬೇಕು....ಉಪಚಾರ ಗೌಡನ ಸಹಾಯವಿಲ್ಲದೆ ಸಾಧ್ಯವಿರಲ್ಲಿಲ್ಲ. ಗೌಡ ಕೊಡುತ್ತಿದ್ದ ಹಣವೆಲ್ಲವೂ ತನ್ನ ತಾಯಿಗಾಗಿ ಇರದೆ ತನಗಾಗಿ, ತನ್ನ ದೇಹಕ್ಕಾಗಿ ! ಅಟ್ಟದ ಮೇಲೆ ಕವಿಯುತ್ತಿದ್ದ ಕತ್ತಲೆಯಲ್ಲಿ ಘನವಾದ ಆ ಪಲ್ಲಂಗದ ಮೇಲೆ ನಿಸ್ತೇಜಳಾಗಿ ಮಲಗಿದ ತಾಯಿಯ ಬಗ್ಗೆ ಒಂದು ಕ್ಷಣ ಕನಿಕರವೆನಿಸುತ್ತಿತ್ತು. ಆದರೆ ಮರುಕ್ಷಣ ಹೃದಯ ರೊಚ್ಚಿಗೆದ್ದು ಇಂಥ ತಾಯಿ ಇದ್ದರೇನು ; ಬೇನೆಗೆ ಬಲಿಯಾಗಿ ಹೋದರೇನು ಎನಿಸುತ್ತಿತ್ತು. ಆದರೆ ಆಕೆ ಹೋದರೆ ತನ್ನ ಗತಿ ? ಇದ್ದ ಆಕೆ ಏನಿಲ್ಲದಿದ್ದರೂ ಒಂದು ಆಶ್ರಯಸ್ಥಾನವಾದರೂ ಆಗಿದ್ದಳು. ಆ ಆಶ್ರಯ ಕಡಿದುಹೋದರೆ ? ಮನಸ್ಸು ಸರ್ರನೆ ಮಾಧವನತ್ತ ಓಡಿತು. ಆತನ ಸಹಾನುಭೂತಿಯ ಸಹಾಯಬುದ್ಧಿಯ ಬಗೆಯಲ್ಲಿ ಯಾವ ಸಂದೇಹವೂ ಇರಲಿಲ್ಲ. ಆದರೆ....? ಆ ಸಹಾನುಭೂತಿ ಎಷ್ಟರಮಟ್ಟಿಗೆ ತನ್ನ ಪರಿಸ್ಥಿತಿಯಲ್ಲಿ ಉಪಯೋಗವಾಗಬಹುದು ? ದಾರಿಗಾಣದೆ ಅಸಹಾಯವಾದ ದನಿಯಲ್ಲಿ ಸರೋಜಿನಿ ಕೇಳಿದಳು :

"ಹೀಗೆ ಮನಸ್ಸಿಲ್ಲದೆ ನನ್ನನ್ನು ಈ ಮಾರ್ಗದಲ್ಲಿ ನೂಕುವುದರಲ್ಲಿ ನಿನಗೆ ಏನೂ ಕೆಡಕೆನಿಸುವುದಿಲ್ಲವೆ ?"

"ಯಾತಕ್ಕೆ ಕೆಡಕೆನಿಸಬೇಕು ?"

"ಅದು ಪಾಪದ ಮಾರ್ಗ ಎಂಬುದಕ್ಕಾಗಿ !"

"ಅವರವರ ವೃತ್ತಿಯಲ್ಲಿರುವುದು ಯಾವ ಪಾಪ ? ಯಾವ ಕುಲಗೋತ್ರಗಳಿಲ್ಲದ ನಾವು ಇನ್ನೊಬ್ಬರ ಕುಲಗೋತ್ರಗಳಲ್ಲಿ ಸೇರಿಕೊಂಡು ಕುಲ ಕೆಡಿಸುವುದೇ ಪಾಪ....!"

ರಂಗಸಾನಿಯ ದನಿಯಲ್ಲಿ ವಿಲಕ್ಷಣವಾದ ಕಠೋರತೆಯಿತ್ತು. ದನಿ ಎಲ್ಲಿಂದಲೋ ಬರುತ್ತಿರುವಂತೆ—ಆ ಗೋಡೆಗಳು, ಆ ಮುಚ್ಚಂಜೆಯ ಮಬ್ಬು, ಆಕೆಯ ತಾಯಿಯ ತಾಯಿಯೂ ವಿಲಾಸದಲ್ಲಿ ಮಲಗಿದ ಆ ಪಲ್ಲಂಗ, ಅಂಥ ಆ ಮನೆ, ಆ ವಾತಾವರಣ, ಸಮಾಜದ ಒಂದು ಪರಂಪರೆಯಲ್ಲಿ ಬೆಳೆದುನಿಂತ ಆ ಬುದ್ಧಿ, ಇವಾವವೂ, ಇವೆಲ್ಲವೂ ಒಂದೇ ದನಿಯಿಂದ ಮಾತನಾಡುತ್ತಿರುವಂತೆ—ಕೇಳಿಸಿತು ಸರೋಜಿನಿಗೆ. ಆ ಕ್ಷಣಕ್ಕೆ ಆಕೆಗೆನಿಸಿರಬೇಕು ತಾನು ಹೋರಾಟ ನಡೆಸಬೇಕಾದುದು, ಕೇವಲ ತನ್ನ ತಾಯಿಯ,

ಆಕೆಗೆ ಪ್ರೋತ್ಸಾಹ ಆಸೆಗಳನ್ನು ಕೊಡುತ್ತಿದ್ದ ಆ ಗೌಡನ—ವಿರುದ್ಧವಾಗಿ ಮಾತ್ರವಲ್ಲದೆ ತನ್ನ ತಾಯಿಗೆ ರಕ್ತಗತವಾಗಿ ಬಂದ ಆ ದುರ್ಬುದ್ಧಿ ಪರಂಪರೆಯ ವಿರುದ್ಧವಾಗಿ, ಗೌಡನಂಥ ಅಸಾಮಾಜಿಕ, ಸ್ವಾರ್ಥಲೋಲುಪ, ಕಾಮುಕ ಜೀವನವನ್ನು ದುಡ್ಡಿನ ಬಲದ ಮೇಲೆ ನಡೆಯಿಸಲು ಸಾಧ್ಯವಾಗಿಸುವ ಸಾಮಾಜಿಕ ವಾತಾವರಣದ ದುಷ್ಟತನದ ವಿರುದ್ಧವಾಗಿ ಎಂದು! ಶತಮಾನಗಳಾಚೆ ಅಸಂತುಷ್ಟ ಕಾಮ ಅಸಾಮಾಜಿಕವಾಗಿ ಮೊತ್ತಮೊದಲ ಸಾರೆ ತನಗೆ ಸಲ್ಲದ ಹೆಣ್ಣನ್ನು ಬಯಸಿ. ಪಡೆದು, ಶಿಕ್ಷೆಗೆ ಗುರಿಯಾಗದೆ ಹೋದ ಕ್ಷಣಕ್ಕೆ ಮಾನವ ಸಮಾಜಕ್ಕೆ ಈ ಶಾಪ ತಗಲಿತು! ಉತ್ತರೋತ್ತರವಾಗಿ ಬೆಳೆದು. ವಂಶಾನುವಂಶವಾಗಿ ಹಬ್ಬಿ ನಿಂತ ಈ ಪಾಪದ ಬಳ್ಳಿ ಕೊನೆಯವರೆಗೂ ಕಾಲ್ತೊಡಕಾಗಬೇಕಾಗುವುದೇ ಅನಿವಾರ್ಯವೆನಿಸುತ್ತಿದ್ದಾಗ ಈ ಶಾಪಕ್ಕೆ ನಿವೃತ್ತಿ ಸಾಧ್ಯವಾಗಿ ಕಾಣುತ್ತಿರಲಿಲ್ಲ. ಸರೋಜಿನಿಗೆ ಈ ಎಲ್ಲ ಯೋಚನೆ ಸ್ಪಷ್ಟವಾಗಿ ಹೊಳೆದವೊ ಇಲ್ಲವೊ; ಆದರೆ ಆ ಕ್ಷಣಕ್ಕೆ ಈ ಅನ್ಯಾಯವನ್ನು ಸಾಧ್ಯವನ್ನಾಗಿ ಮಾಡುವ ಪರಿಸ್ಥಿತಿಯನ್ನು ಮಾತ್ರ ಆಕೆಯ ಹೃದಯ ಆರ್ತವಾಗಿ ಶಪಿಸಿತು.

"ತನ್ನ ತಾಯಿಯಾದರೂ ಹೀಗೇಕೆ ಹಟ ಹಿಡಿಯಬೇಕು ?" ಮರುಕ್ಷಣದಲ್ಲಿಯೇ ಉತ್ತರ ದೊರೆಯಿತು : ಹಿಡಿಯದಿದ್ದರೆ ಆಕೆ ಬದುಕುವುದು ಹೇಗೆ? ಬೇನೆಯ ಮಾತು ಹೇಗಿದ್ದರೂ ಆಕೆಗೆ ನಿತ್ಯದ ನಿರ್ವಾಹಕ್ಕಾದರೂ ಗತಿ ಏನು ? ಆಗ ಆ ವೃತ್ತಿಯ ಅಸಹಾಯ ಭೀಕರತೆ ಸರೋಜಿನಿಯ ಕಣ್ಣೆದುರು ನಿಂತಿತು. ಹಾಗೆ ನೋಡಿದರೆ ತಾಯಿಗೆ ವಯಸ್ಸೇನೂ ಆಗಿರಲಿಲ್ಲ. ಆದರೂ ಆಕೆಗೆ ಮುಪ್ಪು; ದೇಹ ಸೋತು ಹಣ್ಣಾಗಿ, ವಿಕೃತವಾಗಿದೆ. ತನ್ನ ಗತಿಯೂ ಹೀಗೆಯೆ ? ಎಂದು ಯೋಚಿಸಿದಾಗ ಸರೋಜಿನಿ ಗದಗದನೆ ನಡುಗಿದಳು....ಬೀದಿಯ ದೀಪಗಳು ಹತ್ತಿಕೊಂಡಿದ್ದವು. ಅವನ್ನು ನೋಡಿ ಮತ್ತೆ ಮನೆಯಲ್ಲಿಯ ಸುತ್ತಲಿನ ಕತ್ತಲೆಯನ್ನು ನೆನೆದಾಗ ಮೊದಲೇ ದೊಡ್ಡದಾಗಿದ್ದ ಮನೆ ಇನ್ನೂ ದೊಡ್ಡದಾಗಿ, ದಟ್ಟಡವಿಯಲ್ಲಿಯ ಕಗ್ಗವಿಯಂತೆ ಕಂಡಿತು. ಎದ್ದು ದೀಪ ಬೆಳಗಿಸಬೇಕೆಂದಳು. ಯಾವ ಮಾತೂ ಇಲ್ಲದೆ ತಾಯಿಯೂ ಏಳುವುದರಲ್ಲಿದ್ದಳು. ಸರೋಜಿನಿ ಎಂದುಕೊಂಡಳು: 'ಎಂಥ ದೊಡ್ಡ ಮನೆ. ತಾಯಿ ಹೇಗಿರುತ್ತಾಳೊ ಇದರಲ್ಲಿ. ಅದೂ ಒಬ್ಬಂಟಿಯಾಗಿ' ಎಂದು. ಯೋಚಿಸುತ್ತ ಹೋದ ಹಾಗೆ ಆಕೆಯ ಜೀವನದ ರೀತಿಯೇ ವಿಚಿತ್ರವಾಗಿ ತೋರಿತು. ಈ ಮನೆ ಆಕೆಯದು....ಆಕೆಯ ತಾಯಿಯದು....

ಯಾರದೋ? ಆ ಮನೆಯ ಬಗ್ಗೆ—ಅದು ತಮ್ಮ ಮುತ್ತಜ್ಜಿಗೆ ಬಂದ ಬಗೆಯ ಬಗ್ಗೆ—ಸರೋಜಿನಿ ಎಷ್ಟೋ ಮಾತುಗಳನ್ನು ಆಗಾಗ ಕೇಳಿದ್ದಳು. ಆ ಮಾತುಗಳನ್ನು ನೆನೆದಾಗ ಆ ಮನೆಯನ್ನಾವರಿಸಿದ ಕತ್ತಲೆಯುಲ್ಲಿ, ಆ ಮನೆಯ ಸಂದುಗೊಡುಗಳಲ್ಲಿ ಎಲ್ಲವೂ ಪಾಪಮಯವಾದ ಆ ಗತಕಾಲದ ಇತಿಹಾಸ ಹುದುಗಿಕೊಂಡು ಬಾಯಿಲ್ಲದೆ ಬಳಲುತ್ತಿರುವಂತೆ ಭಾಸವಾಯಿತು. ಆ ಮನೆ—ಆ ತಾಯಿ ಎರಡೂ ಒಂದೇ ಎಂದುಕೊಂಡು ದೀಪ ಬೆಳಗಿಸಿದಳು. ಕೆಳಗಡೆ ಇಳಿದು ಹೋಗಿ ಏನಾದರೂ ತಿನಿಸು ಮಾಡಬೇಕೆನ್ನುತ್ತಿದ್ದ ಕ್ಷೀಣಳಾದ ತಾಯಿಗೆ ನೆರವಾಗಲು ಮುಂದಾದಳು. ಆಗ ಮಾತ್ರ ವಿಚಾರಗಳ ಒತ್ತಡ ಕೆಲಮಟ್ಟಿಗೆ ಕಡಿಮೆಯಾದಂತೆನಿಸಿತು.

ಇಡೀ ರಾತ್ರಿ ಸರೋಜಿನಿಗೆ ಏನೇನೋ ಕನಸುಗಳು. ಒಂದು ಕ್ಷಣ ತಾವು ಮಲಗಿದ ಮೇಲಟ್ಟ ರಂಗಸ್ಥಳದಂತೆ ಶೋಭಿತವಾಗಿತ್ತು. ಯಾವಳೊ ಒಬ್ಬ ಚೆಲುವೆ ಸಂಗೀತ ಕಚೇರಿಯ ಠೀವಿಯಲ್ಲಿ ಸುಸ್ವರವಾಗಿ ಹಾಡುತ್ತಿದ್ದಳು. ಹಾಡು ನಡೆದೇ ಇತ್ತು. ಎಲ್ಲಿಂದಲೋ ಉನ್ಮತ್ತವಾಗಿ ನಗೆ ತೇಲಿಬರುತ್ತಿತ್ತು. ತೇಲಿಬರುವ ನಗೆಯ ಮೇಲೇರಿ ಯುವಕನೊಬ್ಬ ಮುಂದೆ ಬಂದು ಹಾಡುತ್ತಿದ್ದವಳನ್ನು ಕೈ ಹಿಡಿದು ಸೆಳೆದ. ಹಾಡುತ್ತಿದ್ದ ಯುವತಿ ಕುಣಿಯುವ ಭಂಗಿಯಲ್ಲಿ ನೆಗೆದು ಮೇಲೆದ್ದು ನಾಲ್ಕು ಹೆಜ್ಜೆ ಹಾಕಿದಳು. ಕಣ್ಣು ಕುಕ್ಕಿಸುವ ತೆಳುವಾದ ಆಕೆಯ ರೇಷ್ಮೆಯ ಸೀರೆ ಆ ನೆಗೆತಕ್ಕೆ ಕಳಚಿಬಿದ್ದಿತು.... ಯುವತಿಯ ಹಾಡು ಯುವಕನ ಉನ್ಮಾದಕ್ಕೆ ಸರಿಯಾಗಿ ಕುಣಿತದೊಡನೆ ಕುಣಿಯುತ್ತಿತ್ತು....

ದೃಶ್ಯ ಬದಲಾಯಿಸಿದಂತಾಯಿತು. ಯುವತಿ ದಣಿದು ಮಲಗಿದಳು. ಆಕೆ ಮಲಗಿದ ಪಲ್ಲಂಗ ತನ್ನ ತಾಯಿಯ ಪಲ್ಲಂಗವೇ ಆಗಿತ್ತು. ಬಟ್ಟೆಗಳ ಪರಿವೆ ಇಲ್ಲದೆ ಬಿದ್ದುಕೊಂಡ ಆಕೆಯ ದೇಹವನ್ನು ಬದಿಯಲ್ಲಿಯೇ ಕುಳಿತ ಯುವಕ ದಿಟ್ಟಿಸಿ ನೋಡುತ್ತಿದ್ದ. ನೋಡನೋಡುತ್ತಿರುವಾಗಲೇ ಆಕೆಯನ್ನು ತನ್ನ ತೋಳಸೆರೆಯಲ್ಲಿ ಬಂಧಿಸಿ ಮುದ್ದಿಸಿದ್ದ ಸರೋಜಿನಿಗೆ ಎಚ್ಚರವಾಯಿತು. ಆದರೆ ಕಣ್ದೆರೆದು ನೋಡುವ ಧೈರ್ಯವಾಗಲಿಲ್ಲ. ಮತ್ತೆ ಮಲಗಲು ಯತ್ನಿಸಿದಳು, ನಿದ್ರೆ ಬಾರಲೇ ಇಲ್ಲ. ಕಣ್ತೆರೆದು ನೋಡಿದಳು. ತಾಯಿ ಸ್ವಸ್ಥವಾಗಿ ಮಲಗಿ ನಿದ್ರಿಸುತ್ತಿದ್ದಳು. ಸಮೀಪದಲ್ಲಿಯೇ ಇಟ್ಟಿದ್ದ ದೀಪದ ಬೆಳಕಿನಲ್ಲಿ ಆಕೆಯ ಮುಖ ಸ್ಪಷ್ಟವಾಗಿ ಕಾಣುತ್ತಿತ್ತು. ಕನಸಿನಲ್ಲಿ ಕಂಡ ಯುವತಿಯ ಮುಖ ಕಣ್ಣೆದುರು ಸುಳಿಯಿತು. ಆ ಎರಡು ಮುಖಗಳಲ್ಲಿ ಸರೋಜಿನಿಗೆ ಯಾವುದೊ

ಒಂದು ಬಗೆಯ ಸಾಮ್ಯ ತೋರಿದಾಗ ವಿಚಿತ್ರವೆನಿಸಿತು....

ಇನ್ನೊಂದೆಡೆ ಮಗ್ಗುಲಾಗಿ ಮಲಗಿದಳು ಸರೋಜಿನಿ. ಅರ್ಧ ನಿದ್ರೆ, ಅರ್ಧ ಶೂಕಡಿಕೆಯಲ್ಲಿ ಮನಸ್ಸು ತೂಗಾಡುತ್ತಿರುವಾಗ ಮತ್ತೆ ಯಾರೋ ಅಟ್ಟದ ಮೇಲೆ ಬಂದಂತಾಯಿತು. ಮತ್ತೆ ಕನಸು ಎಂದುಕೊಂಡಳು. ಒಂದೆರಡು ನಿಮಿಷಗಳಲ್ಲಿಯೇ ಚೇತನ ನಿದ್ರೆಯ ಆಳಕ್ಕೆ ಇಳಿಯುತ್ತಿರುವಂತೆ ಕಣ್ಣೆದುರಿಗಿನ ಚಿತ್ರ ಸ್ಪಷ್ಟವಾಗತೊಡಗಿತು. ಪಲ್ಲಂಗದ ಮೇಲಿನ ಹಾಸುಗೆಯನ್ನು ಸರಿಪಡಿಸುತ್ತಿದ್ದ ಹೆಣ್ಣುಮಗಳೊಬ್ಬಳೆದುರು ನಡುವಯಸ್ಸಿನ ಗಟ್ಟಿಮುಟ್ಟಾದ ಗಂಡಸೊಬ್ಬ ಬಂದು ನಿಂತು ಮೆಲುದನಿಯಲ್ಲಿ ಏನೋ ಕೇಳಿದ. ಆ ಹೆಣ್ಣು ಹೆದರಿಕೊಂಡು ಹಿಂದಕ್ಕೆ ಸರಿಯಿತು.

"ಏನಾಯಿತು ನಿನ್ನ ವಿಚಾರ ?" ಎಂದ ಆತ.

ಆಕೆ ತಲೆಯಲ್ಲಾಡಿಸಿದಳು—ತಲೆತಗ್ಗಿಸಿ.

"ಹೆದರಿಕೆಯೇ ನಿನಗೆ ?" ಎಂದ ಆತ, ಇನ್ನೂ ಮುಂದಕ್ಕೆ ಬಂದು.

ಆಕೆ ಇನ್ನೂ ನೀರವ. ಗಂಡು ಮುಂದೆ ಸರಿದು ಆಕೆಯ ಹೆಗಲ ಮೇಲೆ ಕೈಹಾಕಿತು. ಹೆಣ್ಣು ಹಿಂದಕ್ಕೆ ಸರಿದು ಕೆಳಗಡೆ ಬೊಟ್ಟುಮಾಡಿ ಏನನ್ನೋ ಸೂಚಿಸಿದಂತಾಯಿತು.

"ಯಾರಿದ್ದಾರೆ ಕೆಳಗಡೆ ?"

"ಅವರು...." ಎಂದು ಪಿಸುಗುಟ್ಟಿದಳು ಆಕೆ.

"ಯಾರು, ನಿನ್ನ ಗಂಡನೆ ?"

"ಹುಂ...."

"ಹುಚ್ಚು !....ಕುಡಿದು ಬಿದ್ದಿದ್ದಾನೆ."

"ಇಲ್ಲ. ಎಚ್ಚರವಾಗಿದ್ದಾರೆ...."

"ಎಲ್ಲಿಯ ಎಚ್ಚರ, ನಾನೇ ಕುಡಿಸಿದ್ದೇನೆ. ಮೈಮರೆತು ಕುಡಿಯುವಷ್ಟು ದುಡ್ಡು ಕೊಟ್ಟಿದ್ದೇನೆ."

"ಊಹುಂ...."

"ಅವನ ಹೆದರಿಕೆ ಬೇಡ...."

"ಇದು ನಿತ್ಯದ ಮಾತು....ಅವನಿಲ್ಲಿಯೇ ಇದ್ದರೆ...."

ಗಂಡು ಏನೋ ಯೋಚಿಸುತ್ತಿರುವಂತೆ ತೋರಿತು. ಕೊನೆಗೆ ಕೇಳಿದ :

"ಅವನ ಹೆದರಿಕೆ ತಪ್ಪಿದರೆ ನೀನು ಸರಿಯಾಗಿ ಇರುತ್ತೀಯಾ ?"

"ಅವರ ಹೆದರಿಕೆ ತಪ್ಪಿದರೆ ಉಳಿದವರಿಲ್ಲವೆ ?"

"ಉಳಿದವರ ಗೊಡವೆ ನಿನಗೆಯೆ ? ಆಡಿದವರ ಬಾಯಿ ತುಂಬುವಷ್ಟು ದುಡ್ಡಿದೆ ನನ್ನ ಹತ್ತಿರ...."

"ಹಾಗಾದರೆ...."

"ನಿನಗೆ ದುಡ್ಡಿನ ಚಿಂತೆಯೆ ? ಈ ಮನೆಯೇ ನಿನ್ನದು...."

"ಬರೀ ಮನೆಯೇ ?"

"ಬರೀ ಮನೆಯೇಕೆ ? ನಾನೇ ನಿನ್ನವ "

"ನಿಮ್ಮ ಹೆಂಡತಿ ?"

"ಹಾಳು ಬಾವೀ ಬೀಳಲಿ !" ಎಂದವನೇ ಆಕೆಯನ್ನು ಮುಂದಕ್ಕೆಳೆದು ಕೊಂಡ. ಹೆಣ್ಣಿನ ಮುಖದಲ್ಲಿ ಗೆಲುವಿತ್ತು. ಕೆನ್ನೆಯ ಮೇಲೆ ನಗು ಕುಣಿಯು ತ್ತಿತ್ತು—ಹಾವಿನ ಹೆಡೆಯ ಮೇಲಿನ ನಡುಹಗಲಿನ ಬೆಳಕಿನ ಹಾಗೆ ! ಮರು ದಿನ ನೆನೆದಾಗ ಸರೋಜಿನಿಗೆ ಆ ಹೆಣ್ಣುಮಗಳ ಮುಖ ಸ್ಪಷ್ಟವಾಗಿ ಕಣ್ಣೆ ದುರು ನಿಲ್ಲುತ್ತಿರಲಿಲ್ಲ. ಆಕೃತಿ ಮಾತ್ರ ಯಾವುದೊ ಒಂದೆರಡು ತಲೆಮಾರು ಹಿಂದಿನದಾಗಿದ್ದಂತೆ ಭಾಸವಾಗುತ್ತಿತ್ತು. ಅದನ್ನೆಲ್ಲ ನೆನೆದಾಗ ವಿಚಿತ್ರವೆನಿ ಸುತ್ತಿತ್ತು—ಯಾರೊ, ಯಾರ ಕತೆಯೊ ! ಆದರೆ ಆ ಅಟ್ಟದ ಗೋಡೆಗಳಿಗೆ ಬಾಯಿ ಇದ್ದರೆ ಅದೆಲ್ಲವೂ ಹಿಂದಿನ ಕಾಲದಲ್ಲಿ ಅಲ್ಲಿ ನಡೆದ ಇತಿಹಾಸವೆಂದು ಹೇಳಬಹುದಾಗಿತ್ತು !

ಯೋಚಿಸಿದ ಹಾಗೆ ಸರೋಜಿನಿಯ ಕಲ್ಪನೆ ಅಂಥವೇ ನೂರಾರು ಚಿತ್ರ ಗಳನ್ನು ಕಣ್ಣೆದುರು ತೋರಿಸಿ ಆ ಬಾಳಿನ ಬೀಭತ್ಸಭಯಾನಕತೆಯನ್ನು ನೂರು ಪಾಲು ಮಾಡಿ ತೋರಿಸುತ್ತಿತ್ತು. ಬದುಕು ಅಸಹ್ಯವೆನಿಸುತ್ತಿತ್ತು. ಹೀಗೆ ಪಶುವಿಗಿಂತ ಕಡಿಮೆಯಾಗಿ ಬಾಳುವುದೆ ? ಅದಕ್ಕಿಂತ ಯಾವ ಆಡಂಬರವೂ ಇಲ್ಲದೆ ಯೋಚನೆಯನ್ನೇ ಕೊನೆಗಾಣಿಸುವಂತೆ ಬದುಕನ್ನೇ ಬಗೆಹರಿಸಿಬಿಟ್ಟರೆ? ಆದರೆ ಬದುಕಬೇಕೆಂಬಾಸೆ ಬಲವಾಗಿತ್ತು. ಕರೆದು ಬರಮಾಡಿಕೊಂಡ ಸಾವಿ ನಂಥ ಅನ್ಯಾಯ ಬದುಕಿಗೆ ಬೇರೊಂದಿಲ್ಲವೆಂದುಕೊಂಡು ಬದುಕಬೇಕು, ಎಂಥ ಕಷ್ಟ ಬಂದರೂ ಪರಿಸ್ಥಿತಿಯನ್ನು ಎದುರಿಸಬೇಕು, ಎಂದೇ ನಿರ್ಧಾರ ಬೆಳೆಯ ತೊಡಗಿತು. ಆದರೆ ತನ್ನ ಸುತ್ತಲಿನ ಪರಿಸ್ಥಿತಿಯ ಆಗುಹೋಗುಗಳನ್ನು ನೆನೆ ದಾಗ ಮಾತ್ರ ಎಡೆಗೆಡುತ್ತಿದ್ದಳು.

ಯಾವ ಮಾರ್ಗದಿಂದ ಈ ಕ್ರೂರವ್ಯೂಹವನ್ನು ತಪ್ಪಿಸುವುದು ಸಾಧ್ಯವೆಂಬು ದನ್ನು ಎಣಿಕೆ ಹಾಕುವುದರಲ್ಲಿಯೇ ನಾಲ್ಕಾರು ದಿನ ಕಳೆಯಿತು. ಆಕೆಯ ವ್ಯಗ್ರ ನಿರುತ್ಸಾಹವನ್ನು ರಂಗಸಾನಿ ಗುರುತಿಸದಿರಲಿಲ್ಲ. ಎಷ್ಟು ಪರಿಯಿಂದ

ಸಮಾಧಾನ ಹೇಳಿದರೂ ಸರೋಜಿನಿಯ ವಿಚಾರದ ಸಂಕಟ ಆಕೆಗೆ ಅರ್ಥವಾಗುವುದೇ ಸಾಧ್ಯವಿರಲಿಲ್ಲ. ಸರೋಜಿನಿಯೂ ತನ್ನ ವಿಚಾರಗಳನ್ನು ಹೇಳುತ್ತಲೂ ಇರಲಿಲ್ಲ—ಹೇಳಿ ಏನು ಪ್ರಯೋಜನ ಎಂಬ ನಿರಾಶೆಯಲ್ಲಿ. ದಿನ ಕಳೆದ ಹಾಗೆ ಆಕೆಯಲ್ಲಿಯ ಆದರ್ಶಬುದ್ಧಿ ಕೆರಳುತ್ತಿತ್ತು ; ವ್ಯವಹಾರ ಬುದ್ಧಿ ಬೆದರಿಕೆ ಹಾಕುತ್ತಿತ್ತು. ಒಂದು ಕ್ಷಣ ಹಟ ಬೆಳೆದು ಬೆಟ್ಟವಾಗಿ ನಿಲ್ಲುತ್ತಿತ್ತು. ಮರುಕ್ಷಣ ಪರಿಸ್ಥಿತಿಯ ವಜ್ರಾಘಾತದಿಂದ ಆ ಬೆಟ್ಟ ಕುಸಿದು ಬಯಲಾಗುತ್ತಿತ್ತು. ಸರೋಜಿನಿಯ ಹೃದಯ ಈ ವಿರುದ್ಧ ವಿಚಾರಗಳ ಹೊಡೆತದಲ್ಲಿ ಗಾಸಿಯಾಗಿ ಬಳಲುತ್ತಿತ್ತು.

"ಮನುಷ್ಯನನ್ನು ಮಡಿಸಿ, ಮುದ್ದೆಮಾಡಿ, ಮಣ್ಣುಗೂಡಿಸುವ ಮಹಾ ಪಾಪಿ ನೀನು !"

ಎಂದು ಆದರ್ಶಬುದ್ಧಿ ಕೆರಳಿ ಶಪಿಸುತ್ತಿತ್ತು ವ್ಯವಹಾರಬುದ್ಧಿಯನ್ನು. ಆದರೆ ವ್ಯವಹಾರಬುದ್ಧಿ ನಿಧಾನವಾಗಿ ಉತ್ತರ ಹೇಳುತ್ತಿತ್ತು :

"ಮಣ್ಣುಗೂಡಿಸುವ ಕೆಲಸ ನಿನ್ನದು ! ಇದ್ದ ಸ್ಥಿತಿಯನ್ನು ಕಣ್ದೆರೆದು ನೋಡಿ ಬದುಕಿಗೆ ಹೊಂದಿಕೊಂಡು, ಸುಖವಾಗಿ ಇರುವಂತೆ ಬುದ್ಧಿವಾದ ಹೇಳುವೆ ನಾನು !"

"ಹೌದು. ಆ ಬುದ್ಧಿವಾದ ಹೇಳಿ, ಮನುಷ್ಯನಲ್ಲಿಯ ಮಹತ್ವಾಕಾಂಕ್ಷೆಯ ಶ್ರಾದ್ಧ ಮಾಡಿಸುವ ಬ್ರಾಹ್ಮಣ ನೀನು !"

"ಹುಚ್ಚು ಆಸೆಯ ಜಾಲ ಬೀಸಿ, ಇದ್ದ ಸುಖಕ್ಕೂ ಎರವಾಗುವಂತೆ ಮನುಷ್ಯನನ್ನು ಸೆಳೆದೊಯ್ಯುವ ಮಾಯಾಮೃಗ ನೀನು !"

"ಬಾವಿಯಲ್ಲಿ ಬಿದ್ದವ ನೀನು. ನಿನಗೆ ಹೊರಜಗತ್ತು ಕಾಣುವುದಿಲ್ಲವೆಂದ ಮಾತ್ರಕ್ಕೆ ಹೊರಜಗತ್ತೇ ಇಲ್ಲವೆಂಬ ಹಟವೇಕೆ ನಿನಗೆ? ಮಾಯಾಮೃಗ ವಂತೆ, ಮಾಯಾಮೃಗ !"

"ಹಾಗಾದರೆ ಬಾವಿಯಲ್ಲಿ ಬಿದ್ದವನಿಗೆ ಮೊದಲ ಯೋಚನೆ ಯಾವುದು ? ಮೇಲಕ್ಕೇಳುವುದೊ ? ಹೊರಜಗತ್ತಿನದೊ ?"

"ಹೊರಜಗತ್ತಿನದು ! ಅದರ ಆಸೆಯಿರದಿದ್ದರೆ ಆತ ಹೊರಬಂದರೇನು, ಬಾರದೆ ಅಲ್ಲಿಯೇ ಮುಳುಗಿದರೇನು ?"

"ಮುಳಗಬಾರದು ಎನ್ನುವ ಯೋಚನೆಯನ್ನಾದರೂ ಒಪ್ಪುತ್ತೀಯಾ ಹಾಗಾದರೆ ?"

"ಖಂಡಿತವಾಗಿ ಒಪ್ಪುತ್ತೇನೆ. ಆದರೆ ಯಾತಕ್ಕಾಗಿ ಎನ್ನುವುದು ಮುಖ್ಯ.

ತಿರುಗಿ ಬಂದು ಮತ್ತೆ ಅಲ್ಲಿಯೇ ಬೀಳುವುದಾದರೆ ಏಳುವುತಾದರೂ ಯಾತಕ್ಕೆ? ವ್ಯರ್ಥ ಶ್ರಮ."

"ಹಾಗಾದರೆ ಈಕೆಗೆ ನೀನು ಮಾಡು ಎನ್ನುವುದಾದರೂ ಏನು ?"

"ಈ ಪರಿಸ್ಥಿತಿಯನ್ನು ಧಿಕ್ಕರಿಸಿ ಒದೆದು ದೂರ ಸರಿಯುವುದು !"

"ಅದು ಸಾಧ್ಯವೆ ?"

"ಎಂದಿಗೂ ಸಾಧ್ಯ—ನನ್ನಲ್ಲಿ ವಿಶ್ವಾಸವಿದ್ದರೆ !"

"ತಾಯಿಯ ಗತಿಯೇನು ?"

"ಆಕೆಗೆ ಆಕೆಯೇ ಗತಿ !"

"ನ್ಯಾಯವೇ ಇದು ?"

"ಅದರ ಯೋಚನೆ ಆಕೆಗೆ ಸ್ವತಹಕ್ಕೆ ಇರಬೇಕು. ಆಕೆಯ ಬಯಕೆ ನ್ಯಾಯವೆ ಹಾಗಾದರೆ ?"

"ನಿನ್ನ ದೃಷ್ಟಿಯಿಂದ ಇರಲಿಕ್ಕಿಲ್ಲ. ಆದರೆ ಆಕೆ ಬದುಕಿದ ಪರಂಪರೆ ಯಲ್ಲಿ "

"ಆಕೆ ಬದುಕಿದ ಪರಂಪರೆ ! ಬದುಕೇ ಅದು ? ಅದು ಬದುಕಲ್ಲವೆಂದೇ ಆ ಪರಂಪರೆಯನ್ನು ಮುರಿಯಬೇಕಾಗಿದೆ."

"ವಂಶಾನುವಂಶವಾಗಿ—ಕಾಲಾತೀತವಾಗಿ ಎಂಬಂತೆ ನಡೆದುಬಂದ— ಅದನ್ನು ಮುರಿಯುವುದು ಸಾಧ್ಯವೇ ?"

"ಕೂಡಲೆ ಮುರಿಯುವುದು ಸಾಧ್ಯವಿಲ್ಲದಿದ್ದರೂ ಅದಕ್ಕೆ ತಡೆಹಾಕುವುದು ಸಾಧ್ಯ. ಈ ತಡೆಯ ಅರ್ಥವೇನು ಎಂಬುದನ್ನು ಜನ ಯೋಚಿಸುವಂತಾದರೆ ಅರ್ಥಕ್ಕಿಂತ ಹೆಚ್ಚು ಕೆಲಸವಾಯಿತು...."

"ಕನಸಿಗನಲ್ಲವೆ ನೀನು ?" ವ್ಯವಹಾರಬುದ್ಧಿ ಮೂದಲಿಸಿತು.

"ಹೌದು. ಕನಸಿಲ್ಲದೆ ಯಾವ ಹೊಸ ನಿರ್ಮಿತಿಯೂ ಇಲ್ಲ !"

"ದೊಡ್ಡ ಮಾತು ! ಆದರೆ ಈಕೆಗೆ ಬೇಕಾದದ್ದು ಸುಖ, ಕನಸಲ್ಲ !"

"ಅದಕ್ಕೆಂದೇ ಈ ಎಲ್ಲ ತೊಳಲಾಟ !"

"ನಿನ್ನ ಬೆನ್ನು ಹತ್ತಿದವರಿಗೆ ತೊಳಲಾಟದ ಹೊರತು ಬೇರೆಗತಿಯೇ ಇಲ್ಲ!"

"ಹಾಗೆ ಹೇಳುತ್ತಿರುವುದು ನಿನ್ನ ಸಂಕುಚಿತಬುದ್ಧಿ !"

"ನನ್ನ ಬುದ್ಧಿ ಹೇಗೂ ಇರಲಿ. ತಾಯಿ ಇಲ್ಲವಾದರೆ ಈಕೆಗೆ ಈ ವಿಶಾಲ ಪ್ರಪಂಚದಲ್ಲಿ ನಿನ್ನ ವಿಶಾಲಬುದ್ಧಿ ಎಲ್ಲಿಯಾದರೂ ಒಂದು ಆಶ್ರಯವನ್ನು ತೋರಿಸಬಲ್ಲುದೆ ?"

"ನೀನೇ ಹೇಳಿದೆ, ಪ್ರಪಂಚ ವಿಶಾಲ ಎಂದು !"

"ಆದರೆ ಆಕೆ ಹೆಣ್ಣು. ತನ್ನ ಮಟ್ಟಿಗೆ ತಾನಾಗಿ ಇರಬಲ್ಲಳೆ ?"

"ಯಾಕಿರಬಾರದು !"

"ಅದನ್ನಲ್ಲ ನಾನು ಕೇಳುತ್ತಿರುವುದು. ಆಕೆ ಇರಬಹುದೇ ಎಂಬುದು ನನ್ನ ಪ್ರಶ್ನೆ."

"ನನ್ನಲ್ಲಿ ವಿಶ್ವಾಸವಿದ್ದರೆ ಯಾವುದೂ ಸಾಧ್ಯ !"

"ಹುಚ್ಚ ಹುಚ್ಚನಿಗೆ ದಾರಿ ತೋರಿಸಿದಂತೆ !" ಎಂದು ತೆಗಳಿಕೆಯ ನಗು ಸೂಸಿ ವ್ಯವಹಾರಬುದ್ಧಿ ಹಿಂಜರಿಯಿತು. ಆದರ್ಶಬುದ್ಧಿ ಕ್ಷಣಮಾತ್ರ ಗೆಲುವಿನಲ್ಲಿ ಎದೆಯುಬ್ಬಿಸಿತಾದರೂ ಮರುಕ್ಷಣದಲ್ಲಿ ತನ್ನನ್ನು ತಾನೇ ಕೇಳಿಕೊಂಡಿತು: "ನನ್ನಲ್ಲಿ ವಿಶ್ವಾಸವಿದ್ದರೆ ಎಂದೆ. ಈಕೆಗೆ ವಿಶ್ವಾಸ ಇರಬಹುದೇ ? ಇರದೆ ಇದ್ದರೆ....?" ಎಂದು.

ವ್ಯವಹಾರದ ಬುದ್ಧಿ ಹೊರಪುವಾಗ ನುಡಿದು ಹೋಯಿತು :

"ಇದು ವಿಶ್ವಾಸದ ವಿಷಯವಲ್ಲ. ಕೇವಲ ಪರಂಪರೆಯ ಪಾಪವಾಗಿದ್ದರೆ ನಿನ್ನಲ್ಲಿ ವಿಶ್ವಾಸವಿಟ್ಟು ಅದನ್ನು ತೊಳೆಯಬಹುದಾಗಿತ್ತು. ಆದರೆ ಇಲ್ಲಿದ್ದದ್ದು ಸಂಸ್ಕಾರದ ಪಾಪ ! ಅದಕ್ಕೆ ನಿವೃತ್ತಿಮಾರ್ಗ ಮರಣವೊಂದೇ ! ಹಣ್ಣು ಬಿಡುವ ಮೊದಲೇ ಕಡಿದುಹಾಕಿದರಲ್ಲವೆ ವಿಷವೃಕ್ಷಕ್ಕೆ ವಿನಾಶ ?"

ನಾಲ್ಕೆಂಟು ದಿವಸಗಳ ಈ ಯೋಚನೆಗಳಿಂದ ಸರೋಜಿನಿಯ ನಿರ್ಧಾರ ಹುರಿಗೊಳ್ಳುತ್ತಿತ್ತು. ಆದರೆ ಆ ನಿರ್ಧಾರವನ್ನು ಆಚರಣೆಯಲ್ಲಿ ತರುವುದು ಹೇಗೆ ಎಂಬುದೇ ಬಗೆಹರಿಯದ ಸಮಸ್ಯೆಯಾಗಿತ್ತು. ಎತ್ತ ನೋಡಿದರೂ ಮಾಧವನ ಹೊರತು ಮಾರ್ಗ ಕಾಣುತ್ತಿರಲಿಲ್ಲ. ಕ್ಷಣಕ್ಷಣಕ್ಕೆ 'ನನ್ನಲ್ಲಿ ವಿಶ್ವಾಸವಿಡು' ಎಂಬ ಆತನ ಆಶ್ವಾಸನ ಕೈದೀವಿಗೆಯಾಗಿ ಕರೆಯುತ್ತಿತ್ತು. ಹಾಗಾದರೆ ಇದೆಲ್ಲವನ್ನೂ ಹಠಾತ್ತಾಗಿ ಬಿಟ್ಟುಕೊಟ್ಟು, ಹೇಳದೆಯೆ ಹೊರಟು, ಮಾಧವನನ್ನು ಮೊರೆಹೊಕ್ಕರೆ ? ಎಂಬ ಯೋಚನೆ ಮುಂದೋಡಿತು. ಆದರೆ ಆತನಿಗೆ ಯಾವ ಒಂದು ಮಾತನ್ನೂ ತಿಳಿಸದೆ ಅವನ ಕೊರಳಿಗೆ ಬಿದ್ದರೆ ? ಇಬ್ಬರೂ ಗೋಳಿಗೀಡಾಗಿ ಯಾವುದೂ ಕೈಗೂಡದೆ ಹೋಗಬಹುದೆಂಬ ಎಣಿಕೆಯಲ್ಲಿ ಇದ್ದ ಸ್ಥಿತಿಗತಿಯನ್ನು ಮಾಧವನಿಗೆ ತಿಳಿಸಿ ಆತನ ಹೇಳಿಕೆಯಂತೆ ಮುಂದುವರಿಯುವುದೆಂದು ಗೊತ್ತುಮಾಡಿಕೊಂಡು, ತಾಯಿಗೆ ತಿಳಿಯದಲೆ ಮಾಧವಕೊಟ್ಟ ವಿಳಾಸಕ್ಕೆ ಕಾಗದವೊಂದನ್ನು ಬರೆದುಹಾಕಿದಳು.

## 10

ಪರೀಕ್ಷೆಯಾದನಂತರ ತನ್ನ ಕಾರ್ಯಯೋಜನೆಯನ್ನು ಮಾಧವ ಭೀಮಣ್ಣನ ಕೂಡ ಎಷ್ಟೋ ಬಾರಿ ಚರ್ಚಿಸಿದ್ದ. ಕೆಲಸಕ್ಕಾಗಿ ಮುಂಬಯಿಗೆ ತೆರಳುವ ವಿಚಾರ ಉಳಿದವರಂತೆ ಭೀಮಣ್ಣನಿಗೂ ರುಚಿಸಿರಲಿಲ್ಲ. ಆದರೆ ಮಾಧವನ ಹಟದೆದುರು ಭೀಮಣ್ಣ ನಿರುಪಾಯನಾಗಿದ್ದ. ಕೊನೆಯದಾಗಿ ಹೇಳಿದ :

"ನಾನು ಎಷ್ಟು ಹೇಳಿದರೂ ನಿನಗೆ ಒಪ್ಪಿಗೆಯಿಲ್ಲ. ಒಂದು ಮಾತನ್ನು ಮಾತ್ರ ಹೇಳುತ್ತೇನೆ ಎಷ್ಟಾದರೂ ನೀನು ಗಂಡಸು. ನಿನಗೆ ಧೈರ್ಯವಿದೆ. ಏನನ್ನೂ ಮಾಡಿ ನೀನು ಮುಂದೆ ಬರಬಹುದು. ಆದರೆ ನಿನ್ನ ಈ ಕಕ್ಕನ ವ್ಯವಹಾರದಲ್ಲಿ ಸುಮ್ಮನೆ ಮೊದಲಿನಿಂದಲೂ ನನಗೆ ಅಪಕೀರ್ತಿ ಬಂದಿದೆ. ನಡೆದುದನ್ನೆಲ್ಲ ಹಾಗೂ ಹೀಗೂ ಮುಚಿಮಾಚಿ ಮನೆತನಕ್ಕೆ ಕಳಂಕ ಬರಬಾರದೆಂದು ಒಂದು ಕಾಲಕ್ಕೆ ಬೇಕಾದಷ್ಟು ಪ್ರಯತ್ನ ಮಾಡಿದೆ. ನಿಮ್ಮ ತಂದೆಯ ದುಡ್ಡಿಗಾಗಿ ನಾನು ಮುಂದಾಗಿದ್ದೆ ಎಂದು ನಿಮ್ಮ ಕಕ್ಕ ತಿಳಿದು ಅಂದಿನಿಂದ ನನ್ನ ಮೇಲೆ ಹೊರಗಡೆಯಲ್ಲದಿದ್ದರೂ ಒಳಗಿನಿಂದಲೇ ಉರಿಯುತ್ತಾನೆ. ನನಗೇನು ಯಾರ ದುಡ್ಡು ಬೇಕಾಗಿಲ್ಲ, ಮಾಧವಾ. ಎಷ್ಟಾದರೂ ರಾಧಕ್ಕ ನನಗೆ ಒಡಹುಟ್ಟಿದವಳು. ನನಗೇನೂ ಆಕೆ ಭಾರವಾಗಬೇಕಾಗಿಲ್ಲ...."

"ಅದೆಲ್ಲ ಯೋಚನೆ ಯಾತಕ್ಕೆ, ಭೀಮಣ್ಣ? ಎಂದೋ, ಏನೋ ಆಗಿ ಹೋಯಿತು...."

"ಹಾಗೆ ಹೇಗಾದೀತು, ಮಾಧೂ?....ನಿನಗೆ, ನಿನ್ನ ತಾಯಿಗೆ ಸಲ್ಲಬೇಕಾದದ್ದು ಬೇಕಾದಷ್ಟಿರುವಾಗ ಕಳ್ಳರಂತೆ ಅವರ ಮನೆಯಿಂದ ಹೊರಬಿದ್ದು ನಿರ್ಗತಿಕರಂತೆ ಬದುಕಿರಬೇಕೆ....?"

"ಹಾಗಾದರೆ ಏನು ಮಾಡಬೇಕು ಅನ್ನುತ್ತೀ ?"

"ನನ್ನ ಮಾತು ನೀನು ಕೇಳುವುದಾದರೆ ಹೇಳುತ್ತೇನೆ. ನೇರವಾಗಿ ನಿನ್ನ ಪಾಲಿಗೆ ಬರಬೇಕಾದುದನ್ನು ಬೇಡಬೇಕು."

"ಈಗ ಆದಷ್ಟು ಅವಮಾನ ಸಾಕಲ್ಲವೆ ?"

"ಅವರು ಅವಮಾನ ಮಾಡುತ್ತಾರೆಂದು ನಮ್ಮ ಕಾಲಮೇಲೆ ನಾವೇ ಕಲ್ಲುಹಾಕಿಕೊಳ್ಳಬೇಕೆ ? ಬರಬೇಕಾದದ್ದು ಬೇಕಾದಷ್ಟಿರುವಾಗ ಬಡವರಾಗಿ ಬಾಳಬೇಕೆ ?"

"ನೀನೆನ್ನುವುದು ಸರಿ, ಒಂದು ದೃಷ್ಟಿಯಿಂದ. ಆದರೆ ಏನಾದರೂ ಆ ಪಾಪದ ದುಡ್ಡಿಗೆ ಬಾಯಿಬಿಡಬೇಕೆನ್ನಿಸುವುದಿಲ್ಲ, ನನಗೆ !"

"ಸುಮ್ಮನೆ ಏನಾದರೊಂದು ತಲೆಯೊಳಗೆ ತುಂಬಿಕೊಂಡಿದ್ದೀಯ. ಅದೆಲ್ಲ ವ್ಯವಹಾರವೂ ಅಲ್ಲ. ವಿವೇಕವೂ ಅಲ್ಲ."

"ನನಗಂತೂ ಒಪ್ಪಿಗೆಯಿಲ್ಲ, ಭೀಮಣ್ಣಾ. ಕೈಬಿಟ್ಟುಹೋದದ್ದು ಪೀಡೆ ಕಳೆಯಿತು ಅನ್ನುತ್ತೇನೆ."

"ಹಾಗಾದರೆ ರಾಧಕ್ಕನ ಬಗ್ಗೆ ಏನಾದರೂ ಯೋಚಿಸಿದ್ದೀಯಾ ?"

"ಯೋಚನೆ ಏನು ? ಇಂದಲ್ಲ ನಾಳೆ ಎಲ್ಲಿಯಾದರೂ ಕೆಲಸ ಹಿಡಿದು ಕೊಂಡರೆ ಆಗುವುದಿಲ್ಲವೆ ?"

"ಎಂಥ ದಿನಮಾನ ? ಏನು ಕೆಲಸ ? ಹುಚ್ಚು ಹಿಡಿದಿದೆ ನಿನಗೆ. ಆಕೆಗೆ ಹೇಳಿದ್ದೀಯಾ ಇದನ್ನೆಲ್ಲ ?"

"ಎಲ್ಲ ಹೇಳಿದ್ದೇನೆ. ಆದರೇನು, ನಿಮ್ಮೆಲ್ಲರ ಯೋಚನೆಯೇ ಒಂದು, ನಾನೊಬ್ಬನೇ ಬೇರೆ."

"ಹಾಂ. ನಾನು ಹೇಳುವುದೂ ಅದೇ. ಇಷ್ಟು ಜನ ತಪ್ಪು, ನೀನೇ ಸರಿ ಎನ್ನುತ್ತೀಯಾ ?"

"ಸರಿಯೋ, ತಪ್ಪೋ. ಅದೆಲ್ಲ ನನಗೆ ಬೇಡವಾಗಿದೆ, ಅಷ್ಟೆ."

"ನಿನಗೆ ಬೇಡವಾಗಿದ್ದರೆ ಬಿಡು. ರಾಧಕ್ಕನ ಸಲುವಾಗಿಯಾದರೂ ನೀನು ನನ್ನ ಮಾತಿಗೆ ಒಪ್ಪಬೇಕು."

"ಆಕೆಗಾದರೂ ಏನು ಸುಖ ಅದರಲ್ಲಿ ?"

"ಆಕೆಯ ಸುಖದುಃಖ ನಿನಗೇನು ಗೊತ್ತು? ಆಕೆ ಅನುಭವಿಸಿದ್ದು ನಿನಗೆ ತಿಳಿದಿದ್ದರೆ ಇಷ್ಟು ಮಾತಿಗೆ ನೀನು ಬರುತ್ತಿದ್ದಿಲ್ಲ...."

ಕೊನೆಯ ಮಾತು ಮಾಧವನ ಹೃದಯವನ್ನು ಗಾಸಿಮಾಡಿತ್ತು. ತಂದೆ ಬದುಕಿದ್ದಾಗ, ಅವರ ಮರಣದನಂತರದಲ್ಲಿ ರಾಧಕ್ಕ ಅನುಭವಿಸಿದ ಕರುಣ ಕತೆಯನ್ನು ಭೀಮಣ್ಣ ವಿವರಿಸಿದಾಗ ಇಬ್ಬರೂ ಕಣ್ಣೀರು ಹಾಕಿದ್ದರು. ಕೊನೆಯಲ್ಲಿ ಆಕೆಗಾಗಿಯೆಂದು ಭೀಮಣ್ಣನ ಮಾತಿಗೆ ಮಾಧವ ಒಪ್ಪಬೇಕಾಗಿ ಬಂದಿತು. ಆದರೆ ತನಗಾಗಿ ಯಾವ ಮಾತಿನಲ್ಲಿಯೂ ಸೇರಿಕೊಳ್ಳಲಾರೆನೆಂದೂ, ಯಾವ ಕೆಸಲವನ್ನು ನಡೆಸಬೇಕಾದರೂ ಭೀಮಣ್ಣನೇ ಮುಂದಾಗಿ ನಡೆಯಿಸ ಬೇಕೆಂದೂ ಕಟ್ಟುಹಾಕಿದ್ದ. ಆಗ ಭೀಮಣ್ಣನೆಂದಿದ್ದ: "ಆಯಿತು, ಇಂದಿನ ವರೆಗೆ ಕೆಟ್ಟತನ ಕಟ್ಟಿಕೊಂಡಿದ್ದೇನೆ, ಈಗಲಾದರೂ ಹೇಗೆ ಬಿಟ್ಟೇತು? ನನಗೆ ಬರುವ ಹೆಸರು ಬರಲಿ. ಬಂದೇ ಇದೆ. ನಿನ್ನ ತಾಯಿಯಾದರೂ ನೆಮ್ಮದಿ ಯಾಗಿದ್ದರೆ ಆಯಿತು" ಎಂದು.

ಇನ್ನು ಒಂದೆರಡು ದಿವಸಗಳಲ್ಲಿಯೇ ಮಾಧವ ಪರೀಕ್ಷೆಗೆಂದು ಹೊರಡುವ ಸಿದ್ಧತೆಯಲ್ಲಿದ್ದ. ಇತ್ತೀಚೆ ಹಗಲುರಾತ್ರಿ ಓದನ್ನು ಸಾಗಿಸುತ್ತಿದ್ದುದರಿಂದ ಸಾಯಂಕಾಲ ಎಲ್ಲಾದರೂ ಅಡ್ಡಾಡಿಕೊಂಡು ಬರುತ್ತಿದ್ದ. ಆದರೆ ಇಂದು ಭೀಮಣ್ಣನ ಜತೆಯಲ್ಲಿ ಊರ ಸಮೀಪದ ಹೊಲದವರೆಗೆ ಹೋಗಿಬರುವು ದೆಂದು ನಡೆದಿದ್ದ. ಓದು ಬೇಸರವಾಗಿ, ಎಂದೊಮ್ಮೆ ಈ ಪರೀಕ್ಷೆಯೊಂದು ಬಗೆಹರಿದೀತೆಂದುಕೊಳ್ಳುತ್ತಿದ್ದ. ಅಲ್ಲದೆ ಕಳೆದ ಎರಡು ಮೂರು ವಾರಗಳಲ್ಲಿ ಆಕಸ್ಮಿಕವಾಗಿ ನಡೆದ ಸ್ಥಿತ್ಯಂತರಗಳನ್ನು ನೆನೆದಾಗ 'ಮನುಷ್ಯನ ಎಣಿಕೆ ಎಲ್ಲಿಗೆ ನಿಲುಕೀತು ? ಯಾವ ನಿಯಮಕ್ಕೆ ಸರಿಯಾಗಿಯೊ—ಪ್ರಪಂಚದ ಸ್ಥಿತಿಗತಿಗಳನ್ನು ಸ್ವೇಚ್ಛೆಯಾಗಿ ನಿರ್ದೇಶಿಸಬಲ್ಲ ಯಾವ ಶಕ್ತಿಗೆ ಒಳ ಗಾಗಿಯೊ—ಮನುಷ್ಯನ ಹಿಂದು ಮುಂದುಗಳೆಲ್ಲವೂ ರೂಪುಗೊಳ್ಳುತ್ತಿವೆ. ಯಾರು ಹೇಳಬೇಕು ?" ಎಂಬಂಥ ಬೆರಗು, ಯೋಚನೆ, ಅಸಹಾಯತೆಯ ಮನಃಸ್ಥಿತಿಯಲ್ಲಿ ಸಿಲುಕಿಬೀಳುತ್ತಿದ್ದ. ಇಂದು ಸಾಯಂಕಾಲವೂ ಹಾಗೆಯೆ. ಅದಕ್ಕೂ ಹೆಚ್ಚಾಗಿ ತಾನಿಲ್ಲಿಯವರೆಗೆ ಬರುವಂತೆ ಮಾಡಿದ ಕಕ್ಕನ ಮಾತು ರೀತಿಗಳು ವಿಶೇಷವಾಗಿ ಅವನನ್ನು ಕೆಣಕುತ್ತಿದ್ದವು. ನಡೆದದ್ದು ಹೇಗೋ ನಡೆದುಹೋಯಿತು, ಎನ್ನುವುದಕ್ಕಿಂತ ಹೆಚ್ಚಾಗಿ, ನಡೆದದ್ದು ಹೀಗೆಯೇ ಯಾತಕ್ಕಾಗಿ ನಡೆದಿರಬೇಕು ಎಂಬ ಯೋಚನೆ ಇತ್ತೀಚೆಗೆ ಮಾಧವನಿಗೆ ಪರಿಪಾಠವಾದ ಹಾಗಿತ್ತು. ತನ್ನ ವಿಚಾರಗಳಲ್ಲಿಯೇ ಮಗ್ನನಾಗಿ ಯಂತ್ರ ದಂತೆ ತನ್ನೊಡನೆ ಹೆಜ್ಜೆಹಾಕುತ್ತಿದ್ದ ಮಾಧವನನ್ನು ನೋಡಿ ಭೀಮಣ್ಣ ಕೇಳಿದ :

"ಏನು ಮಾಧವಾ, ತುಂಬ ಯೋಚನೆಯಲ್ಲಿದ್ದ ಹಾಗಿದೆಯಲ್ಲ ?"

"ಯೋಚನೆಯಿಲ್ಲ, ಏನು ಮಣ್ಣೂ ಇಲ್ಲ. ಓದಿ ಓದಿ ಬೇಸರವಾಗಿಬಿಟ್ಟಿದೆ."

"ಹುಂ....ಅಂತೂ ಪರೀಕ್ಷೆ ಬಂದೇಬಿಟ್ಟಿತಲ್ಲ ?"

"ಮುಗಿದು ಹೋದರೆ ಸಾಕಾಗಿದೆ, ನನಗಂತೂ...."

"ಇನ್ನು ನಾಲ್ಕೆಂಟು ದಿನ ನಿನಗೆ ಓದಲಿಕ್ಕೆ ಸಿಕ್ಕಿದ್ದರೆ ಒಳ್ಳೆಯದಿತ್ತಲ್ಲವೆ? ಆಯತ್ತವೇಳೆಗೆ ನಿನಗೆ ತುಂಬ ತೊಂದರೆಯಾಯಿತು. ಆಚೆ ಈಚೆ ಓಡಾಟ. ಅದಕ್ಕಿಂತ ಹೆಚ್ಚಾಗಿ ಈ ಎಲ್ಲ ಮನಸ್ತಾಪ...."

"ಅಂಥದೇನೂ ಇಲ್ಲ, ಭೀಮಣ್ಣ. ಓದು ಸುಮಾರಾಗಿ ಆಗಿದೆ. ನೀನು ಹೇಳಿದ ಹಾಗೆ ಈ ಮನಸ್ತಾಪ ಮಾತ್ರ...."ಎಂದು ಅರ್ಧಕ್ಕೆಯೇ ತಡೆದ.

"ನಾನು ಹೇಳಲಿಲ್ಲವೆ ನಿನಗೆ ? ಅದನ್ನೆಲ್ಲ ಕಟ್ಟಿಕೊಂಡು ಸುಮ್ಮನೆ

ಸಣ್ಣಾಗಬೇಡ ಎಂದು. ಎಲ್ಲವೂ ಆಗುವ ಹಾಗೆ ಆಗಿಯೇ ಆಗುತ್ತದೆ, ಹೋಗುತ್ತದೆ. ಬಹಳ ಯೋಚನೆ ಮಾಡಿಯೇ ಮನುಷ್ಯ ಕೆಡುವುದು. ಅಲ್ಲದೆ ನಾವು ಮಾಡಿದ ಯೋಚನೆ ಎಲ್ಲಿಗೆ ಸಿಲುಕಬೇಕು ?"

"ಎಷ್ಟೋ ಸಲ ನಾನೂ ಹಾಗೆಯೇ ಅಂದುಕೊಳ್ಳುತ್ತೇನೆ. ಆದರೆ...."

"ಆದರೆ ! ಏನು?"

"ಕಕ್ಕನ ಮನೆಯನ್ನು ಬಿಟ್ಟು ಹೊರಡುವುದರಲ್ಲಿ ನನಗೆ ಯಾವ ದುಃಖವೂ ಇಲ್ಲ. ಆದರೆ ಅವರು ನನ್ನ ಮೇಲೆ ಹೊರಿಸಿದ ಆಪಾದನೆ...."

"ಮಾಡಿದವರ ಪಾಪ ಆಡಿದವರ ಬಾಯಲ್ಲಿ ಎಂದು ಹೇಳುತ್ತಾರೆ. ಇದರಲ್ಲಿ ಯಂತೂ ನೀನು ಯಾವುದನ್ನೂ ಮಾಡಿಲ್ಲ, ಎಂದ ಮೇಲೆ...."

"ಅದರದೂ ನನಗೇನಿಲ್ಲ, ಭೀಮಣ್ಣಾ. ನನಗೆ ಅವರು ಏನು ಅಂದಿದ್ದರೂ ಆದೀತು. ಆದರೆ ಮಾತುಮಾತಿಗೆ ತಂದೆಯ ಹೆಸರೆತ್ತಿ ಮೂದಲಿಸಿದರು. ಮನೆತನದ ಮಾನ ಅವರು ಕಳೆದಂತೆಯೇ ನಾನು ಅಂತೆ. ಆ ಮಾತು ನೋಡು—ನನ್ನನ್ನು ಕೆಣಕಿ ಕಾಡುತ್ತಿದ್ದದ್ದು...."

"ಅವರ ಬಾಯಿಗೆ ಯಾವ ಹಿಡಿತವೂ ಇಲ್ಲ. ಇದೇನು ನಿನಗೆ ಗೊತ್ತಿಲ್ಲದ್ದೆ?"

"ಅದು ಗೊತ್ತಿದೆ ಎಂದೇ ಎಷ್ಟೋ ಸಮಾಧಾನ ತಂದುಕೊಂಡಿದ್ದೇನೆ. ಆದರೆ ಆ ಮಾತು ಕೇಳಿದಾಗಿನಿಂದ ಒಂದು ವಿಷಯ ತಿಳಿಯಬೇಕು ಎಂದೆನ್ನಿಸುತ್ತಿದೆ...."

"ಯಾವ ವಿಷಯ ?"

"ನನ್ನ ಮೇಲೆ ಮಾಡಿದ ಆಪಾದನೆ ನಿನಗೆ ಗೊತ್ತಿದೆ. ಅದು ನನ್ನ ತಂದೆಯ ಗುಣ ಎಂದು ಹೇಳಿದರು. ನಿಜವೆ ಇದು ?"

ಭೀಮಣ್ಣ ಮಾತನಾಡಲಿಲ್ಲ. ಮಾಧವ ಆತನ ಮುಖವನ್ನೆ ನೋಡುತ್ತಿದ್ದ. ಆ ಪ್ರಶ್ನೆಗೆ ಉತ್ತರ ಹೇಳುವುದು ಭೀಮಣ್ಣನಿಗೆ ಬೇಡವಾಗಿದೆ ಎಂಬುದು ಆವನ ಮುಖದ ಮೇಲಿಂದಲೇ ತಿಳಿಯುವಂತಿತ್ತು. ಆದರೆ ದೇವನೂರಿಗೆ ಬಂದಂದಿನಿಂದ ಬೆಳೆಯುತ್ತಿದ್ದ ಮಾಧವನ ಕುತೂಹಲ ಈ ಮೌನದಿಂದ ಹಿಂತೆಗೆಯುವಂತಿರಲಿಲ್ಲ. ಅಂತೆಯೇ ನೇರವಾಗಿ ಕೇಳಿದ :

"ತಂದೆಯ ಲೆಕ್ಕಕ್ಕೆ ಆ ಪಾಪವೂ ಸೇರಿದೆಯೆ ?" ಎಂದು.

"ಅದೆಲ್ಲ ಮುಗಿದುಹೋಗಿದೆಯಲ್ಲ. ಅದನ್ನೆಲ್ಲ ಕಟ್ಟಿಕೊಂಡು ಏನು ಮಾಡುತ್ತೀ ಈಗ ?"

"ಮುಗಿದುಹೋಗಿಲ್ಲ, ಭೀಮಣ್ಣಾ. ಅದೇ ತೊಂದರೆ. ಮುಗಿದುಹೋಗಿ

ದ್ದರೆ ಈ ಮಾತು ಬರುತ್ತಿರಲಿಲ್ಲ...." ಮಾಧವನ ದನಿ ಎದೆಯ ಸಂಕಟಕ್ಕಾಗಿ ಬಿರುಸಾಗಿತ್ತು.

"ಅವರೊಬ್ಬರು ಆ ಮಾತನ್ನು ಹೇಳಿದರೆ ನಿನಗೇನಾಗಬೇಕು ?"

"ಏನಾಗಬೇಕೆ ? ಏನಾಗಲಾರದು ? ಅವರ ಇಂದಿನ ಮಾತು ನಾಳೆ ಲೋಕದ ಮಾತು. ಹಾಗಾದಲೆ, ನಾನು ಏನು ಮಾಡಿದರೇನು ?"

"ನಿನಗೆ ಮಾಡಬೇಕಾದದ್ದಾದರೂ ಏನು ?"

"ಮಕ್ಕಳನ್ನು ಹಡೆದವರೆ ಪಿತೃಗಳ ಋಣ ತೀರಿದಂತೆ ಎಂದು ಹೇಳುತ್ತಾರೆ ಅಲ್ಲವೆ ? ಆದರೆ ಆ ಋಣ ನನಗೆ ಬೇಕಿಲ್ಲ. ನನಗೆ ನನ್ನ ತಂದೆಯ ಪಾಪದ ಋಣ ಎಷ್ಟು ತಿಳಿಯಬೇಕಾಗಿದೆ. ಎಷ್ಟು ಪಾಪಗಳಿಗಾಗಿ ನಾನು ಪ್ರಾಯಶ್ಚಿತ್ತ ಪಡೆಯಬೇಕು. ಇದಾದರೂ ನನಗೆ ತಿಳಿಯಬೇಡವೆ ?"

"ಅವರವರ ಪಾಪ ಅವರವರ ಬೆನ್ನ ಹಿಂದೆ...."

"ನಿಜವಾಗಿ ಹಾಗಿದ್ದರೆ, ಪ್ರಪಂಚದ ಕಷ್ಟ ಸಾವಿರ ಪಾಲು ಕಡಿಮೆಯಾಗಿರುತ್ತಿದ್ದವು !"

"ನೀನು ಸುಮ್ಮನೆ ಮನಸ್ತಾಪ ಮಾಡಿಕೊಳ್ಳುತ್ತೀ ನೋಡು,ಮಾಧವಾ."

"ನನಗೆ ನಿಜವಿದ್ದುದನ್ನು ತಿಳಿಯಬೇಕಾಗಿದೆ—ತಿಳಿದು ಅದರಿಂದ ದೂರ ಇರಬೇಕಾಗಿದೆ."

ಒಂದೆರಡು ನಿಮಿಷ ತಡೆದು ಭೀಮಣ್ಣ ಹೇಳಿದ : "ನಿನಗೆ ತಿಳಿದು ಏನೂ ಪ್ರಯೋಜನವಿಲ್ಲ. ಒಂದೇ ಮಾತಿನಲ್ಲಿ ಹೇಳುವೆ. ನಿನ್ನ ತಂದೆಯ ಪಾಪಗಳ ಪ್ರಾಯಶ್ಚಿತ್ತಕ್ಕೆ ನಿನ್ನ ಒಂದು ಜನ್ಮವೂ ಸಾಲುವುದಿಲ್ಲ....!" ಎಂದು ತಡೆದು ಮುಂದುವರಿದ "ಏನೋ,ಆಗಿನ ಕಾಲದಲ್ಲಿ ತಿಳಿಯಲಿಲ್ಲ. ಮನೆತನ ದೊಡ್ಡದು ಎಂಬ ಮಾತಿಗೆ ಮೋಸಹೋದ ಹಾಗಾಯಿತು" ಎಂದು ಸುಮ್ಮನಾದ.

ನಿಧಾನವಾಗಿ ಇಬ್ಬರೂ ಹೆಜ್ಜೆ ಹಾಕುತ್ತಿದ್ದರು. ಇಬ್ಬರಿಗೂ ಮಾತು ಬೇಡವೆನಿಸಿದಂತಿತ್ತು. ಸಂಜೆಯ ಹೊಂಬೆಳಕು ಸುತ್ತಲಿನ ಸೃಷ್ಟಿಯನ್ನು ಆವರಿಸಿ ನಿಂತಿತ್ತು. ಆದರೆ ಮಾಧವನಿಗೆ ಅದರಲ್ಲಿ ಯಾವ ಸೌಂದರ್ಯವೂ ಕಾಣಲಿಲ್ಲ. ಅದಕ್ಕೆ ಪ್ರತಿಯಾಗಿ ಆ ಬೆಳಕು ಜ್ವರವೇರಿ ಸಂಕಟಪಡುತ್ತಿರುವ ಹಸುಗೂಸಿನ ಕೆಂಪೇರಿದ ಕೆನ್ನೆಗಳ ಬಣ್ಣದ ಹಾಗೆ ಭಾಸವಾಯಿತು. ಹತ್ತು ನಿಮಿಷಗಳ ದಾರಿ ಸರಿಯುತ್ತಲೆ ಭೀಮಣ್ಣ ತಟ್ಟನೆ ತಡೆದು, ವಿಷಣ್ಣನಾಗಿ ಹೇಳಿದ :

"ಹಳ್ಳದ ಆಚೆಯ ಬದಿಯಲ್ಲಿ ಆ ದೊಡ್ಡ ಕಬ್ಬಿನ ತೋಟ ಕಾಣುತ್ತಿದೆ.

ಅಲ್ಲವೆ ? ನೀನು ಆಗಲೆ ಕೇಳಿದ ಪ್ರಶ್ನೆಗೆ ಆ ಹಚ್ಚಗಿನ ತೋಟವೇ ಉತ್ತರ !"

ಹಚ್ಚಗಾಗಿ ಮೆರೆಯುತ್ತಿದ್ದ ತೋಟವನ್ನು ನೋಡಿ ಮಾಧವನೆಂದ :

"ನಮ್ಮದೇ ಆ ತೋಟ ?"

"ನಮ್ಮದಾಗಿತ್ತು ಒಂದು ಕಾಲಕ್ಕೆ....ಆಯಿತು, ಇಂದಿಲ್ಲ ನಾಳೆ ನಮ್ಮ ದಾಗಬಹುದು, ಅನ್ನು."

"ಅಂದರೆ ?"

"ನೇಕಾರ ವಿಠ್ಠಪ್ಪನ ತೋಟ ಅದು. ನಾನೇ ಕೊಡಿಸಿದ್ದೆ ನಿನ್ನ ತಂದೆಗೆ ಅದನ್ನು ಒಂದೆರಡು ವರ್ಷ ಮನೆಯಿಂದ ಸಾಗುಮಾಡಿ ನಾಲ್ಕುಪಟ್ಟು ಬೆಳೆ ಬರುವ ಹಾಗೆ ಮಾಡಿದ್ದೆ. ಆದರೇನು ? ಯಾರಿಗಾಗಿಯೋ ಮಾಡಿದ ಹಾಗಾಯಿತು."

"ಯಾಕೆ ? ತಂದೆಯುವರು ಮಾರಿಬಿಟ್ಟರೆ ?"

"ಮಾರಿದ್ದರೆ ಒಳ್ಳೆ ಬೆಲೆಯಾದರೂ ಬರುತ್ತಿತ್ತು. ಈಗಲಂತೂ ಅದರ ಬೆಲೆ ಹತ್ತುಪಾಲು ಬರುತ್ತಿತ್ತು. ಆದರೆ ನಿಮ್ಮಪ್ಪನಿಗೆ ಬುದ್ಧಿ ಹೇಳುವವರು ಯಾರು ? ನಮ್ಮ ಮನೆಯ ಹಿಂದುಗಡೆಯ ಬಸಪ್ಪನೇ ಈಗ ಲಾವಣಿ ಹಿಡಿದಿದ್ದಾನೆ, ಎಂಟುನೂರಕ್ಕೆ. ವ್ಯರ್ಥವಾಗಿ ಕೊಟ್ಟುಬಿಟ್ಟ...."

"ಯಾರಿಗೆ ?"

"ಅದಕ್ಕೇ ಹೇಳಿದೆ—ನಿನ್ನ ಪ್ರಶ್ನೆಗೆ ಆ ತೋಟ ಉತ್ತರ ಎಂದು !"

ಮಾಧವ ಸುಮ್ಮನಾದ. ಹೆಜ್ಜೆಹೆಜ್ಜೆಗೂ ತನ್ನ ಬದುಕಿನಲ್ಲಿ ತಂದೆಯ ಪಾಪ ಹೇಗೆ ಮೂರ್ತಿಮತ್ತಾಗಿ ಕಾಣಿಸಿಕೊಳ್ಳುತ್ತಿದೆ ಎಂದು ಆಶ್ಚರ್ಯ– ಸಂಕಟಪಟ್ಟ. ಭೀಮಣ್ಣನೇ ಮುಂದುವರಿದ :

"ಹೀಗೆ ಸಲೀಲವಾಗಿ ಇಂಥ ಉತ್ತಮ ತೋಟವನ್ನು ಕೊಟ್ಟುಬಿಡಲು ಮನಸ್ಸಾದರೂ ಹೇಗಾಯಿತೊ ಮಹರಾಯನಿಗೆ! ಆಯಿತು, ಹೆಣ್ಣಿನ ಮೋಹ ಎಂದಮೇಲೆ...."

"ಯಾರವರು ಅದನ್ನು ಪಡೆದವರು ?"

"ಯಾವಳೋ, ಎಲ್ಲಿಯವಳೊ. ಹತ್ತುಹನ್ನೆರಡು ವರ್ಷ ಕೈಬೆರಳಮೇಲೆ ಆತನನ್ನು ಕುಣಿಸಿದಳು. ಇಷ್ಟಾದರೂ ಒಂದು ಒಳ್ಳೆಯ ಕೆಲಸ ಮಾಡಿದ ನೆಂದೇ ಹೇಳಬೇಕು. ಆಕೆಗೆ ಕೊಟ್ಟದ್ದು ಆಕೆಯ ಜೀವಮಾನದವರೆಗೆ ಮಾತ್ರ ಕೊಟ್ಟಿದ್ದಾನೆ. ಆಕೆಯನಂತರ ಅದು ತಿರುಗಿಬರಬೇಕು.ಅಷ್ಟೇ ಆಸೆ."

"ಬಂದರೂ ಅಷ್ಟೇ, ಬರದಿದ್ದರೂ ಅಷ್ಟೇ. ಯಾರಿಗೆ ಬೇಕಾಗಿದೆ ?

ಹೋದರೆ ಮನೆತನದ ಒಂದು ಕಲಂಕ ಕಳೆದಹಾಗಾಯಿತು."

ಭೀಮಣ್ಣ ಸುಮ್ಮನಾದ. ಸುಮ್ಮನೆ ಈಗ ಯಾತಕ್ಕೆ ಚರ್ಚೆ ಎಂದು. ಮಾಧವ ಒಂದೆರಡು ಸಲ ಹಚ್ಚಹಸಿರು ಮುರಿಯುವ ಕಬ್ಬಿನ ಆ ಪೈರನ್ನು ನೋಡಿದ. ಆದರೆ ಆತನ ವಿಚಾರದೃಷ್ಟಿ ಅಲ್ಲಿ ಸೃಷ್ಟಿಯ ಹೃದ್ಯಸೌಂದರ್ಯವನ್ನು ತೋರಿಸಲಿಲ್ಲ. ಅದಕ್ಕೆ ಬದಲಾಗಿ ತನ್ನ ತಾಯಿಯ ಸೌಖ್ಯವನ್ನು, ಮನೆತನದ ನೆಮ್ಮದಿಯನ್ನು ಹಾಳುಮಾಡಿದ ಒಬ್ಬ ವೇಶ್ಯೆಯ ಕೃತಕ ಲಾವಣ್ಯವನ್ನು ತೋರಿಸಿತು.

ಕತ್ತಲಾದ ಮೇಲೆ ಇಬ್ಬರೂ ಹಿಂದಿರುಗಿದರು. ಹೊಲದಲ್ಲಿ ಭೀಮಣ್ಣ ರೈತನೊಡನೆ ಏನು ಮಾತನಾಡಿದನೊ—ಹಣದ ಕೊಡತಕೊಳ್ಳುವ ಬಗ್ಗೆ ಏನೋ ನಡೆದಂತಿತ್ತು—ಮಾಧವನಿಗೆ ಲಕ್ಷ್ಯವೇ ಇರಲಿಲ್ಲ. ಕತ್ತಲೆಯಲ್ಲಿ ಮಾಧವನ ಯೋಚನೆ ಬೆಳಕಿನೆಡೆಗೆ ಹರಿಯುತ್ತಿತ್ತು. ಸಾಧ್ಯವಾದಷ್ಟು ಬೇಗನೆ ಈ ಎಲ್ಲ ಪರಿಸರವನ್ನು ಬಿಟ್ಟು ದೂರ ಹೋಗಿಬಿಡಬೇಕೆಂದುಕೊಂಡ. ಅಂತೆಯೇ ಮನೆ ಸಮೀಪಿಸುತ್ತಿರುವಾಗ ಹೇಳಿದ :

"ನಾನು ನಾಳೆಗೇ ಹೊರಟುಬಿಡುತ್ತೇನೆ, ಭೀಮಣ್ಣಾ...."

"ನಾಡದ್ದು ಎನ್ನುತ್ತಿದ್ದೆಯಲ್ಲ ಮತ್ತೆ...."

"ಅಲ್ಲಿ ಹೋಗಿ, ಇರುವ ಏರ್ಪಾಡು ಏನಾದರೂ ಮಾಡಿಕೊಳ್ಳಬೇಡವೆ?"

"ಅಂದರೆ, ಕಕ್ಕನ ಮನೆಗೆ ಹೋಗುವುದಿಲ್ಲವೆ ?"

"ಸಾಧ್ಯವೇ ಇಲ್ಲ !"

"ನೋಡು, ಸುಮ್ಮನೆ ಯಾತಕ್ಕೆ ಇದ್ದ ಮನಸ್ತಾಪ ಬೆಳೆಯಿಸುತ್ತೀ ?"

"ಹಾಗಾದರೆ ಮತ್ತೆ ನನಗೆ ಅಲ್ಲಿಯೇ ಹೋಗು ಅನ್ನುತ್ತೀಯಾ ?"

"ಇಷ್ಟೆಲ್ಲ ಆದಮೇಲೆ ಅದೂ ಕಷ್ಟ ಅನ್ನು. ಆದರೆ...."

"ಆದರೆ ಇಲ್ಲ, ಏನೂ ಇಲ್ಲ. ಎಷ್ಟಾದರೂ ನಾಲ್ಕು ದಿವಸದ ಮಾತು. ಎಲ್ಲಿಯಾದರೂ ಗೆಳೆಯರ ಹತ್ತಿರ ಉಳಿದುಕೊಳ್ಳುತ್ತೇನೆ. ಅಂತೆಯೇ ಒಂದು ದಿನ ಮೊದಲಿಗೆಯೇ ಹೋದರೆ ಅನುಕೂಲ...." ಎಂದು ಮಾಧವ ಖಂಡಿತವಾಗಿ ಹೇಳಿಬಿಟ್ಟ.

ಮನೆಗೆ ಹೋದಮೇಲೆ ವಿಷಯ ಮತ್ತೆ ಚರ್ಚೆಯಾಯಿತು, ಆದರೆ ಮಾಧವ ಪರೀಕ್ಷೆಗಾಗಿ ಕಕ್ಕನ ಮನೆಯಲ್ಲಿ ಉಳಿದುಕೊಳ್ಳಲೇಬೇಕೆಂಬ ಅಭಿಪ್ರಾಯ ಯಾರಿಗೂ ಇರಲಿಲ್ಲ !

# 11

ಸರೋಜಿನಿ ಊರಿಗೆ ಬಂದ ಹತ್ತು ದಿನಗಳಲ್ಲಿ ಆಕೆಯ ಪರೀಕ್ಷೆಯ ಪರಿಣಾಮ ತಿಳಿಯಿತು. ಆಕೆಯ ನಿರ್ಧಾರಕ್ಕೆ ಪುಟವು ಕೊಟ್ಟಂತಾಯಿತು. ಆದರೆ ತಾಯಿಯ ದೇಹಸ್ಥಿತಿ ಮಾತ್ರ ದಿನದಿನಕ್ಕೆ ಕೆಡುತ್ತ ನಡೆದಿದೆಯೆಂಬುದೂ ಸರೋಜಿನಿಗೆ ತಿಳಿಯದಿರಲಿಲ್ಲ. ಆ ತಿಳಿವೇ ಆಕೆಯ ಯಶಸ್ಸಿನ ಉತ್ಸಾಹವನ್ನು ತಗ್ಗಿಸುತ್ತಿತ್ತಲ್ಲದೆ ಮುಂದೇನು ಎಂದು ದಾರಿಗಾಣದವಳನ್ನಾಗಿ ಮಾಡುತ್ತಿತ್ತು. ಸಾಲದ್ದಕ್ಕೆ ಕಳೆದ ಮೂರು ದಿನಗಳಲ್ಲಿ ಗೌಡನಿಂದ ಎರಡು ಕಾಗದ ಬಂದಿದ್ದವು. ಆ ಕಾಗದಗಳ ಬಗ್ಗೆ ಸರೋಜಿನಿಗೆ ವಿಚಿತ್ರವೆನಿಸಿದ್ದೆಂದರೆ ಆ ಎರಡೂ ಕಾಗದಗಳಲ್ಲಿ ತನ್ನ ಬಗ್ಗೆ ಏನನ್ನೂ ಬರೆದಿರಲಿಲ್ಲ. ತಾನಲ್ಲಿಂದ ಹೊರಡುವ ಮುನ್ನಾದಿನ ಸಾಯಂಕಾಲ ದುಡ್ಡಿಗಾಗಿ ಬರುತ್ತೇನೆಂದು ಹೇಳಿ ತಪ್ಪಿಸಿದ ವಿಷಯವನ್ನು ಸೂಚಿಸಿಯೂ ಇರಲಿಲ್ಲ. ತಾಯಿಯ ದೇಹಪರೀಕ್ಷೆಗಾಗಿ ಬರುವುದೇ ಇದ್ದರೆ ಕೂಡಲೆ ಬರಬೇಕೆಂದೂ, ಇಲ್ಲವಾದರೆ ತಾನು ಇನ್ನೇನೋ ಕೆಲಸಕ್ಕಾಗಿ ಮುಂಬಯಿಗೆ ಹೋಗತಕ್ಕವನಾದ್ದರಿಂದ ಮುಂದೆ ಎರಡು ಮೂರು ವಾರ ಊರಲ್ಲಿರುವುದಿಲ್ಲವೆಂದೂ ತಿಳಿಸಿದ್ದ. ಈ ಪತ್ರ ಬಂದನಂತರ ರಂಗಸಾನಿ ಹೊರಡುವ ಅವಸರ ಮಾಡತೊಡಗಿದ್ದಳು. ಆದರೆ ಒಂದಿಲ್ಲೊಂದು ನೆಪಹೂಡಿ ಹೊರಡುವುದನ್ನು ಸರೋಜಿನಿ ನಾಲ್ಕಾರು ದಿನ ಮುಂದೂಡಿದ್ದಳು. ತಾಯಿಯ ಜತೆಯಲ್ಲಿ ಧಾರವಾಡಕ್ಕೆ ಹೊರಡುವುದು ಆಕೆಗೆ ಬೇಡವಾದಷ್ಟು ಬೇಕೂ ಆಗಿತ್ತು. ಒಂದೆಡೆ ತಾನಾಗಿಯೇ ಹೋಗಿ ಗೌಡನ ದವಡೆಯಲ್ಲಿ ಸಿಕ್ಕಂತಾಗುವುದು ಎಂಬುದಕ್ಕಾಗಿ ಭೀತಿ, ಬೇಸರ. ಇನ್ನೊಂದೆಡೆ ಮಾಧವನನ್ನು ಕಾಣಲಾಗವುದೆಂದು ಕುತೂಹಲ, ಆತುರ. ಆತನನ್ನು ಕಂಡು ತನ್ನ ಬದುಕಿನ ಕೊನೆಯ ನಿರ್ಧಾರವನ್ನು ಮಾಡಿಬಿಡಬೇಕೆಂಬ ಬಯಕೆಯೇ ಕೊನೆಯಲ್ಲಿ ಗೌಡನ ಹೆದರಿಕೆಯನ್ನು ಮರೆಯಿಸಿ ಊರಿಗೆ ಹೊರಡುವಂತೆ ಮಾಡಿತ್ತು. ಈ ಎಲ್ಲ ಯೋಚನೆಗಳ ಮೂಲಕವೇ ತಾನು ಧಾರವಾಡಕ್ಕೆ ಮಾಧವನ ಪರೀಕ್ಷೆ ಮುಗಿಯುವ ಹೊತ್ತಿಗೆ ಹೋಗಲು ಅನುಕೂಲವಾಗಲೆಂದೇ ಹೊರಡುವ ದಿನವನ್ನು ಒಂದಿಲ್ಲೊಂದು ನೆಪದಿಂದ ಮುಂದೂಡುತ್ತಿದ್ದಳು.

ಕೊನೆಗೊಮ್ಮೆ ಸರೋಜಿನಿಯ ಇಂಗಿತದಂತೆಯೇ ಹೊರಡುವುದೆಂದು ಗೊತ್ತಾಯಿತು. ಇಂಥ ದಿನ, ಇಂಥ ರೈಲು ಎಂದು ಗೌಡನಿಗೆ ತಿಳಿಸಿಯೂ ಆಯಿತು. ನಿಲ್ದಾಣದ ಬಯಲುಬೆಳಕಿನಲ್ಲಿ ಸವೆದುಹೋದ ತಾಯಿಯನ್ನು

ನೋಡಿದಾಗ ಸರೋಜಿನಿಯ ಎದೆಗೆ ಬರೆ ಕೊಟ್ಟಂತಾಯಿತು. 'ಇಂಥ ತಾಯಿ ಇದ್ದರೇನು, ಇರದಿದ್ದರೇನು ?' ಎಂದುಕೊಳ್ಳುತ್ತಿದ್ದ ಸರೋಜಿನಿಗೆ ಆ ಮಾತಿನ ಇತ್ಯರ್ಥ—ದೂರದ ಪರಿಣಾಮ — ಆ ಕ್ಷಣಕ್ಕೆ ಕಣ್ಣೆದುರು ಸ್ಪಷ್ಟವಾಗಿ ನಿಂತಿರಬೇಕು. ಬಾಡಿಹೋದ ಗಿಡದಂತೆ, ಸವೆದು.ವಿವರ್ಣವಾಗಿ ಹೋದ ಈ ತಾಯಿ ಬಿದ್ದುಹೋದರೆ—ಮುಂದೆ ? ಸರೋಜಿನಿಯ ಮೈ ನಡುಗಿತು. ಗಾಳಿಗೆ ಸಿಕ್ಕ ತರಗೆಲೆಯಂತೆ ಯೋಚನೆ ಒದ್ದಾಡಿತು. 'ಬೇಡ.... ಏನಾದರೂ ಆಗಲಿ,ಏನಿದ್ದರೂ ಇರಲಿ.ಈ ತಾಯಿ ಬದಕಲಿ' ಎಂದು ದೇವರನ್ನು ಬೇಡಿಕೊಳ್ಳುವಂತಾದಳು. ಗಾಡಿಯನ್ನೇರುವಾಗ ರಂಗಸಾನಿಯ ದೇಹಸ್ಥಿತಿಯ ಅಸಹಾಯತೆ ಸ್ಪಷ್ಟವಾಗಿ ಕಂಡುಬರುತ್ತಿತ್ತು. ಇನ್ನೊಬ್ಬರ ಸಹಾಯವಿಲ್ಲದೆ ಆಕೆಗೆ ಏನನ್ನೂ ಮಾಡಲು ಸಾಧ್ಯವಾಗಿ ಕಾಣುತ್ತಿರಲಿಲ್ಲ.

ಧಾರವಾಡದ ನಿಲ್ದಾಣದಲ್ಲಿ ಗೌಡ ಹಾಜರಾಗಿದ್ದ. ಮಧ್ಯಾಹ್ನದ ಉರಿ ಬಿಸಿಲು ರಣಗುಡುತ್ತಿತ್ತು. ಆತ ಬಂದದ್ದು ಸರೋಜಿನಿಗಲ್ಲದಿದ್ದರೂ ರಂಗ ಸಾನಿಗೆ ಆಶ್ಚರ್ಯವನ್ನುಂಟು ಮಾಡಿತ್ತು. ಅರ್ಧ ಆಶ್ಚರ್ಯಕ್ಕಾಗಿ, ಅರ್ಧ ಉಪ ಚಾರಕ್ಕಾಗಿ ಕೇಳಿದಳು—ಗಾಡಿಯಿಂದಿಳಿದ ಮೇಲೆ. "ಸುಮ್ಮನೆ ನೀವೇತಕ್ಕೆ ಬರಬೇಕಾಗಿತ್ತು ಈ ಬಿಸಿಲಿನಲ್ಲಿ? ಆಳನ್ನು ಕಳುಹಿಸಿದ್ದರೂ ಆಗುತ್ತಿತ್ತು" ಎಂದು. ಗೌಡ ಸುಮ್ಮನಾಗಿಯೇ ಇದ್ದ. ಕೂಲಿಯವನು ಸಾಮಾನುಗಳನ್ನು ಎತ್ತಿಕೊಳ್ಳುತ್ತಿದ್ದುದರಿಂದ ಸರೋಜಿನಿಗೆ ನಾಲ್ಕು ಹೆಜ್ಜೆ ಹಿಂದುಳಿಯಬೇಕಾ ಯಿತು. ಗೌಡ ರಂಗಸಾನಿಯನ್ನು ಕೇಳಿದ :

"ನನ್ನ ಕಾಗದ ಮುಟ್ಟಲಿಲ್ಲವೆ ?"

"ಮುಟ್ಟಿದವು. ಆದರೆ ನಡುವೆ ಎರಡು ಮೂರು ದಿನ ನನಗೆ ಜ್ವರ...."

"ನಾನಾಗಲೇ ಊರಿಗೆ ಹೋಗಬೇಕಾಗಿತ್ತು...."

ರಂಗಸಾನಿಗೆ ಏನನ್ನೂ ಹೇಳಲಿಕ್ಕಾಗಲಿಲ್ಲ. ಕೊನೆಗೆ ತನ್ನ ತಪ್ಪನ್ನು ಸರೋಜಿನಿಯ ಮೇಲೆಯೇ ಹೊರಿಸಿದಳು. "ನಾನು ಎಷ್ಟು ಹೇಳಿದರೂ ಇಂದು ನಾಳೆ ಎಂದು ಆಕೆಯೇ ಮುಂದೆ ಹಾಕಿದಳು !"

"ಆಯಿತು! ಆಕೆಯ ಮಾತು ಕೇಳುತ್ತಲೇ ಇರು" ಎಂದ ಗೌಡ ಸಿಡುಕಿ ನಿಂದ.

"ಏನು ಮಾಡಲಿ, ಗೌಡರೆ ? ಆಕೆ ಹೊರಡದ ಹೊರತು ನಾನು ಬರುವ ಹಾಗಿರಲಿಲ್ಲ. ನೋಡುತ್ತೀರಲ್ಲ ನನ್ನ ಸ್ಥಿತಿ...."

"ಅದಕ್ಕೆ ನಾನೇನು ಮಾಡಲಿ ? ನೀವು ಬರುವುದಕ್ಕೆ ನಾನು ಯಾತ

ಕ್ಕಾಗಿ ಅವಸರ ಮಾಡುತ್ತಿದ್ದೆ ಎಂಬುದು ತಿಳಿದಿದ್ದರೆ...." ಎಂದ ತೊದಲುನುಡಿಯಲ್ಲಿ.

"ಈಗೇನಾಯಿತು ? ಕೊನೆಗಂತೂ ಬಂದೆನಲ್ಲ...." ರಂಗಸಾನಿ ಎಂದಳು, ಸೂಕ್ಷ್ಮವಾಗಿ ಗೌಡನ ಮೊಗವನ್ನೇ ನೋಡುತ್ತ. ಆದರೆ ಬೇಸರದಿಂದ ಗೌಡ ಹೇಳಿದ :

"ಈಗೇನು, ಬಂದರೂ ಅಷ್ಟೇ, ಬಾರದೆ ಇದ್ದರೂ ಅಷ್ಟೇ...."

"ಯಾಕೆ, ಏನಾಯಿತು?"

"ಆಗುವುದೇನು ಮಣ್ಣು ? ಮನೆಯವರು ಆಗಲೇ ಬಂದು ಮೂರು ದಿನವಾಯಿತು !"

ಸರೋಜಿನಿ ಹಿಂದುಗಡೆಯಿಂದ ಬಂದುದನ್ನು ನೋಡಿ ಗೌಡ ಮಾತು ಬದಲಾಯಿಸಿದ.

"ಹೋಗಲೇಬೇಕಾಗಿದೆ. ಇನ್ನು ಎರಡು ಮೂರು ದಿವಸಗಳಲ್ಲಿಯಾದರು ನಾನು ಹೊರಡಲೇಬೇಕು...."

"ಆಯಿತು, ಡಾಕ್ಟರರ ಭೆಟ್ಟಿಮಾಡಿಸಿದಮೇಲೆ ಕೆಲಸವಾದರೂ ಏನು ? ಅವರು ತಪಾಸುಮಾಡಿಯಾದ ಮೇಲೆ ನಮಗಾದರೂ ಇದ್ದು ಏನು ಮಾಡುವುದು ಅವರು ಹೇಳಿದ ಔಷಧ ಉಪಚಾರವನ್ನು ಊರಲ್ಲಿಯೇ ನಡೆಸಿದರಾಯಿತು" ಎಂದು ರಂಗಸಾನಿ.

ಸರೋಜಿನಿಗೆ ಈ ಯಾವ ಮಾತಿನ ಕಡೆಗೆ ಸ್ವಲ್ಪವೂ ಲಕ್ಷ್ಯ ಇರಲಿಲ್ಲ. 'ಮನೆಯವರು ಬಂದು ಮೂರು ದಿನವಾಯಿತು' ಎಂಬ ಮಾತು ಆಕೆಯ ಸಂಕಟವನ್ನೇ ದೂರಮಾಡಿತ್ತು. ಊರಿಗೆ ಹೊರಡುವುದೆಂದಾಗಿನಿಂದ ಆಕೆಯ ಹೃದಯವನ್ನು ಕೊರೆಯುತ್ತಿದ್ದ ಚಿಂತೆ ಆ ಕ್ಷಣಕ್ಕೆ ಇಲ್ಲದಾಗಿತ್ತು. ಸದ್ಯದ ಮಟ್ಟಿಗಂತೂ ಪಾರಾದ ಹಾಗಾಯಿತೆಂದುಕೊಂಡು ಗೌಡನನ್ನು ಗೆಲುವಿನಿಂದ ಮಾತನಾಡಿಸಿದರೂ ಆಯಿತು ಎಂದುಕೊಂಡಳು.

ಮನೆ ಮುಟ್ಟಿದ ಅರ್ಧಗಂಟೆಯಲ್ಲಿಯೇ ಸರೋಜಿನಿಗೆ ಒಂದು ವಿಷಯ ಸ್ಪಷ್ಟವಾಯಿತು. ಗೌಡ ತನ್ನ ಹೆಂಡತಿಗೆ ಹತ್ತಾರು ಸುಳ್ಳು ಹೇಳಿ, ತನ್ನ ಸ್ವಂತದ ಬಗೆಯಲ್ಲಿ ಆಕೆಗೆ ಯಾವ ತಪ್ಪುಕಲ್ಪನೆಯೂ ಆಗಲಾರದಂತೆ ಸರಿಯಾದ ವಾತಾವರಣ ನಿರ್ಮಿಸಿದ್ದ. ರಂಗಸಾನಿ ತನ್ನ ಹಳೆಯ ಪಕ್ಷಕಾರಳೆಂದೂ, ಆಕೆಗೆ ಊರಲ್ಲಿ ಇನ್ನೆಲ್ಲಿಯೂ ಆಶ್ರಯವಿಲ್ಲದ್ದರಿಂದ ನಾಲ್ಕಾರು ದಿನದ ಮಟ್ಟಿಗೆ ಇದ್ದುಕೊಂಡು, ಡಾಕ್ಟರರಿಂದ ಆಕೆಯ ಬೇನೆಯ ಪರೀಕ್ಷೆ

ಯಾದನಂತರ ತಿರುಗಿ ಹೋಗುವವಳೆಂದೂ ಹೇಳಿದ್ದನೆಂದು ತೋರಿತು. ಆದರೆ ತವಿಬ್ಬರನ್ನು ಗೌಡನ ಹೆಂಡತಿ ನೋಡಿದಾಗ ಆಕೆಗೆ ಬೇರೆ ಏನಾದ ರೊಂದು ಸಂಶಯ ಬಂದಿರಬೇಕೆಂದೂ ತೋರಿತು. ಏನಿದ್ದರೂ ಗೌಡನ ಹೆಂಡತಿ ಆಗ ಮರಳಿ ಬಂದು ಮನೆಯಲ್ಲಿದ್ದುದು ದೇವರ ಕೃಪೆ ಎಂದುಕೊಳ್ಳು ವಂತಾಗಿತ್ತು. ಹೀಗಾಗಿ ಮನೆ ಮುಟ್ಟಿದನಂತರ ಆಕೆಗೆ ತನ್ನ ಮತ್ತು ತನ್ನ ತಾಯಿಯ ಬಗೆಗಿಂತಲೂ ಮಾಧವನ ಬಗೆಯಲ್ಲಿಯೇ ಯೋಚನೆಗೆ ಪ್ರಾರಂಭ ವಾಯಿತು. ಆ ಯೋಚನೆಯಲ್ಲಿಯೇ ಎಂದಿಲ್ಲದ ಗೆಲುವಿನಿಂದ ಮಾತನಾಡು ತ್ತಿದ್ದಳು—ಗೌಡನ ಕೂಡ! ಆದರೆ ಈ ಮಾತಿನ ರೀತಿಯೇ ಗೌಡನ ಹೆಂಡತಿಯ ಸಂಶಯವನ್ನು ಕೆರಳಿಸುತ್ತಿತ್ತೆಂಬುದರ ಕಡೆಗೆ ಸರೋಜಿನಿಯ ಗಮನವೇ ಇರ ಲಿಲ್ಲ!

"ನಾನು ಆ ದಿನ ಸಾಯಂಕಾಲ ಬರಬೇಕೆಂದು ಎಷ್ಟು ಯತ್ನಮಾಡಿ ದರೂ ಕೊನೆಗೆ ಆಗಲೇ ಇಲ್ಲ."

"ನೀನು ಏನು ಬೇಕಾದ್ದನ್ನು ಹೇಳು. ನೀನು ಬರಲಿಕ್ಕಿಲ್ಲ ಎಂದು ಆಗಲೇ ಅನಿಸಿತ್ತು."

"ಅದೇಕೆ ? ಬಂದೇಬರುವೆ ಎಂದು ಹೇಳಿದ್ದಿಲ್ಲವೆ ?"

"ಹಾಗೆ ಹೇಳಿಯೂ ಬರಲಿಲ್ಲ ; ಅದೇ ಮುಖ್ಯ !"

"ಏನು ಮಾಡಿದರೂ ಗೆಳತಿಯರು ಬಿಡಲೇ ಇಲ್ಲ. ನಾನಾದರೂ ಏನು ಮಾಡಲಿ? " ಎಂದು ಸೋಗಿನ ಪರಿತಾಪದಿಂದ ಮುಖ ಸೊಟ್ಟಗಾಗಿ ಮಾಡಿದಳು ಸರೋಜಿನಿ.

"ಬಿಡಲಿಲ್ಲವಂತೆ. ಅವರೇನು ನಿನ್ನನ್ನು ಕಟ್ಟಿಹಾಕಿದರೆ ?"

"ಅದಕ್ಕೂ ಹೆಚ್ಚು. ಸಾಯಂಕಾಲ ಸಿನೇಮಾ ಎಂದು ಗೊತ್ತಾಗಿತ್ತು. ರಾತ್ರಿ ಫೀಸ್ಟು ಮರುದಿನ ಬೆಳಿಗ್ಗೆ ಎಲ್ಲರೂ ಕೂಡಿಯೇ ಹೊರಡುವುದಾಯಿತು."

"ಆಯಿತು—ನೀವೂ, ನಿಮ್ಮ ಸಿನೇಮಾ, ನಿಮ್ಮ ಫೀಸ್ಟು....ನಾವೇತಕ್ಕೆ ನೆನಪಾಗಬೇಕು ಈ ಎಲ್ಲ ಉತ್ಸಾಹದಲ್ಲಿ ?"

"ಆಗದೆ ಏನು ? ಅದನ್ನೆಲ್ಲ ಸಾಧ್ಯಪಡಿಸುವವರೇ ನೀವು ಎಂದ ಮೇಲೆ...." ಎಂದು ಬೇಕಂತಲೇ ಹೇಳಿ ಗೌಡನ ಮುಖವನ್ನೇ ನಸುನಕ್ಕು ನೋಡುತ್ತ ನಿಂತಿದ್ದಳು. ಗೌಡನ ಲಕ್ಷ್ಯ ಸರೋಜಿನಿಯ ಮಾತಿನಲ್ಲಿದ್ದಂತಿರ ಲಿಲ್ಲ. ವೈಯಾರ ಸೂಸುವ ಆಕೆಯ ಮುಖವನ್ನೇ ದಿಟ್ಟಿಸುತ್ತಿದ್ದ. ಸರೋಜಿನಿ ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತಿದ್ದಳು : 'ಊರಲ್ಲಿ ಮಾಧವನಿದ್ದಾನೆ.

ಆತನ ಭೆಟ್ಟಿಯಾಗುವುದೊಂದೇ ತಡ. ನಿನ್ನನ್ನು ನೀರು ಕುಡಿಸಲಿಕ್ಕೆಂದೇ ಈ ಎಲ್ಲ ಮೋಸದ ವ್ಯಾಪಾರ!' ಎಂದು.

ನಿಜವಾಗಿಯೂ ಸರೋಜಿನಿಗೆ ಊರಿಗೆ ಬಂದಿಳಿದಾಗಿನಿಂದಲೂ ಅದೊಂದೇ ಯೋಚನೆಯಾಗಿತ್ತು. ಮಾಧವನನ್ನು ಕಾಣುವುದು ಎಲ್ಲಿ? ಯಾವಾಗ? ಆಗಲೆ ಆತನ ಪರೀಕ್ಷೆ ನಡೆದಿರಬೇಕು. ಎಂದಮೇಲೆ ಸಾಯಂಕಾಲ ಸುಮಾರಿಗೆ ಕಾಲೇಜಿಗೆ ಹೋದರೆ ಆತ ಸಿಗಬಹುದು. ಆದರೆ ನಾಲ್ಕಾರು ಗೆಳೆಯರ ಮಧ್ಯದಲ್ಲಿರಬಹುದಾದ ಆತನನ್ನು ತಾನೊಬ್ಬಳೇ ಹೇಗೆ ಸಂಧಿಸಬಹುದು? ಆತನ ವಿಳಾಸ ತನ್ನ ಹತ್ತಿರವಿದ್ದುದರಿಂದ ಮನೆಗೂ ಹೋಗಬಹುದಾಗಿತ್ತು. ಆದರೆ ಮರುಕ್ಷಣದಲ್ಲಿ ಮನೆಗೆ ಹೋಗಿ ಕೇಳುವ ಧೈರ್ಯವಾಗಲಿಲ್ಲ. ಹೀಗೆಂದು, ಕೊನೆಗೆ ಹೇಗಾದರೂ ಆಗಲಿ, ಆತನನ್ನು ಕಾಲೇಜಿನಲ್ಲಿಯೇ ಸಂಧಿಸತಕ್ಕುದೆಂದು ಗೊತ್ತುಮಾಡಿಕೊಂಡು, ಆತ ಸಿಕ್ಕನಂತರದಲ್ಲಿಯ ಕನಸುಗಳನ್ನೇ ಕಾಣುತ್ತಿದ್ದಳು. ಮರುದಿನ ಮುಂಜಾನೆ ತಾಯಿಯನ್ನು ಆಸ್ಪತ್ರೆಗೆ ಕರೆದೊಯ್ಯುವುದೆಂದು ಗೊತ್ತಾಗಿತ್ತು. ಮೊದಲ ದಿನವೇ ಗೌಡ ಎಲ್ಲವನ್ನೂ ವಿಚಾರಿಸಿಕೊಂಡು ಬಂದವನಾದ್ದರಿಂದ ಯಾವ ತೊಂದರೆ ಇಲ್ಲದೆ ಕೆಲಸ ನಡೆಯಿತು. ಆದರೆ ಬೇನೆಯ ನಿದಾನಕ್ಕಾಗಿ ರಂಗಸಾನಿಯನ್ನು ಎರಡು ದಿವಸಗಳ ಮಟ್ಟಿಗೆ ಆಸ್ಪತ್ರೆಯಲ್ಲಿಯೇ ಇಡಬೇಕೆಂದು ಡಾಕ್ಟರರು ಹೇಳಿದಾಗ ಸರೋಜಿನಿಗೆ ಮತ್ತೆ ಯೋಚನೆಯಾಯಿತು. ಆದರೆ ಮನೆಯಲ್ಲಿಯ ಗೌಡನ ಹೆಂಡತಿಯನ್ನು ನೆನೆದು ಧೈರ್ಯ ತಂದುಕೊಂಡಳು.

ರೋಗಿಯ ಪೂರ್ವೇತಿಹಾಸವನ್ನೆಲ್ಲ ಕೇಳಿಕೊಂಡ ನಂತರ ಡಾಕ್ಟರರು ಗೌಡನನ್ನು ಕೇಳಿದರು :

"ಇವರು ನಿಮಗೇನಾಗಬೇಕು ?"

"ಏನೂ ಇಲ್ಲ; ಹೀಗೆಯೇ ಹಳೆಯ ಋಣಾನುಬಂಧ...." ಎಂದು ಗೌಡ ತಡವರಿಸಿದ್ದ.

"ಸಂಬಂಧಿಕರಲ್ಲವಷ್ಟೆ...." ಎಂದು ಡಾಕ್ಟರರು ಬೇರೊಂದು ದೃಷ್ಟಿಯಿಂದ ಕೇಳಿದ್ದರು.

"ಹುಂ....ಸಂಬಂಧಿಕರೇನು....? ಹುಂ....ಅಲ್ಲ."

ಡಾಕ್ಟರರು ಹತ್ತಿರವೇ ನಿಂತಿದ್ದ ಸರೋಜಿನಿಯನ್ನು ನೋಡಿ,

"ಇವರು ಯಾರು ?" ಎಂದಿದ್ದರು.

"ಇವರ ಮಗಳು...."

"ಓ! ಆಯ್ ಸಿ....ದ್ಯಾಟ್ಸ್ ಆಲ್‌ರಾಇಟ್...." ಎಂದು ಏನೋ ಮರ್ಮ ತಿಳಿದವರಂತೆ ನಕ್ಕು ಹೇಳಿದ್ದರು :

"ಒಂದೆರಡು ದಿವಸ ಇವರನ್ನು ಇಲ್ಲಿಯೇ ಅಬ್ಸರ್‌ವೇಶನ್‌ಗಾಗಿ ಇಡ ಬೇಕಾದೀತು....ಇಷ್ಟಾದರೂ, ಐ ಥಿಂಕ್ ಇಟ್ಸ್ ರಾದರ್ ಎ ಸೀರಿಯಸ್ ಕೇಸ್....ಅದಕ್ಕೆ ಕೇಳಿದೆ, ಇವರು ನಿಮಗೇನಾಗಬೇಕೂಂತ...."

"ಟ್ರೀಟ್‌ಮೆಂಟಿಗೂ ಅವರು ಇಲ್ಲಿಯೇ ಇರಬೇಕಾಗುತ್ತದೆಯೆ ?"

"ಡಾಯ್‌ಗ್ನೋಸ್ ಆದನಂತರಲ್ಲವೆ ಟ್ರೀಟ್‌ಮೆಂಟ್ ?"

"ಅಲ್ಲ, ಅಂದರೆ ಮುಂದಿನ ಅರೇಂಜ್‌ಮೆಂಟಿನ ಸಲುವಾಗಿ ಕೇಳಿದೆ."

"ಆಯ್ ಕಾಂಟ್ ಸೇ ಎನಿಥಿಂಗ್ ಜಸ್ಟ್ ನೌ....ಯು ಸೀ" (ನಾನು ಈಗಲೇ ಏನೂ ಹೇಳಲಾರೆ, ತಿಳಿಯಿತೆ?) ಎಂದು ಡಾಕ್ಟರರು ಹುಬ್ಬೇರಿಸಿ,

"ಈ ಹೊತ್ತು ನಾಳೆ ಎರಡು ದಿನ ಇವರು ಇಲ್ಲಿಯೇ ಇರಲಿ, ಇನ್-ಪೇಶಂಟ್ ಅಂತಾ....ಯು ಕ್ಯಾನ್ ಸೀ ಮಿ ಡೇ ಆಫ್ಟರ್‌ಟುಮಾರೊ ಇನ್ ದಿ ಮಾರ್ನಿಂಗ್. ನಾಡಿದ್ದು ಬೆಳಗ್ಗೆ ನೀವು ನನಗೆ ಭೆಟ್ಟಿಯಾಗಿರಿ, ಅಂ....?" ಎಂದು ಇನ್ನೊಬ್ಬ ರೋಗಿಯ ಕಡೆಗೆ ತಿರುಗಿದರು.

ದವಾಖಾನೆಯಿಂದ ಮನೆಗೆ ಹಿಂದಿರುಗುವಾಗ ಸರೋಜಿನಿಗೆ ಗೌಡನ ಜತೆಯಲ್ಲಿಯೇ ಟಾಂಗಾದಲ್ಲಿ ಬರಬೇಕಾಯಿತು. ಅಂಥ ಸಾನ್ನಿಧ್ಯಕ್ಕಾಗಿ ಹಾತೊರೆಯುತ್ತಿದ್ದ ಆತ ಏನೇನೋ ಕೆಲಸಗಳನ್ನು ನೆನೆದಂತೆ ಮಾಡಿ, ಆಚೆ ಈಚೆ ವಾಹನ ಹೋಗುವಂತೆ ಮಾಡಿ, ತನ್ನ 'ಸೌಖ್ಯ'ವನ್ನು ಸಾಧ್ಯವಿದ್ದಷ್ಟರ ಮಟ್ಟಿಗೆ ಸಾಧಿಸಲು ಯತ್ನಿಸಿದ. ವಿಮನಸ್ಕಳಾದ ಸರೋಜಿನಿ ನಿರುಪಾಯಳಾಗಿ ಗೌಡನ ಚೇಷ್ಟೆಗಳನ್ನು ಸಹಿಸಬೇಕಾಯಿತು.

ಅಂದು ಸಾಯಂಕಾಲ ತಾಯಿಗಾಗಿ ಆಸ್ಪತ್ರೆಗೆ ಎಷ್ಟೋ ಸಾಮಾನು ಗಳನ್ನು ಸಾಗಿಸಬೇಕಾದ್ದರಿಂದ ಸರೋಜಿನಿಗೆ ಇನ್ನೆಲ್ಲಿಯೂ ಹೋಗಲಾಗಲಿಲ್ಲ. ಅಲ್ಲದೆ ಇಡೀ ದಿವಸ ಡಾಕ್ಟರರು ಆಡಿದ ಮಾತುಗಳು ಆಕೆಯ ಹೃದಯವನ್ನು ಇರಿಯುತ್ತಿದ್ದವು. ತಾಯಿ ಗುಣಮುಖಳಾಗುವುದು ಕಷ್ಟದ ಮಾತು ಎಂದು ಎನಿಸುತ್ತಿತ್ತು. ಹಾಗಾದರೆ? ಮುಂದೆ ಯೋಚನೆಯೇ ಹರಿಯುತ್ತಿದ್ದಿಲ್ಲ. ನೂರಾರು ದಾರಿಯಲ್ಲಿ ಹರಿದು ಸರೋಜಿನಿಯ ಮನಸ್ಸು ಕೊನೆಗೆ ಮಾಧವನನ್ನೇ ಸೇರುತ್ತಿತ್ತು.'ಯಾವ ದಾರಿ ತೋರಿದರೂ ಅವನೇ ತೋರಿಸಬೇಕು. ಅವನಿಲ್ಲದೆ ಗತಿಯಿಲ್ಲ' ಎಂದು. ಅಂತೂ ಮರುದಿನ ಸಾಯಂಕಾಲ ಆತನನ್ನು ನೋಡು ವುದು ಎಂಬ ನಿರ್ಧಾರದೊಂದಿಗೆ ಆಸ್ಪತ್ರೆಯಿಂದ ಹಿಂದಿರುಗಿ ಮನೆ ಸೇರಿದಳು.

ರಾತ್ರಿ ಒಂಬತ್ತು ಗಂಟೆ ಸುಮಾರಿಗೆ ಗೌಡ ಮನೆಗೆ ಬಂದಾಗ ಎಂದಿಲ್ಲದ ಉತ್ಸಾಹ ಆತನ ನಡೆನುಡಿಗಳಲ್ಲಿ ಕಂಡುಬರುತ್ತಿತ್ತು. ಸರೋಜಿನಿ ಆತನ ಹೆಂಡತಿಯ ಕೂಡ ಮಾತನಾಡುತ್ತ ಪಡಶಾಲೆಯಲ್ಲಿಯೇ ಕುಳಿತಿದ್ದಳು. ಗೌಡ ಬಂದವನೆ ಸರೋಜಿನಿಯನ್ನು ಕೇಳಿದ :

"ಆಸ್ಪತ್ರೆಗೆ ಹೋಗಿದ್ದೆಯಾ ಸಾಯಂಕಾಲ ?"

"ಹುಂ....ಎಲ್ಲ ಸಾಮಾನುಗಳನ್ನು ಒಯ್ದು ಕೊಟ್ಟಿದ್ದೇನೆ...."

"ನಾನೇ ಆಚೆಗೆ ಹೋಗಿಬರಬೇಕೆಂದಿದ್ದೆ. ಆಗಲೇ ಇಲ್ಲ. ಯಾರೋ ನಾಲ್ಕು ಜನ ಫ್ರೆಂಡ್ಸ್ ಸಿನೇಮಾಕ್ಕೆ ಎಳೆದುಕೊಂಡು ಹೋಗಿಬಿಟ್ಟರು...." ಎಂದ, ಅರ್ಧ ತನ್ನ ಹೆಂಡತಿಯನ್ನುದ್ದೇಶಿಸಿ.

"ಅದೇ, ನಿಮಗೆ ಸಿನೇಮಾಕ್ಕೆ ಹೋಗುವುದಾದರೆ ಯಾವಾಗಲೂ ನಿಮ್ಮ ಫ್ರೆಂಡ್ಸ್ ಇದ್ದೇ ಇರುತ್ತಾರೆ. ಅದೇ ನಾವೆಂದಾದರೂ ಹೋಗಬೇಕೆಂದರೆ ಸಾವಿರ ಕೆಲಸ ಹುಟ್ಟಿಕೊಳ್ಳುತ್ತವೆ...." ಎಂದು ಚುಚ್ಚಿದಳು ಗೌಡನ ಹೆಂಡತಿ.

ಗೌಡ ಸೋಗಿನ ಉತ್ಸಾಹದಿಂದ ಉತ್ತರಿಸಿದ :

ನಾನೆಂದಿಗೆ ಸಿನೇಮಾಕ್ಕೆ ಹೋದದ್ದು ? ಹೀಗೆಯೇ ಯಾರಾದರೂ ಗಂಟುಬಿದ್ದರೆ...."

"ಅದೇ, ಅದೇ. ನಿಮಗೆ ಹೋಗಬೇಕಾದಾಗ ಯಾರಾದರೂ ಗಂಟುಬೀಳುತ್ತಲೇ ಇರುತ್ತಾರೆ."

"ನಿಮಗೆ ಹೋಗಲಿಕ್ಕೆ ನಾನೆಂದಿಗಾದರೂ ಬೇಡ ಅಂದಿದ್ದೇನೆಯೆ ?— ಒಳ್ಳೆಯ ಚಿತ್ರ ಬಂದಾಗ ಒತ್ತಾಯಪಡಿಸಿದರೂ ಹೋಗುವುದಿಲ್ಲ."

"ಹೌದು, ಬೇಡ ಅನ್ನುವುದಿಲ್ಲ. ಜತೆಯಲ್ಲಿ ಬರುವುದೂ ಇಲ್ಲ...."

"ಈಗ ಹೋಗಬೇಕಾಗಿದೆಯೇನು ನಿನಗೆ....? ಚಿತ್ರ ಮಾತ್ರ ಬಹಳ ಚೆನ್ನಾಗಿದೆ...."

"ನೀವು ಬಂದರೆ ಹೋಗುತ್ತೇನೆ...."

"ಇದೇ ಈಗ ನೋಡಿ ಬಂದಿದ್ದೇನೆ. ಮತ್ತೆ ನಾನು ಬರಬೇಕೆ ?"

"ಒಳ್ಳೆಯ ಚಿತ್ರ ಎಂದಿರಿ. ಇನ್ನೊಮ್ಮೆ ನೋಡಿದರೂ ಆಯಿತು...."

"ಛೀ....! ಛೀ....! ನನ್ನಿಂದ ಸಾಧ್ಯವಿಲ್ಲ, ಮಹಾರಾಯಿತಿ" ಎಂದ ಗೌಡ ಸೋಗಿನ ದಣಿವಿನಿಂದ.

"ನೀನು ಹೋಗುವಹಾಗಿದ್ದರೆ ಹೇಳು. ಅಲ್ಲಿಯವರೆಗೆಬೇಕಾದರೆ ಮುಟ್ಟಿಸಿ ಬರುತ್ತೇನೆ. ಬರುವಾಗ ಟಾಂಗಾ ಮಾಡಿಕೊಂಡು ಬಂದರೂ ಆಯಿತು...."

ಹರಕೆ ಹೊತ್ತವರ ಹಾಗೆ ಅಷ್ಟೇನು ಹಟ ನನಗೆ. ಹೋಗಲೇಬೇಕೆಂದು ? ಏನೋ ನೀವು ಬಂದರೆ ಹೋಗುವುದು. ಅದೂ ಹೋಗುವ ಮೋಜಿಗಾಗಿ! ಇಲ್ಲದಿದ್ದರೆ ಏನೂ ಇಲ್ಲ !" ಎಂದು ಮಾತು ಮುಗಿಸಿದಳು.

"ಆಯಿತು. ಯಾವಾಗಲೂ ನೀನು ಹೇಳಿದ ಹಾಗೆಯೇ ಆಗಬೇಕು. ನಾನು ಬರಬೇಕಾದರೆ ಇನ್ನೆಂದಿಗೊ...." ಎಂದು ಬೇಸರದಿಂದ ಹೇಳಿದ.

"ನಾನು ನಡೆಯಿರಿ ಎಂದಾಗ ಯಾವಾಗಲೂ ಇಷ್ಟೇ...." ಎಂದು ಆಕೆ ಒಳಗಡೆ ಹೊರಟಳು. ಹೋಗುವಾಗ "ಯಾರಿಗೆ ಬೇಕಾಗಿದೆ ಆ ಸಿನೀಮಾ, ಮನೆಯಲ್ಲಿಯದೇ ಸಾಕಾಗಿದೆ" ಎಂದು ಹೇಳಿದಾಗ ಸರೋಜಿನಿ ನಿಟ್ಟುಸಿರು ಬಿಟ್ಟಳು. ಗೌಡನ ಸಂಚು ನೆಲಕ್ಕುರುಳಿತು !

ಮರುದಿನವೂ ಸರೋಜಿನಿಗೆ ಕಾಲೇಜಿಗೆ ಹೋಗುವುದಾಗಲಿಲ್ಲ. ಮುಂಜಾನೆಯಿಂದ ಎರಡು ಮೂರು ಸಲ ಆಸ್ಪತ್ರೆಗೆ ಹೋಗಿ ಬರಬೇಕಾಯಿತು. ಮಾಧವನನ್ನು ಕಾಣಬೇಕೆಂದು ತವಕಪಟ್ಟರೂ ಆರು ಗಂಟೆಯ ಸುಮಾರಿಗೆ ಪರೀಕ್ಷೆ ನಡೆದಲ್ಲಿ ಹೋಗಿ ಆತನನ್ನು ಸಂಧಿಸುವುದೂ ಅಸಾಧ್ಯವಾಯಿತು. ಮರುದಿನ ಮುಂಜಾನೆ ತಾಯಿ ಆಸ್ಪತ್ರೆಯಿಂದ ಮರಳಿ ಬರುವವಳಿದ್ದುದರಿಂದ ಅಲ್ಲಿ ಇಲ್ಲಿ ಹೋಗಿಬರುವ ಯಾವ ಗಲಾಟೆಯೂ ಇರದೆ ಇದ್ದುದರಿಂದ, ಮರುದಿನ ಸಾಯಂಕಾಲ ಆತನನ್ನು ಭೆಟ್ಟಿಯಾಗಿಯೇ ಬಿಡುವುದು ಎಂದು ಗೊತ್ತು ಮಾಡಿಕೊಳ್ಳುವುದರ ಹೊರತು ಸರೋಜಿನಿಗೆ ಬೇರೆ ಏನು ಮಾಡ ಬರುವಂತಿರಲಿಲ್ಲ.

ಮಾತು ಕೊಟ್ಟಂತೆ ಮರುದಿನ ಮುಂಜಾವಿನ ಹತ್ತು ಗಂಟೆಯ ಸುಮಾರಿಗೆ ರಂಗಸಾನಿ ಆಸ್ಪತ್ರೆಯಿಂದ ಹೊರಡಬಹುದೆಂದು ಡಾಕ್ಟರರು ಹೇಳಿದರು. ತಮ್ಮ ಕೋಣೆಗೆ ಬರಬರುತ್ತ, ಗೌಡನೆದುರು ಹೇಳುತ್ತಿದ್ದರು,

"ನೀವು ಇವರನ್ನು ಸಾಧ್ಯವಿದ್ದಷ್ಟು ಬೇಗನೆ ಮುಂಬಯಿಗೆ ಕರೆದೊಯ್ಯುವುದು ಒಳಿತು...." ಎಂದು. ಸರೋಜಿನಿಗೆ ಮಾತ್ರ ಮಾತು ಎದೆಯಲ್ಲಿ ಬರ್ಚಿಯಂತೆ ಇರಿಯಿತು.

"ಮುಂಬಯಿಗೆ ?" ಗೌಡನಿಗೂ ಆಶ್ಚರ್ಯವಾಗಿತ್ತು.

"ಹುಂ....ಇಲ್ಲಿ ಎರಡು ದಿನ ನೋಡಿ ತಕ್ಕಮಟ್ಟಿಗೆ ನಿದಾನಿಸಿದ್ದೇನೆ; ಆದರೂ ಎಕ್ಸ್‌ರೆ ಮತ್ತು ಡೀಟೇಲ್ಡ್ ಬ್ಲೇಡ್ ಟೆಸ್ಟ್ ಆಗಬೇಕು...."

"ನೀವೇನಾದರೂ ಡೈಗ್ನೋಸ್ ಮಾಡಿದ್ದೀರಲ್ಲ...."

ಹತ್ತಿರವೇ ನಿಂತಿದ್ದ ಸರೋಜಿನಿಯ ಮುಖ ನೋಡಿದರು ಡಾಕ್ಟರರು.

ಆಕೆಯ ಸಮಾಧಾನಕ್ಕಾಗಿ ಎಂಬಂತೆ ಹೇಳಿದರು :

"ನಾನೇನಾದರೂ ಸುಮ್ಮನೆ ಹೇಳಿ ನಿಮ್ಮನ್ನು ಹೆದರಿಸಬೇಕಾಗಿಲ್ಲ. ಇಷ್ಟಾಗಿ, ನಾನು ಏನು ಹೇಳಿದರೂ ಅಲ್ಲಿಯೆ ಡೈಗ್ನೋಸ್ ಆದರೆ ಒಳ್ಳೆಯದು. ಅದಕ್ಕಾಗಿ ನೀವು ಅಲ್ಲಿಗೇ ಹೋಗಬೇಕಾಗುತ್ತದೆ...."

"ಅಲ್ಲ, ಮುಂಬಯಿ ಅಂದರೆ...." ಎಂದು ಗೌಡ ತಡವರಿಸಿದ.

"ನಾನು ಹೇಳೋದು ಇನ್ ದಿ ಇಂಟರೆಸ್ಟ್ ಆಫ್ ದಿ ಪೇಶಂಟ್.... ಹೋಗುವುದು ಬಿಡುವುದು, ಆಫ್ ಕೋರ್ಸ್, ನಿಮಗೆ ತಿಳಿದಹಾಗೆ ಮಾಡಬಹುದು...."

"ನೀವು ಹೇಳಿದನಂತರ ಮತ್ತೆ...."

"ನಾನು ಹೇಳುತ್ತೇನೆ ಎಂದು ಹೊರಡುತ್ತೀರ ಅಥವಾ ಪೇಶಂಟ್ ಬದುಕಬೇಕು ಅಂತ ಹೊರಡುತ್ತೀರಾ....?"

"ಅಲ್ಲ, ತಾವು ಹೀಗೆ ಅಂತ ಹೇಳಿದರೆ ಒಳ್ಳೆಯದು...."

"ನಾನೇನಾದರೂ ಒಂದು ಹೆಸರು ಹೇಳಿದರೆ ಸಮಾಧಾನವೇ ನಿಮಗೆ? ಅಲ್ಲದೆ ಎಂಟುಹತ್ತು ತಿಂಗಳಿಂದ ನೆಗ್ಲೆಕ್ಟ್ ಮಾಡಿದ ಕೇಸು. ನೀವು ಕೂಡಲೆ ಕರೆದುಕೊಂಡು ಹೋಗುವುದು ಕ್ಷೇಮ...."

ಡಾಕ್ಟರರ ಖಂಡಿತವಾದ ಅಭಿಪ್ರಾಯವನ್ನೂ ಮಾತಿನ ರೀತಿಯನ್ನೂ ಕೇಳಿ ಸರೋಜಿನಿಯ ಮುಖ ಬಾಡಿಹೋಗಿತ್ತು. ಗೌಡ ಯೋಚನೆಯಲ್ಲಿ ಇದ್ದಂತಿದ್ದ. ಡಾಕ್ಟರರನ್ನು ಹೆಚ್ಚಿಗೆ ಮಾತನಾಡಿಸುವುದು ಸಾಧ್ಯವಾಗಿ ಕಾಣದ್ದರಿಂದ ನಿಧಾನವಾಗಿ ರಂಗಸಾನಿಯಿದ್ದ ಕೋಣೆಯ ಕಡೆಗೆ ನಡೆದ. ಆತನನ್ನೇ ಹಿಂಬಾಲಿಸಿದ್ದ ಸರೋಜಿನಿಯನ್ನು ಗೌಡ ಕೇಳಿದ :

"ಕೇಳಿದೆಯಾ ಡಾಕ್ಟರರ ಅಭಿಪ್ರಾಯವನ್ನು?"

"ಹುಂ...."

"ಏನು ಮಾಡುವುದು ಹಾಗಾದರೆ?"

"ನೀವು ಹೇಗೂ ಹೋಗುವವರಿದ್ದೀರಲ್ಲವೆ ಮುಂಬಯಿಗೆ?"

"ಹೌದು....ಆದರೆ ಆಕೆ ಏನನ್ನುತ್ತಾಳೆ ಕೇಳಬೇಕು...."

"ಆಕೆ ಏನನ್ನುವುದು? ಔಷಧ—ಉಪಚಾರ ಬೇಡವೆ?"

"ಅದೆಲ್ಲ ಬೇಕು, ಸರಿ. ಆದರೆ ಮುಂಬಯಿಗೆ ಹೋಗಿ, ಅಲ್ಲಿ ನಿದಾನ ಮಾಡಿಸುವುದೆಂದರೆ ಸಾಮಾನ್ಯ ಮಾತೆ? ದುಡ್ಡಿಗೇನು ಮಾಡುತ್ತಾಳೆ?" ಎಂದು ಗೌಡ ಸರೋಜಿನಿಯ ಮುಖವನ್ನು ದಿಟ್ಟಿಸಿ ನೋಡಿದ. ಆ ನೋಟದ

ಕ್ರೂರವಾದ ಅರ್ಥ ಸರೋಜಿನಿಯ ಮರ್ಮವನ್ನು ಭೇದಿಸಿತು. ಈ ಎಲ್ಲ ಸಮಾಚಾರವನ್ನು ಕೇಳಿ ರಂಗಸಾನಿಯೂ ತೆಪ್ಪಗಾದಳು. ಮನೆಗೆ ಬರುವಾಗ, ಬಂದಮೇಲೆ, ಇಡೀ ಮಧ್ಯಾಹ್ನ ಅದೇ ಚರ್ಚೆ ನಡೆಯಿತು. ಆಸ್ಪತ್ರೆಯಿಂದ ಹೊರಡುವಾಗ ರಂಗಸಾನಿ ಕಣ್ಣಲ್ಲಿ ನೀರು ತಂದು, ಒಂದೇ ಮಾತಿನಲ್ಲಿ ಹೇಳಿಬಿಟ್ಟಿದ್ದಳು: "ಎಲ್ಲವೂ ನಿಮ್ಮನ್ನು ಕೂಡಿದೆ, ಗೌಡರೆ. ನೀವು ಹೇಗೆ ಮಾಡಿಸುತ್ತೀರಿ ಹಾಗೆ...." ಎಂದು. ಆ ಒಂದು ಮಾತಿನಲ್ಲಿ ರಂಗಸಾನಿಯ ಜೀವನದ ಅಸಹಾಯತೆ, ಅಸಹಾಯತೆಯಲ್ಲಿಯೂ ಹೇಗಾದರೂ ಮಾಡಿ ಬದುಕಬೇಕೆಂಬ ಆಸೆ, ಆ ಆಸೆಗಾಗಿ ಯಾವುದಕ್ಕೂ ಸಿದ್ಧವಾಗುವ ಕೀಳು ಮನಃಸ್ಥಿತಿ ಒಡಮೂಡಿದಂತಿದ್ದವು. ಸರೋಜಿನಿ ಮಾತ್ರ ಈ ಹೊಸ ಸನ್ನಿವೇಶವನ್ನು ನೆನೆದ ಹಾಗೆಲ್ಲ ಮಾಧವನನ್ನು ಕಾಣದಿದ್ದರೆ ಪರಿಸ್ಥಿತಿ ತನ್ನನ್ನು ಎತ್ತ ಸೆಳೆದೊಯ್ಯಬಹುದೆಂಬುದನ್ನು ತಿಳಿಯಲಾಗದೆ ಒದ್ದಾಡಿದಳು. ತಾಯಿ ಗೌಡನ ಜತೆಯಲ್ಲಿ ಮರುದಿನ ಹೊರಡುವುದೇ ಆದರೆ—ಹೆಚ್ಚುಕಡಿಮೆ ಅದು ನಿಶ್ಚಿತವಾದಂತೆಯೇ ಆಗಿತ್ತು—ಮಾಧವನನ್ನು ಅಂದೇ ಸಾಯಂಕಾಲದೊಳಗಾಗಿ ಸಂಧಿಸಬೇಕು. ಇಲ್ಲದಿದ್ದರೆ ? ಮುಂದಿನ ಯೋಚನೆ ಆ ಕ್ಷಣಕ್ಕೆ ಆಕೆಗೆ ನಿಲುಕುವಂತೆ ಕಾಣಲಿಲ್ಲ.

ಮಾಧವನ ಪರೀಕ್ಷೆ ಇನ್ನೂ ಮುಗಿದಿರಲಿಲ್ಲವಾದ್ದರಿಂದ ಕಾಲೇಜಿನಲ್ಲಿಯೇ ಪರೀಕ್ಷೆಯಾದ್ದರಿಂದ ಆತ ಅಲ್ಲಿ ಸಾಯಂಕಾಲ ಸಿಕ್ಕುವನೆಂಬ ಭರವಸೆಯಿಂದ ಸರೋಜಿನಿ ಐದು ಗಂಟೆಯ ಸುಮಾರಿಗೆ ಹೊರಟಳು. ಊರಲ್ಲಿಯ ಒಬ್ಬಿಬ್ಬ ಗೆಳತಿಯರನ್ನು ನೋಡಿಕೊಂಡು ಬರುತ್ತೇನೆಂದು ತಾಯಿಯೆದುರು ನೆಪಹೂಡಿದ್ದಳು. ಕಾಲೇಜಿನ ಮೇಲಟ್ಟವನ್ನೇರಿ, ಪರೀಕ್ಷೆಗೆ ಕುಳಿತವರ ಹೆಸರುಗಳನ್ನು ನೋಡಿ, ಮಾಧವನ ಹೆಸರಿದ್ದುದನ್ನು ಗುರುತಿಸಿ ಸಮಾಧಾನ ಹೊಂದಿದಳು. ಹಾಗೂ ಹೀಗೂ ಅಡ್ಡಾಡಿ ಮಾಧವನಿರಬಹುದಾದ ಕೋಣೆಯೆದುರೇ ಕಾಯುತ್ತಿದ್ದಳು. ಗಂಟೆಗೆ ಸರಿಯಾಗಿ ವಿದ್ಯಾರ್ಥಿವೃಂದ ಹೊರಗೆ ಬರತೊಡಗಿತು. ಮಾಧವ ಎಲ್ಲಿಯೂ ಕಾಣಲಿಲ್ಲ. ಹೃದಯದ ಕಾತರತೆ ನೂರ್ಮಡಿಯಾಗಿ, ಉದ್ವೇಗ ಕರಗಿ ಕಣ್ಣೀರಾಗುವುದರಲ್ಲಿತ್ತು. ಮೂವರು ಗೆಳೆಯರ ಸಂಗಡ ಪ್ರಶ್ನಪತ್ರಿಕೆಯಲ್ಲಿಯ ಯಾವುದೋ ವಿಷಯವನ್ನು ಚರ್ಚಿಸುತ್ತ ಬರುತ್ತಿದ್ದ—ಮಾಧವ ! ಸರೋಜಿನಿಗೆ ಹೋದ ಜೀವ ಬಂದಂತೆನಿಸಿತು. ಆದರೆ ಆತ ಪ್ರಶ್ನಪತ್ರಿಕೆಯಲ್ಲಿಯೇ ಮಗ್ನನಾಗಿದ್ದ. ತನ್ನಡೆ ನೋಡದೆ ಆತ ಹಾಗೆಯೇ ಸಾಗಿದರೆ ? ಆತನನ್ನು ಕರೆಯಲೆ ? ಏನೆಂದು ಹೇಗೆ ? ಗೆಳೆಯರು ಬೇರೆ

ಇದ್ದಾರಲ್ಲ? ಏನು ಮಾಡಬೇಕೆಂಬುದು ತಿಳಿಯದೆ ಆತನಿದ್ದ ಕಡೆಗೆ ಭರದಿಂದ ಸಾಗಿದಳು. ಆಕೆಯ ಆ ಸಾಗುವಿಕೆಯೇ ಮಾಧವನ ಲಕ್ಷ್ಯವನ್ನು ಸೆಳೆದಿರಬೇಕು. ಕತ್ತೆತ್ತಿ ನೋಡುತ್ತಾನೆ—ಸರೋಜಿನಿ !

ತಾನು ಗೆಳೆಯರ ಕೂಡ ಚರ್ಚಿಸುತ್ತಿದ್ದೇನೆಂಬುದನ್ನು ಪೂರ್ತಿ ಮರೆತವನಂತೆ ಮಾಧವ ಹೆಚ್ಚುಕಡಿಮೆ ಓಡುತ್ತಲೇ ಸರೋಜಿನಿ ನಿಂತ ಕಡೆಗೆ ಬಂದು,

"ಎಲೆ ! ಸರೋಜಿನಿ !" ಎಂದ.

"ಮಾ....ಧ....ವ !" ಸರೋಜಿನಿಯ ಬಾಯಿಂದ ಪೂರ್ತಿಯಾಗಿ ಹೆಸರು ಹೊರಡಲೇ ಇಲ್ಲ.

"ನೀನು ಯಾವಾಗ ಬಂದೆ ?" ಆತುರ, ವಿಸ್ಮಯ ಮಾಧವನ ಮುಖದಲ್ಲಿ, ದನಿಯಲ್ಲಿ ಸ್ಪಷ್ಟವಾಗಿದ್ದವು.

"ಎರಡು ದಿವಸವಾಯಿತು" ಎಂದು ಮೆಲ್ಲನೆ ಹೇಳಿದಳು.

"ಎರಡು ದಿವಸವಾಯಿತೆ ?"

"ಹುಂ...."

ಸರೋಜಿನಿಯ ಮಾತಿನ ರೀತಿಯಲ್ಲಿಯ ಸಂಕೋಚ ಸಮೀಪದಲ್ಲಿಯೇ ನಿಂತಿದ್ದ ತನ್ನ ಮೂವರು ಗೆಳೆಯರ ಮೂಲಕ ಎಂಬುದು ಲಕ್ಷ್ಯಕ್ಕೆ ಬಂದು "ನಾನಿದೇ ಬಂದೆ—" ಎಂದು ಹೇಳಿ, ಅವರತ್ತ ನಡೆದ. ಆತ ಬರುತ್ತಿರುವುದನ್ನು ನೋಡಿ ಒಬ್ಬ ಕೇಳಿದ :

"ಯಾಕೆ? ಬಹಳ ಅರ್ಜೆಂಟ್ ಕೆಲಸವಿದೆ, ಹೋಗಬೇಕು ಎಂದು ಹೇಳಲಿಕ್ಕೆ ಬಂದೆಯಲ್ಲವೇನೊ ?"

"ಹೋಗು ಹೋಗು. ನಮಗಿದೆಯಲ್ಲಪ್ಪಾ ನಮ್ಮ ದಾರಿ" ಎಂದ ಎರಡನೆಯವ ದನಿ ಎಳೆದ.

"ಅಲ್ಲೋ ಮಾಧವಾ, ಸಾಹಿತ್ಯ ಸಂಘದ ಕಾರ್ಯದರ್ಶಿತ್ವ ಇನ್ನೂ ಮುಗಿಯಲಿಲ್ಲವೇನೊ ?"

"ಕಾರ್ಯದರ್ಶಿತ್ವ ಮುಗಿದರೂ ಸಾಹಿತ್ಯ ಮುಗಿದಿಲ್ಲವಪ್ಪಾ !" ಎಂದು ಮೊದಲಿನವ.

"ಸಾಕುಮಾಡಿರೊ, ನನಗೀಗ ಹೋಗಲೇಬೇಕು !"

"ಅಷ್ಟು ತಿಳಿಯುವುದಿಲ್ಲವೆ ನಮಗೆ ?"

"ನೀವು ತಿಳಿದಹಾಗೇನಿಲ್ಲ. ನಿಜವಾಗಿಯೂ ಅರ್ಜೆಂಟಾಗಿದೆ."

"ಇರದೆ ಏನು ? ಇದು ಅರ್ಜೆಂಟಾಗದಿದ್ದರೆ ಇನ್ನಾವುದು ಅರ್ಜೆಂಟು ?"

"ಅಲ್ಲಪ್ಪಾ, ನಾಳಿನ ಪೇಪರು ಎಲ್ಲರೂ ಕೂಡಿಯೇ ನೋಡಿಕೊಳ್ಳೋಣ ಅಂದಿದ್ದೆಯಲ್ಲೋ ಮತ್ತೆ ?"

"ನಾನೇನು ತಿರುಗಿ ಬರುವುದಿಲ್ಲವೆ ?"

"ಯಾರಿಗೆ ಗೊತ್ತಪ್ಪಾ ?"

"ನೀವು ಮುಂದೆ ಸಾಗಿರಿ. ನಾನೀಗ ಬಂದುಬಿಡುತ್ತೇನೆ. ಎಕ್ಸ್‌ಕ್ಯೂಜ್.... ಪ್ಲೀಜ್...."

"ನಾವು ಎಕ್ಸ್‌ಕ್ಯೂಜ್ ಮಾಡದಿದ್ದರೆ ನೀನೇನು ಕೇಳುವಹಾಗಿದ್ದಿಯಾ ? ಹೋಗಯ್ಯ, ಹೋಗು. ಲಕೀ ಡಾಗ್ !...."

ಸರೋಜಿನಿ ಆಗಲೇ ಹತ್ತಿಪ್ಪತ್ತು ಹೆಜ್ಜೆ ದೂರ ಸರಿದಿದ್ದಳು. ಸರಸರನೆ ಹೆಜ್ಜೆ ಹಾಕಿದ. ಗೆಳೆಯರ ಚೇಷ್ಟೆ, ನಗು ದೂರದಿಂದ ಕೇಲಿಬರುತ್ತಲೇ ಇತ್ತು.

"ಏನು, ಯಾವಾಗ ಬಂದೆ, ಏನು ಸಮಾಚಾರ....?"

"ಮೊನ್ನೆ ಬಂದೆ; ನಾಳೆ ಹೊರಡುತ್ತೇನೆ...."

"ತಿರುಗಿ ಹೋಗುವುದರ ಸಲುವಾಗಿಯೇ ಬಂದಿದ್ದೆಯಾ ?"

"ಹಾಗೇನಿಲ್ಲ...." ಎಂದು ಸುಮ್ಮನಾದಳು. ಆದರೆ ಹಾಗೆನ್ನುವಾಗ 'ತಿರುಗಿ ಹೋಗಬಾರದೆಂದೇ ಇಲ್ಲಿಯವರೆಗೆ ಬಂದಿದ್ದೇನೆ—' ಎನ್ನುನಂತಿತ್ತು ಅವಳ ಮುಖ.

"ಬಂದು ಎರಡು ದಿನವಾದರೂ ಎಲ್ಲಿಯೂ ಸುಳಿವಿಲ್ಲವಲ್ಲ ?"

"ಹೇಗಿರಬೇಕು ? ಎದುರಿಗೆ ನಿಂತಾಗಲೂ ಪ್ರಶ್ನಪತ್ರಿಕೆಯಲ್ಲಿಯೇ ಮಗ್ನ ವಾಗುವವರಿಗೆ ?"

"ಅಂದರೆ, ಈಗೊಮ್ಮೆ ಕಾಲೇಜಿಗೆ ಬಂದುಹೋದೆಯಾ ?"

"ಒಮ್ಮೆ ಯಾಕೆ, ಎರಡು ದಿನವೂ ಬಂದಿದ್ದೆ ?"

"ಸಾಧ್ಯವೇ ಇಲ್ಲ !" ಎಂದು ಆಕೆಯ ದೃಷ್ಟಿಯಲ್ಲಿ ದೃಷ್ಟಿಯನ್ನಿಟ್ಟಾಗ ಸರೋಜಿನಿಗೆ ನಗು ತಡೆಯದಾಗಿ ಮಾತಿನ ಗುಟ್ಟು ರಟ್ಟಾಯಿತು. ಆ ಕ್ಷಣಕ್ಕೆ ಸರೋಜಿನಿ ತನ್ನ ಬದುಕಿನ ಕಷ್ಟವನ್ನು ಸಂಪೂರ್ಣ ಮರೆತಂತಿದ್ದಳು.

"ಅದೇನು ಹೀಗೆ ಬಂದುಬಿಟ್ಟೆ ?"

"ಯಾಕೆ--ಬರಬಾರದಾಗಿತ್ತೆ ?"

"ಬರಬಾರದಾಗಿತ್ತೆಂದಲ್ಲ. ಹೀಗೆ ಅಕಸ್ಮಾತ್ತಾಗಿ...."

"ಅಕಸ್ಮಾತ್ತಾಗಿ ಯಾಕೆ ? ನಾನು ಹೋಗುವ ಮುಂದೆ ಹೇಳಿದ್ದಿಲ್ಲವೆ, ನಿಮ್ಮ ಪರೀಕ್ಷೆ ನಡೆದಾಗ ಬರುತ್ತೇನೆ ಎಂದು ?"

"ಬರುತ್ತೇನೆ ಎಂದಿದ್ದಿಲ್ಲ, ಬರಬಹುದು ಎಂದಿದ್ದೆ."

"ಆಗ್ಗೆ ನಾನು ಏನು ಹೇಳಿದ್ದರೂ ಆಮೇಲೊಂದು ಕಾಗದವನ್ನೂ ಬರೆದಿದ್ದೆ."

"ಕಾಗದ ಬರೆದಿದ್ದೇಯಾ ?"

"ಯಾಕೆ, ನಿಮಗೆ ಸಿಗಲಿಲ್ಲವೆ ?"

"ಇಲ್ಲ. ಎಲ್ಲಿಗೆ ಬರೆದಿದ್ದೆ ?"

"ಎಲ್ಲಿಗೇನು ? ನೀವು ಕೊಟ್ಟ ವಿಳಾಸಕ್ಕೆ ಬರೆದಿದ್ದೆ."

"ಸರಿಯಾಯ್ತಲ್ಲ. ಅಂತೆಯೇ ಸಿಕ್ಕಲಿಲ್ಲ ನನಗೆ !"

ಮಾಧವನಿಗೆ ಯೋಚನೆಯಾಯಿತು. ಸರೋಜಿನಿಯ ಕಾಗದ ಕಕ್ಕನ ಕೈಗೆ ಬಿದ್ದಿರಲು ಸಾಕು ಎಂದು. ಅಲ್ಲದೆ ಅದರಲ್ಲಿ ಆಕೆ ಏನೇನು ಬರೆದಿದ್ದಳೊ ಎಂಬ ಅನುಮಾನ. ಅಂತೆಯೇ ಕೇಳಿದ :

"ಏನು ಬರೆದಿದ್ದೆ ಆ ಕಾಗದದಲ್ಲಿ ?"

"ಏನು ವಿಶೇಷವೂ ಇಲ್ಲ. ಇಂಥ ದಿನ ಬರುತ್ತೇನೆಂದು ಬರೆದಿದ್ದೆ. ಆಗತ್ಯ ವಾಗಿ ಭೆಟ್ಟಿಯಾಗಬೇಕಾಗಿದೆ ಎಂದೂ ಬರೆದಿದ್ದೆ."

"ಇಷ್ಟೇ ತಾನೇ?"

"ಹೌದು, ಯಾಕೆ ? ಕಾಗದ ಇನ್ನಾರ ಕೈಗಾದರೂ ಹೋಯಿತೆ ?"

"ಹೋಗಿರಬಹುದು. ಅದಕ್ಕೇ ಕೇಳಿದ್ದೆ."

"ಅದು ಹೇಗೆ ? ವಿಳಾಸ ನೀವೇ ಹೇಳಿದ್ದಿರಿ. ಹಾಗೆಯೇ ಬರೆದಿದ್ದೆ."

"ಅದೆಲ್ಲ ಸರಿ. ಆದರೆ ನಾನೇ ಅಲ್ಲಿ ಇರಲಿಲ್ಲ."

"ಅಂದರೆ ನೀವು ಊರಲ್ಲಿರಲಿಲ್ಲವೆ ?"

"ನಾನು ಬಂದು ಮೂರು ದಿನ ಮಾತ್ರ ಆಯಿತು. ನೀನು ಹೋದ ದಿವಸವೇ ನಾನೂ ಹೊರಟುಬಿಟ್ಟೆ."

"ಆದರೆ ನನ್ನ ಮುಂದೆ ನೀವು ಹೊರಡುವ ಯಾವ ಮಾತನ್ನು ಹೇಳಿರ ಲಿಲ್ಲವಲ್ಲ!?"

" ಆ ದಿನ ಹೊರಡಬೇಕಾಗೀತೆಂಬುದು ನನಗೆಯೇ ಗೊತ್ತಿರಲಿಲ್ಲ !"

"ಏನಾದರೂ ಆಗತ್ಯದ ಕಾಗದ ಬಂದಿತ್ತೆ ?"

"ಕಾಗದ ಇಲ್ಲ, ಏನೂ ಇಲ್ಲ. ಹೀಗೆಯೇ ಏನೇನೋ ನಡೆಯಿತು...."

"ಯಾಕೆ, ಹೇಳಕೂಡದೆ ?"

ಕೂಡದಂಥದ್ದೇನೂ ಇಲ್ಲ. ಇಲ್ಲಿ ನಮ್ಮ ಕಕ್ಕ ಅವರ ಮನೆಯಲ್ಲಿ ತುಸು

ಮನಸ್ತಾಪವಾಯಿತು. ಇಲ್ಲಿದ್ದರೆ ಓದು ಸಾಗುವುದು ಹೇಗೆ ಎಂದು,ಕೂಡಲೇ ಹೊರಟುಬಿಟ್ಟೆ."

ಇಷ್ಟರಲ್ಲಿ ಇಬ್ಬರೂ ಕಾಲೇಜಿನ ಹಿಂದಿನ ಗೇಟಿಗೆ ಬಂದಿದ್ದರು. ಇಬ್ಬರೂ ಯೋಚಿಸದೆ ಅಲ್ಲಿಗೆ ಬಂದದ್ದನ್ನು ನೆನೆದು ಅಚ್ಚರಿಗೊಂಡರು.

"ಕಾಲುಗಳಿಗೂ ಬುದ್ಧಿ ಇರುತ್ತದೆ ಎಂದು ಕಾಣುತ್ತದೆ. ಅಂತೆಯೇ ತಮ್ಮ ದಾರಿಯನ್ನು ತಾವೇ ಕಂಡುಕೊಳ್ಳುತ್ತವೆ !" ಎಂದ ಮಾಧವ.

"ಹೃದಯ ಕಂಡುಕೊಂಡರೆ...." ಎಂದು ನಡುವೆಯೇ ತಡೆದು ಕೇಳಿದಳು:

"ಈಗ ನಿಮಗೇನಾದರೂ ಕೆಲಸವೆ ?"

"ನೀನು ಹೀಗೆ ಬಂದಾಗಲೂ ನನಗೆ ಕೆಲಸವೆ ?"

"ಇದೀಗ ನಿಮ್ಮ ಗೆಳೆಯರು ಒಳ್ಳೆ ಒತ್ತಾಯಪಡಿಸುತ್ತಿರುವಹಾಗಿತ್ತು. ಅದಕ್ಕೆಂದೆ."

"ಅವರು ಯಾವಾಗಲೂ ಹೀಗೇಯೇ, ಭೂಪರು !"

"ಯಾಕೆ, ಏನಂದರು ?"

"ಅನ್ನುವುದೇನು ಮಣ್ಣು ? ಸುಮ್ಮನೆ ಹಾಳು ಚೇಷ್ಟೆ ! ನಾಳೆ ನನ್ನ ಪ್ರಾಣ ತೆಗೆದುಬಿಡುತ್ತಾರೆ. ತಿಂಡಿ-ಚಹ-ಕಾಫಿ ಸುರುವಿಯೇ ಅವರ ಬಾಯಿ ಮುಚ್ಚಬೇಕು !"

"ಏನು ಹೇಳಿ ಬಂದಿರಿ ಅವರಿಗೆ ?"

"ಏನೋ ಸುಳ್ಳು ಹೇಳಿದೆ. ನಾನು ಹೇಳಿದ್ದು ಸುಳ್ಳು ಎನ್ನುವುದು ಅವರಿಗೂ ಗೊತ್ತು ! ಅದು ಹೋಗಲಿ. ಅಗತ್ಯ ಭೆಟ್ಟಿಯಾಗಲೇಬೇಕೆಂದು ಬರೆದಿದ್ದೆ ಎಂದೆಯೆಲ್ಲ ? ಏನು ವಿಶೇಷ ?"

ಸರೋಜಿನಿಯ ಮುಖದಲ್ಲಿಯ ಉಲ್ಲಾಸ ಎಲ್ಲಿಯೋ ಮಾಯವಾಯಿತು. ಒಂದೆರಡು ನಿಮಿಷ ತಡೆದು ಹೇಳಿದಳು :

"ಅದೆಲ್ಲ ದೊಡ್ಡ ಕತೆ ಎಲ್ಲಿಯಾದರೂ ಕುಳಿತು ಮಾತಾನಾಡಬೇಕು."

"ಎಲ್ಲಿ ಏನು ? ಇದ್ದೆ ಇದೆಯಲ್ಲ ನಮ್ಮ ಆಲದ ಮರ !"

"ಹುಂ....ಅಲ್ಲಿಗೇ ಹೋಗೋಣ...." ಎಂದಳು ಸರೋಜಿನಿ ನಸುನಗುತ್ತ. ಹೃದಯದ ದುಗುಡ ಮಾಯವಾಗಿತ್ತು. ಹಿಂದಿನ ಸಲ ಅಲ್ಲಿ ಕುಳಿತು ಇಬ್ಬರೂ ಒಬ್ಬರೊಬ್ಬರಿಗೆ ತೀರ ಹತ್ತಿರ ಬಂದಿದ್ದ ಸಮಯವನ್ನು ನೆನೆದು, ಆಕೆಗೆ ಒಂದು ಕ್ಷಣ ಮತ್ತೆ ಎಲ್ಲವನ್ನೂ ಮರೆಯುವಂತಾಯಿತು.

ಎದುರಿನಿಂದ ಸೂಸಿಬರುತ್ತಿದ್ದ ಸಂಜೆಯ ಹೊಂಬೆಳಕು ಸರೋಜಿನಿಯ

ಮುಖವನ್ನು ಅದ್ವಿತೀಯವನ್ನಾಗಿ ಮಾಡಿತ್ತು. ಮಾಧವ ಆಕೆಯ ಮುಖವನ್ನೇ ನೋಡುತ್ತಿದ್ದ—ನೆಟ್ಟದೃಷ್ಟಿಯಿಂದ, ಇದನ್ನು ತಿಳಿದೇ ಸರೋಜಿನಿ ಕೇಳಿರಬೇಕು :

"ಅದೇನು ಇಷ್ಟು ದಿಟ್ಟಿಸಿ ನೋಡುತ್ತಿದ್ದೀರಲ್ಲ ?"

"ಹುಣ್ಣಿಮೆಯ ಚಂದ್ರ ತಿಂಗಳಿಗೊಮ್ಮೆಯಾದರೂ ಸಿಕ್ಕುತ್ತದೆ ನೋಡಲಿಕ್ಕೆ—ಆದರೆ...." ಎಂದು ನಕ್ಕ.

"ನಾನು ಹೋದಾಗಿನಿಂದ ಕವಿಗಳೂ ಆಗಿದ್ದೀರೆಂದು ಕಾಣುತ್ತದೆ."

"ನಾನು ಕವಿಯಾಗುವುದು ನೀನು ಬಂದಾಗ ಮಾತ್ರ...."

"ಹೋದಾಗ ಏನಾಗುತ್ತೀರಿ ?"

"ಕಪಿ !"

ಸರೋಜಿನಿ ಮನಸಾರೆ ನಕ್ಕಳು, ಮಾಧವನ ಬಗ್ಗೆ ಅಭಿಮಾನವೂ ಅನಿಸಿತು.

"ನಿಮ್ಮ ಮಾತು ಕೇಳಿದರೆ—ಮುಗಿದೇ ಹೋಯಿತು !" ಎಂದಳು.

"ನನಗೆ ಹಾಗೇನಿಲ್ಲ ನೋಡು, ಸರೋಜಾ....ನಿನ್ನ ಮಾತು ಕೇಳದಿದ್ದರೆ ಮುಗಿದೇ ಹೋಯಿತು ಎನಿಸುತ್ತದೆ !"

"ಅದಕ್ಕೆಂದೇ ಬಂದಿದ್ದೇನೆ !" ಎಂದು ಮತ್ತೆ ನಕ್ಕಳು—ಮಾಧವನ ಮುಖ ನೋಡುತ್ತ.

"ಆದರೆ ನಾಳೆಗೆ ಹೊರಡುತ್ತೇನೆ ಅಂದೆಯಲ್ಲ ?"

ಸರೋಜಿನಿಯ ಮುಖ ಮತ್ತೆ ಗಂಭೀರವಾಯಿತು. ಪರಿಚಿತವಾದ ಆಲದ ಮರ ಎಂದಿನಂತೆ ನಿಂತಿತ್ತು. ಬೀದಿಯಲ್ಲಿ ಹಾಯ್ದು ಹೋಗುವವರಿಗೆ ಕಾಣದಂತೆ ಒಂದು ಸ್ಥಳವನ್ನು ಹುಡುಕಿಕೊಂಡು ಮಾಧವ ಕುಳಿತ. ಅವನ ಹತ್ತಿರವೇ ಬಂದು ಕುಳಿತುಕೊಳ್ಳುತ್ತ, ಸರೋಜಿನಿ ಹೇಳಿದಳು :

"ಹುಂ....ಹೋಗಬೇಕಾಗಿದೆ".

"ನಾಳೆಯೇ ?"

"ಹೌದು."

"ಏನು ಸಮಾಚಾರ ?"

"ನನ್ನ ತಾಯಿಗೆ ತುಂಬ ಕಾಯಿಲೆ. ಆಕೆಯ ಕೂಡ ಈಗ ನಾನು ಬಂದದ್ದು."

"ಹೋ ! ಕೇಳಲು ಮರೆತೇ ಇದ್ದೆ. ನೀನು ಉಳಿದುಕೊಂಡದ್ದೆಲ್ಲಿ ?"

"ಎಲ್ಲಿ ಏನು ? ತಾಯಿಯು ಕೂಡ ಗೌಡರ ಮನೆಯಲ್ಲಿಯೇ ಇದ್ದೇನೆ."

"ಹಾಗಾದರೆ ಉಪಚಾರ ಮುಗಿಯುವವರೆಗೆ ಇರಬೇಕಾಯಿತಲ್ಲ ?"

"ಇಲ್ಲಿಯ ಡಾಕ್ಟರರಿಗೆ ತೋರಿಸಿಯಾಯಿತು. ಇಲ್ಲಿ ಟ್ರೀಟ್‌ಮೆಂಟ್ ಆಗುವುದಿಲ್ಲವಂತೆ !"

"ಬೇನೆಯಾದರೂ ಏನು ?"

"ಏನು ಬೇನೆಯೋ ? ಆಕೆಗೇ ಗೊತ್ತು...."

"ಇಲ್ಲಿ ಡಾಕ್ಟರರು ಹೇಳಲಿಲ್ಲವೆ ?"

"ಏನೂ ಹೇಳಲಿಲ್ಲ. ಕೂಡಲೇ ಮುಂಬಯಿಗೆ ಕರೆದೊಯ್ಯಬೇಕು— ಎಂದರು...."

"ಹಾಗಾದರೆ ನೀವು ನಾಳೆ ಹೋಗುವುದು ಮುಂಬಯಿಗೆಯೇ ?"

"ಹೌದು...."

"ದ್ಯಾಟ್ಸ್ ಗುಡ್ ! ಒಂದು ರೀತಿ ಒಳ್ಳೆಯದೇ ಆಯಿತು."

"ಯಾಕೆ ?"

"ನಾಳಿಗೆ ನನ್ನ ಪರೀಕ್ಷೆ ಮುಗಿಯಿತು. ನಾನೂ ಮುಂಬಯಿಗೆ ಹೋಗುವವನಿದ್ದೇನೆ."

ಸರೋಜಿನಿಯ ಉತ್ಸಾಹ ಹೇಳತೀರದು. ಆ ಉತ್ಸಾಹದಲ್ಲಿಯೇ ಕೇಳಿದಳು :

"ಯಾವಾಗ ಬರುತ್ತೀರಿ ?"

"ನಾಡದು ಹೊರಡಬೇಕೆಂದುಕೊಂಡಿದ್ದೇನೆ. ನೀವೂ ನಾಡದ್ದೇ ಹೊರಡಲಾಗುವುದಿಲ್ಲವೇ ?" .

"ನಾಳೆಗೇನೋ ಗೌಡರು ಹೋಗುವವರಂತೆ. ಅವರ ಜತೆಯಲ್ಲಿಯೇ ಹೊರಡಬೇಕು."

ಮಾಧವನಿಗೆ ತುಸು ಉತ್ಸಾಹಭಂಗವಾಯಿತು. ಆದರೆ ಮರುದಿನ ಇನ್ನೂ ಎರಡು ಪೇಪರುಗಳಿದ್ದುದರಿಂದ ಯಾವ ಉಪಾಯವೂ ಇರಲಿಲ್ಲ.

"ನಾಡದು ಹೊರಟರಾಗುವುದಿಲ್ಲವೆ ? ನಾನೂ ಹೊರಡುತ್ತೇನೆ...."

"ಹೌದು. ಆದರೆ ಅಲ್ಲಿಯ ಎಲ್ಲ ವ್ಯವಸ್ಥೆ ಮಾಡುವವರು ಅವರೇ ಎಂದ ಮೇಲೆ...."

"ಹುಂ....ಅದು ಹೋಗಲಿ....ಗೌಡ ಏನೆನ್ನುತ್ತಾನೆ ?"

"ಏನೆನ್ನುವುದು. ತನ್ನ ಕಾಯಕ ಬಿಡುತ್ತಾನೆಯೇ ? ಈಗಂತೂ ಅವನದೇ

ಮೇಲುಗೈ—ಈ ಎಲ್ಲ ಔಷಧ ಉಪಚಾರಕ್ಕೆ ದುಡ್ಡು ಕೊಡುತ್ತಿದ್ದಾನೆಂದ ಮೇಲೆ."

"ಈಗ ಮನೆಯಲ್ಲಿ ?"

"ಆತನ ಹೆಂಡತಿ ಊರಿಂದ ಬಂದಿದ್ದಾರೆ—ನನ್ನ ಸುದೈವದಿಂದ !—ಅಂತೆಯೇ ಬದುಕಿದ್ದೇನೆ...."

"ಆದರೆ ನಾಳೆಗೆ ಆತನ ಜತೆಯಲ್ಲಿಯೇ ಹೋಗಬೇಕಲ್ಲ ?"

"ಅದೇ ನನಗೀಗ ಬಂದ ಸಂಕಟ. ಏನು ಮಾಡಬೇಕು ಎಂಬುದೇ ತಿಳಿಯದಾಗಿದೆ. ತಾಯಿಗಾಗಿ ಹೋಗಬೇಕು...."

"ನಿಮ್ಮ ತಾಯಿ ಬಹಳೇ ಅಸ್ವಸ್ಥರಾಗಿದ್ದಾರೆಯೆ ?"

"ಹುಂ...." ಎಂದು ಸುಮ್ಮನಾದಳು.

ಮಾಧವನೂ ಸುಮ್ಮನಾದ. ಸರೋಜಿನಿಯನ್ನು ಸುತ್ತುಗಟ್ಟಿದ ಆ ಪರಿಸ್ಥಿತಿ ಸಂಪೂರ್ಣವಾಗಿ ಆತನಿಗೆ ಅರ್ಥವಾಗಿತ್ತು. ಅದರಿಂದ ಹೊರಬರಲು ದಾರಿಯನ್ನು ಹುಡುಕುತ್ತಿದ್ದ. ಎತ್ತ ಯೋಚಿಸಿದರೂ ದಾರಿ ಸುಗಮವಾಗಿ ಕಾಣಲಿಲ್ಲ. ಆಕೆಗೆ ದಾರಿ ತೋರಬಹುದೆಂಬುದಕ್ಕಿಂತ ಯೋಚನೆ ಬಗೆಹರಿಯದಾಗಿತ್ತೆಂಬುದಕ್ಕೆ ಸುಮ್ಮನೆ ಕೇಳಿದ :

"ನೀನೇನು ಯೋಚನೆ ಮಾಡಿಕೊಂಡಿದ್ದೀ ?"

"ನಾನೇನು ಯೋಚನೆ ಮಾಡಲಿ ? ಈಗ ನನಗೆ ಯಾವುದೂ ಬಗೆಹರಿಯದಾಗಿದೆ....ಒಂದು ಮಾತನ್ನು ನಾನು ಮನಗಂಡಿದ್ದೇನೆ. ನಾನು ಹೀಗೆಯೇ ಅಲ್ಲಿ ಇರುವುದಾದರೆ ಕತೆ ಮುಗಿದಹಾಗೆಯೆ....ಇದುವರೆಗೆ ಸಾರಾದದ್ದೇ ಹೆಚ್ಚು..."

"ಹೌದು...." ಎಂದ ಮಾಧವ. ಆತನ ದೃಷ್ಟಿ ಎಲ್ಲಿಯೋ ಇತ್ತು. ಕೊನೆಗೆಂದ ಯೋಚನೆಯ ಭರದಿಂದ,

"ನೀನೀಗ ತಿರುಗಿ ಹೋಗದೇ ಇದ್ದರೆ....? ಏನಾದೀತು....?" ಎಂದ.

"ಆಗುವುದೇನು ? ಆದರೆ ಹೋಗುವುದೆಲ್ಲಿಗೆ ?"

ಮಾಧವನಿಗೂ ಯೋಚನೆಯಾಯಿತು. ಹೌದು, ಹೋಗವುದೆಲ್ಲಿಗೆ ? ಸರೋಜಿನಿಯೇ ಹೇಳಿದಳು :

"ಅಲ್ಲದೆ ನಾವಿಬ್ಬರೂ ಈ ಊರಲ್ಲಿ ಹೀಗೆ ಇರುವುದು ಸಾಧ್ಯವಿದೆಯೆ ?"

ಅದು ಅಸಾಧ್ಯವೆಂಬುದು ಇಬ್ಬರಿಗೂ ಗೊತ್ತು. ಮಾಧವನೆಂದ :

"ಸಾಧ್ಯವಾಗಿ ಕಾಣುವುದಿಲ್ಲ ಎಂದ ಮೇಲೆ ನೀನು ತಿರುಗಿ ಹೋಗಬೇಕು...."

"ನಾನು ತಿರುಗಿ ಹೋದರೆ ಮುಂದೇನೋ ಯಾರು ಬಲ್ಲರು.... ?"

"ಮುಂದೇನು ? ಈಗಂತೂ ಮುಂಬಯಿಗೆ ಹೋಗಬೇಕು....ಅಲ್ಲಿಗೆ ಹೇಗಾದರೂ ನಾನು ಬಂದೇ ಬರುತ್ತೇನಲ್ಲ?"

ಸರೋಜಿನಿಯ ಕಣ್ಣೆದುರು ಮಾಧವನ ಆ ಒಂದು ಮಾತಿನಿಂದ ಇಡೀ ಒಂದು ಕನಸಿನ ಸಾಮ್ರಾಜ್ಯವೇ ಪಸರಿಸಿತು. ತನ್ನನ್ನು ಸುತ್ತುಗಟ್ಟಿದ ಚಕ್ರವ್ಯೂಹದಿಂದ ಪಾರಾಗಬಹುದು ಎಂಬ ಆಸೆ ನೂರು ಬಣ್ಣಗಳಾಗಿ ಕಂಗೊಳಿಸಿತು—ಆಕೆಯ ಎದುರಿನಲ್ಲಿಯೇ ಹಬ್ಬಿದ ರಾಗರಂಜಿತವಾದ ಪಶ್ಚಿಮದಲ್ಲಿಯ ದಿಗಂತದಂತೆ! ಆದರೆ ಮನುಷ್ಯನ ಕಲ್ಪನೆ ಯಾವಾಗಲೂ ಕಡಲಿನಂತೆ ! ಕ್ಷಣಹೊತ್ತು ತನ್ನ ತೆರೆಯ ತುರಾಯಿಯ ಮೇಲೆ ಎತ್ತಿಕೊಂಡು ಮೆರೆಯಿಸಿದರೂ ಅದೆಲ್ಲ ಮರುಕ್ಷಣ ಮರಳ ದಂಡೆಯ ಮೇಲೆ ತಂದು ಎಸೆಯುವುದಕ್ಕಾಗಿ ! ಅಂತೆಯೇ ಸರೋಜಿನಿಯ ಕಲ್ಪನಾ ಪ್ರಪಂಚ ಮರುಗಳಿಗೆಯಲ್ಲಿ ಮಾಯವಾಗಿತ್ತು. ಮಾಧವ ಮುಂಬಯಿಗೆ ಬರುವನೆಂದು ಹೇಳಿದುದರಲ್ಲಿಯ ಆಶ್ವಾಸದ ಇತ್ಯರ್ಥವೇನು ಎಂದೂ ಆಕೆಯ ವ್ಯವಹಾರಬುದ್ಧಿ ಕೇಳುವಂತಾಯಿತು. ತನ್ನಂಥವಳಿಗೆ ಆಶ್ರಯವನ್ನು ಕೊಡುವುದೆಂದರೇನು ಸಾಮಾನ್ಯ ವಿಷಯವಾಗಿರಲಿಲ್ಲ ! ಅದಕ್ಕೆ ಧಾರವಾಡವೇನು ? ಮುಂಬಯಿ ಏನು ? ಮುಂಬಯಿಯಲ್ಲಿ ಜನಕ್ಕೆ ತಿಳಿಯದೆ ಇರಬಹುದು. ಆದರೆ ಅದು ಆದರೂ ಎಷ್ಟು ದಿವಸ ಸಾಧ್ಯ ? ಅದೂ ಅಲ್ಲದೆ, ತಾನು ಹೀಗೆ ಹಠಾತ್ತಾಗಿ ಮಾಧವನ ಕೊರಳಿಗೆ ಕಲ್ಲಾಗಿ ನೇತುಬಿದ್ದರೆ ಅವನಿಗೆ ಎಂಥ ಉರುಳೊ ಯಾರು ಹೇಳಬೇಕು ? ಹೀಗೆಲ್ಲ ಯೋಚನೆಯಲ್ಲಿ ತೊಡಗಿದಾಗ ತನ್ನ ಅಸಹಾಯಕತೆ ಆಕೆಗೆ ನೂರ್ಮಡಿಯಾಗಿ ತೋರಿತು. ಅಂತೆಯೇ ಹೇಳಿದಳು:

"ನೀವೇನೆಂದರೂ ನನಗೆ ಯಾವ ಆಸೆಯೂ ಕಾಣುವುದಿಲ್ಲ. ನನ್ನ ಈ ದುರ್ಭಾಗ್ಯಕ್ಕೆ ನಾನು ಬಲಿಯಾಗಿಯೇ ಸಾಯಬೇಕೆಂದು ಕಾಣುತ್ತದೆ...."

ಸರೋಜಿನಿಯ ಕಣ್ಣುಗಳಿಂದ ನೀರು ಉದುರುವುದರಲ್ಲಿದ್ದವು. ಆದರೆ ಆಕೆ ಅವುಗಳನ್ನು ತಡೆಯಲಿಲ್ಲ. ಮಾಧವನೆಂದ, ಸಮಾಧಾನಪಡಿಸುವ ದನಿಯಲ್ಲಿ:

"ನೀನು ಹೀಗೆ ಧೈರ್ಯಗೆಟ್ಟರೆ ಹೇಗೆ, ಸರೋಜಾ.... ?"

"ಇದುವರೆಗೆ ಧೈರ್ಯಗೆಡದೆಯೇ ಇದ್ದಿದ್ದೇನೆ. ಆದರೆ ಇನ್ನು ಮುಂದೆ ಮಾತ್ರ."

ಮುಂದೆ ಸರೋಜಿನಿಗೆ ಮಾತು ಸಾಗಲಿಲ್ಲ. ಕಣ್ಣೀರು ಪಳಕ್ಕನೆ ಉದುರಿ ಗಲ್ಲಗಳ ಮೇಲೆ ಹರಿಯಿತು. ಆಕೆಯ ಸ್ಥಿತಿಯನ್ನು ನೆನೆದು ಮಾಧವನಿಗೂ

ತೀರ ಕೆಡುಕೆನಿಸಿತು. ಆಕೆಯ ಹತ್ತಿರಕ್ಕೆ ಸರಿದು ಆಕೆಯ ಕಣ್ಣೀರನ್ನು ಒರೆಸುತ್ತ ಹೇಳಿದ :

"ನೀನು ಮೊದಲು ಸಮಾಧಾನ ತಾಳು, ಸರೋಜಾ....ನೀನು ಮೊದಲು ಸುಮ್ಮನಾಗು...." ಎಂದು.

"ನನ್ನ ತಾಯಿ ಗಟ್ಟಿಮುಟ್ಟಾಗಿದ್ದಿದ್ದರೆ ನಾನು ಇಷ್ಟೊಂದು ಧೈರ್ಯ ಬಿಡುತ್ತಿರಲಿಲ್ಲ. ಆದರೆ ಆಕೆಯ ಸ್ಥಿತಿಯನ್ನು ನೆನೆದರೆ...." ಎಂದು ಬಿಕ್ಕತೊಡಗಿದಳು.

"ನನಗೆ ಆ ಮಾತು ತಿಳಿದಿಲ್ಲ ಎಂದುಕೊಳ್ಳುತ್ತೀಯಾ ?" ಈಗ ನಾವು ಏನು ಯೋಚಿಸಿದರೂ ಆ ಮಾತನ್ನು ಗ್ರಹೀತವೆಂದು ಇಟ್ಟುಕೊಂಡೇ ಸಾಗಬೇಕಾಗಿದೆ. ಅದಕ್ಕೆಂದೇ...."

ಕಣ್ಣೊರೆಸಿಕೊಂಡು ಮಾಧವನ ಮುಖ ನೋಡಿದಳು. ಸಹಾನುಭೂತಿ, ಅನುಕಂಪ ಆತನ ಕಣ್ಣುಗಳಲ್ಲಿ ತುಂಬಿ ತುಳುಕುತ್ತಿದ್ದುವು. ಯಾವ ಗಳಿಗೆಗೂ ಅವು ನೀರಾಗಿ ಹರಿಯಬಹುದೆಂದು ತೋರುತ್ತಿತ್ತು. ಆತನ ಸಂಕಟ ನೋಡಲಾಗದೆ ಮಾತು ಸರೋಜಿನಿಯ ಹೃದಯದಿಂದ ಹೊರಬಿದ್ದಿತು :

"ನಾನು ನಿಮಗೆ ಎಷ್ಟು ತೊಂದರೆ ಕೊಡುತ್ತಿದ್ದೇನೆ....ಕೊಡಬಾರದು. ಆದರೆ....ನಾನಾದರೂ ಏನು ಮಾಡಲಿ ?"

"ಇದರಲ್ಲಿ ನನಗೆ ದುಃಖವಿಲ್ಲ, ಸರೋಜಾ....ನನ್ನ ದುಃಖದ ಕಲ್ಪನೆ ನಿನಗಾಗುವುದು ಸಾಧ್ಯವಿಲ್ಲ....ನೀನು ಸುಖಿಯಾಗದ ಹೊರತು ನನ್ನ ದುಃಖ ಹೋಗುವಂತಿಲ್ಲ...."

"ಆದರೆ ಇಂದಿಗೆ ಅದು ಹೇಗೆ ಸಾಧ್ಯ ?"

"ಸಾಧ್ಯ, ಅಸಾಧ್ಯ....ಎಣಿಕೆಹಾಕುತ್ತಾ ಕುಳಿತರೆ ಆ ಎಣಿಕೆ ಮುಗಿಯುವುದೇ ಇಲ್ಲ...."

"ಹಾಗಾದರೆ ಏನು ಮಾಡುವುದು ?"

ಅರೆನಿಮಿಷ ತಡೆದು ಮಾಧವ ಹೇಳಿದ :

"ನನಗೆ ಒಂದೇ ಒಂದು ಯೋಚನೆ, ಸರೋಜಾ...."

"ಏನು?"

"ನೀನು ನಿನ್ನ ತಾಯಿಯನ್ನು ಮರೆತುಬಿಡಬಹುದೆ....?"

"ಅಂದರೆ....?"

"ನಾನು ಹೇಳುತ್ತಿರುವುದು ತೀರ ಕಷ್ಟ ಎಂಬುದನ್ನು ಬಲ್ಲೆ. ಆದರೆ ನನಗೆ ಬೇರೆ ದಾರಿಯೇ ಕಾಣುವುದಿಲ್ಲವಲ್ಲ...."

"ಮರೆತುಬಿಡುವುದೆಂದರೆ....?"

"ಆಕೆ ಏನಾದರೂ ನೀನು ಯೋಚಿಸಬಾರದು...."

"ಅಂದರೆ ನಾಳೆ ಆಕೆಯ ಜತೆಯಲ್ಲಿ ಹೋಗಬೇಡ ಎನ್ನುತ್ತೀರಾ ?"

"ನಾಳೆಗೆ ಹೋಗಬಹುದು....ಆದರೆ ಅಲ್ಲಿಗೆ ಹೋದನಂತರ ಬಿಟ್ಟು ಬರ ಬೇಕಾಗಬಹುದು....ಅಪಾದೀತೆ ನಿನ್ನಿಂದ ?"

ಸರೋಜಿನಿಗೆ ಯೋಚನೆಯಾಯಿತು, ಹೃದಯದೊಡನೆ ಆದರ್ಶ ಬುದ್ಧಿ ಹೋರಾಡುವಂತಾಯಿತು.

'ಎಷ್ಟಾದರೂ ನಾನು ನಿನ್ನ ತಾಯಿ, ಇಂಥ ಅಸಾಹಾಯ ಸ್ಥಿತಿಯಲ್ಲಿ ನನ್ನನ್ನು ಬಿಟ್ಟು ಹೋಗುವಿಯಾ ?' ಎಂದು ತಾಯಿಯ ಕ್ಷೀಣ ದನಿ ಕೇಳು ತ್ತಿರುವಂತಾಯಿತು. 'ಈಕೆ ನಿನ್ನ ತಾಯಿಯಲ್ಲ. ನಿನ್ನ ಪೂರ್ವಜನ್ಮದ ವೈರಿ ....ಆಕೆಯ ಈ ದನಿಯಲ್ಲಿ ನಿನಗೆ ಆರ್ತನಾದ ಕೇಳಬಹುದು. ಆದರೆ ಅದರ ಹಿಂದೆ ಆಕೆಯ ಸ್ವಾರ್ಥ ಅಡಗಿದೆ ಎಚ್ಚರ !' ಎಂದು ಬುದ್ಧಿ ಹೇಳಿತು.... ಸರೋಜಿನಿ ಸುಮ್ಮನಾದುದನ್ನು ನೋಡಿ ಮಾಧವ ಹೇಳಿದ :

"ನನಗೆ ಗೊತ್ತು, ಸರೋಜಾ....ಎಷ್ಟಾದರೂ ಆಕೆ ನಿನಗೆ ತಾಯಿ.... ಅಂತೆಯೆ ಆಕೆ ನಿನಗೆ ಮಾಡಿದ್ದೇನು ? ಮಾಡಬಯಸುತ್ತಿದ್ದುದೇನು ?''

"ಅಂತೆಯೇ ಈ ಸಂಕಟ...."

"ಅದರಿಂದ ನಿನಗೆ ಪಾರಾಗಬೇಕಾಗಿದೆ ಅಲ್ಲವೆ ?"

"ಆಗಬೇಕಾಗಿದೆ. ಆದರೆ....''

"ಇದರಲ್ಲಿ ಆದರೆ ಎಂಬ ಮಾತಿಗೆ ಅವಕಾಶವೇ ಇಲ್ಲ....ಈ ವಿಷಯದಲ್ಲಿ ನನಗೆ ಯಾವ ಸಂದೇಹವೂ ಇಲ್ಲ. ಸತ್ತು ಹೋದ ನನ್ನ ತಂದೆಯಿಂದ ನನಗೆ ಪಾರಾಗಬೇಕಾಗಿದೆ. ಬದುಕಿದ್ದ ತಾಯಿಯಿಂದ ನಿನಗೆ ಪಾರಾಗಬೇಕಾಗಿದೆ. ನಾನಾಗಲೇ ಹತ್ತು ಹೆಜ್ಜೆ ದೂರ ಬಂದಿದ್ದೇನೆ....ಮನೆಯಲ್ಲಿ ಮನಸ್ತಾಪ ನಡೆಯಿತು ಎಂದು ಆಗಲೇ ಹೇಳಿದೆನಲ್ಲ ?....ಅಂತೆಯೇ ದೂರ ಹೊರಟಿ ದ್ದೇನೆ....ನೀನು ನನ್ನ ಜತೆಯಲ್ಲಿದ್ದರೆ ನಿನಗೆ ಆಶ್ರಯ, ನನಗೆ ಧೈರ್ಯ !" ಎಂದು ಮಾಧವ ತನ್ನ ಕತೆಯನ್ನು ವಿವರಿಸಿದ.

ಸರೋಜಿನಿ ಎಂದಳು :

"ಇಂಥದರಲ್ಲಿ ನಾನೊಬ್ಬಳು ಬಂದರೆ...."

"ಬಂದರೆ ಇಬ್ಬರೂ ಕೂಡಿಯೇ ದಾರಿ ಹುಡುಕಬಹುದು...."

"ಆದರೆ ಇಬ್ಬರೂ ದಾರಿಯನ್ನು ತಪ್ಪಿಸಿಕೊಳ್ಳಬಹುದಲ್ಲ "

"ಅದಕ್ಕೆ ಹೆದರಿಕೊಂಡು ಕುಳಿತರೆ ದಾರಿಯು ಆಸೆಯೇ ಇಲ್ಲ! ಅಂತೆಯೇ ಕೇಳಿದೆ ನಿನ್ನ ತಾಯಿಯ ಯೋಚನೆಯನ್ನು ಬಿಟ್ಟು ಬರುವುದು ಸಾಧ್ಯವೇ ಎಂದು...."

"ಆದರೆ ಹೋಗುವುದೆಲ್ಲಿ ?"

"ಅದು ಹೊರಟನಂತರದ ವಿಚಾರ" ಎಂದು ನಸುನಕ್ಕ ಮಾಧವ. ಆ ನಗೆಯಲ್ಲಿ ಯೋಚನೆ ಬಗೆಹರಿದು ಯಾವುದೋ ಒಂದು ಸಿರ್ಧಾರಕ್ಕೆ ಬಂದವನ ಆತ್ಮವಿಶ್ವಾಸವಿತ್ತು. ಈ ಆತ್ಮವಿಶ್ವಾಸ ಸರೋಜಿನಿಗೆ ಹೊಳೆಯದಿರಲಿಲ್ಲ. ಆಕೆಯ ಹೃದಯದಲ್ಲಿ ಅಸಹಾಯಕತೆಯ ಬದಲಾಗಿ ತೀವ್ರವಾದ ಕುತೂಹಲ ತಲೆ ಎತ್ತತೊಡಗಿತ್ತು. ಅಂತೆಯೇ ಆಕೆಯಾದರೂ ನಸುನಗುತ್ತಲೆ ಕೇಳಿದಳು :

"ಹೊರಟನಂತರವಂತೂ ಗೊತ್ತಾಗಿಯೇ ಆಗುತ್ತದೆ, ನಿಜ. ಆದರೆ ಹೊರಡುವ ಮೊದಲಿಗೆ ಇಂಥ ದಿಕ್ಕಿಗೆ ಹೋಗುವುದೆಂಬುದಾದರೂ ತಿಳಿದರೆ ಹೊರಡಲಿಕ್ಕೆ ಅನುಕೂಲ ಅಲ್ಲವೆ ?"

"ಅಂದರೆ ನಾವು ಯಾವ ದಿಕ್ಕಿಗೆ ಹೋಗುವುದೆಂಬುದನ್ನು ತಿಳಿಯಬೇಕಾಗಿದೆಯೇ ನಿನಗೆ?"

"ಹುಂ....ಅಷ್ಟು ತಿಳಿದರೂ ಎಷ್ಟೋ ಸಮಾಧಾನ....!"

"ಉತ್ತರ ದಿಕ್ಕಿಗೆ !" ಎಂದು ಮಾಧವ ಗಟ್ಟಿಯಾಗಿ ನಕ್ಕ.

"ಅಂದರೆ ಮುಂಬಯಿಗೆಯೆ ?"

"ನಿನಗೆ ಭೂಗೋಳ ಸರಿಯಾಗಿ ಗೊತ್ತಿದೆ ಎಂದಿಷ್ಟೇ ಇದರರ್ಥ !"

"ಹಾಗಾದರೆ ಅದಲ್ಲವೇ ನಿಮ್ಮ ಮಾತಿನ ಅರ್ಥ ?"

"ಅಲ್ಲ !"

"ಹಾಗಾದರೆ ?"

"ಉತ್ತರಧ್ರುವದ ಕಡೆಗೆ !"

"ಮನುಷ್ಯರಾಗಿದ್ದವರು ಅಲ್ಲಿ ಬದುಕುತ್ತಾರೆಯೆ ?"

"ನಾನಿನ್ನೂ ಹೋಗಿ ನೋಡಿಲ್ಲ. ಆದರೆ ಹೃದಯ ಮಾತ್ರ ಅಲ್ಲಿಗೇ ಹಾತೊರೆಯುತ್ತಿದೆ."

."ಏನೋ, ನನಗೇನೂ ತಿಳಿಯುವುದಿಲ್ಲ. ನಿಮ್ಮ ಮಾತಂತೂ...."

"ಇನ್ನು ಮಾತು ಮುಗಿಯಿತು, ಸರೋಜಾ...." ಎಂದು ಆಕೆಯ ಕಣ್ಣುಗಳಲ್ಲಿ ನೇರ ದೃಷ್ಟಿ ಇಟ್ಟು ನೋಡಿದ. ಸರೋಜಿನಿ ಮುಖ ತಗ್ಗಿಸಿದಳು. ಮಾಧವ ಕೇಳಿದ :

"ಹಾಗಾದರೆ ಬರುವುದು ನಿಶ್ಚಯವಾಯಿತಲ್ಲವೆ ?"

"ಎಲ್ಲಿಗೆ ಅಂದರೆ ?"

"ಎಲ್ಲಿಗೆ ಹೇಳಲಾ ?" ಎಂದು ನಕ್ಕ. 'ನಿನಗೆ ಗೊತ್ತಿದೆ, ಸುಮ್ಮನೆ ಕೇಳುತ್ತಿದ್ದೀಯ' ಎನ್ನುವಂತಿತ್ತು ಆತನಗೆ.

ಹೇಳಿರಿ, ಎಂದರೆ ಬರುತ್ತೇನೆ !"

"ಬರುತ್ತೇನೆ, ಎಂದರೆ ಹೇಳುತ್ತೇನೆ !"

"ಹೂಂ....ಬರುತ್ತೇನೆ...."

"ಇಲ್ಲಿಗೆ...."

ಪಂಚಮಿಯ ಚಂದ್ರ ಮುಗಿಲೆತ್ತರದಲ್ಲಿ ಮೆರೆಯುತ್ತಿದ್ದ. ಸರೋಜಿನಿಯ ಕೇಶರಾಶಿಯಿಂದ ಉನ್ಮಾದಕಾರಿಯಾಗಿ ಸೂಸುತ್ತಿದ್ದ ಪರಿಮಳವನ್ನು ಮೂಸುತ್ತ ಮಾಧವ ಮಾತು ಮರೆತ. ಆದರೆ ಮಾಧವನ ಉಸಿರು ಮಾತಿಲ್ಲದೆಯೂ ಸರೋಜಿನಿಯ ಕಿವಿಯಲ್ಲಿ ಎಲ್ಲಿಲ್ಲದ ಸಮಾಧಾನವನ್ನು ಸುರಿಯುತ್ತಿತ್ತು. ಸಮೀಪದಲ್ಲಿಯೇ ನಿಂತಿದ್ದ ಚಿಕ್ಕ ಮರಕ್ಕೆ ಸುತ್ತಿಕೊಂಡು ನಿಂತ ಕಾಡುಬಳ್ಳಿಯೊಂದು ಸಂಜೆಯ ಸುಳಿಗಾಳಿಗೆ ಮೈಮರೆತು ಓಲಾಡುತ್ತಿತ್ತು—ಸರೋಜಿನಿಯಂತೆಯೇ !

ಆ ಉನ್ಮಾದಸಮಾಧಿಯಲ್ಲಿಯೇ ಮಾಧವನೆಂದ :

"ಇಂದಿನಿಂದ ನೀನು ನನ್ನವಳು, ಸರೋಜಾ...."

ಸರೋಜಿನಿ ಮಾತನಾಡಲಿಲ್ಲ. ಮಾಧವನ ಹೃದಯಕ್ಕೆ ಹತ್ತಿರವಾಗಿಯೇ ಮಿಡಿಯುತ್ತಿದ್ದ ಆಕೆಯ ಹೃದಯ ಕೃತಜ್ಞತೆಯಿಂದ ಮೂಕವಾಗಿತ್ತು. ಮೌನದಿಂದಲೇ ಹೇಳುತ್ತಿರುವಂತಿತ್ತು: "ಎಂದಿನಿಂದಲೂ ನಿನ್ನವಳೇ ನಾನು!" —ಎಂದು....ಎಷ್ಟು ಹೊತ್ತು ಹಾಗೆಯೆ ಕುಳಿತಿದ್ದರೊ ! ಸರೋಜಿನಿಯ ನಾಚಿಕೆಯೇ ಬೆಳುದಿಂಗಳಾಗಿ ಸೂಸಿಬರುವಂತಿತ್ತು.

ಎದುರಿಗೆ ದೂರದಲ್ಲಿ ಯಾರೋ ಹಾಯ್ದುಹೋಗುತ್ತಿದ್ದಂತೆ ಕಾಣಿಸಿತು. ಸರೋಜಿನಿ ಸರಕ್ಕನೆ ಬಿಡಿಸಿಕೊಂಡು ದೂರ ಸರಿದಳು. ಮಾಧವನೆಂದ :

"ಎಷ್ಟು ಹೆದರಿಕೊಳ್ಳುತ್ತೀ, ಸರೋಜಾ....?"

"ಯಾವ ಪುಣ್ಯಾತ್ಮನೊ !"

"ಪುಣ್ಯಾತ್ಮನೊ, ಪಾಪತ್ಮನೊ !"

ಒಂದೆರಡು ನಿಮಿಷ ತಡೆದು ಸರೋಜಿನಿ ಕೇಳಿದಳು :

"ನೀವು ನಾಡಿದ್ದು ಹೊರಡುತ್ತೀರಾ ?"

"ಹುಂ—ಆದರೆ ನೀವು ಉಳಿದುಕೊಳ್ಳುವುದೆಲ್ಲಿ ?"

"ನನಗೇನು ಗೊತ್ತು? ನಾನು ಮುಂಬಯಿಗೆ ಹೋಗುತ್ತಿರುವುದು ಇದೇ ಮೊದಲ ಸಲ."

"ಆ ವಿಷಯದಲ್ಲಿ ನಿನಗೇನು ಗೊತ್ತಾಗಿಲ್ಲವೆ ?"

"ಅವರು ಏನು ಮಾತನಾಡಿದರೂ ಅದು ಯಾವಾಗಲೂ ನನ್ನ ಬೆನ್ನ ಹಿಂದೆಯೇ...."

"ಅದಂತೂ ಸರಿಯೇ, ಆದರೆ....ಹುಂ,....ಒಂದು ಮಾಡಬಹುದು. ನಾನು ನನ್ನ ವಿಳಾಸ ಕೊಟ್ಟರೆ ಅಲ್ಲಿಗೆ ನೀನು ಬರೆಯಬಹುದೆ ?"

"ನಾನಾಗಿ ಹುಡುಕಿಕೊಂಡು ಬರುವುದಂತೂ ಸಾಧ್ಯವಿಲ್ಲ."

"ಹುಡುಕಿಕೊಂಡೇನು ಬರುತ್ತೀ ? ಬರುವುದನ್ನಲ್ಲ ನಾನು ಕೇಳಿದ್ದು. ಊರುಮುಟ್ಟಿದ ಕೂಡಲೆ ನನ್ನ ವಿಳಾಸಕ್ಕೆ ಬರೆಯಬೇಕು ಅಂದೆ."

"ಏನು ಬರೆಯುವುದು ?"

"ನೀವು ಇಳಿದುಕೊಂಡ ಸ್ಥಳದ ವಿಳಾಸವನ್ನು....ಹುಂ....ಅದೊಂದೇ ದಾರಿ....ನೀವು ಇಳಿದುಕೊಂಡ ಸ್ಥಳ ನನಗೆ ಗೊತ್ತಾಗುವಂತೆ ಕೂಡಲೆ ತಿಳಿಸಿ ಬಿಟ್ಟರೆ...."

"ಓ, ಎಸ್. ಅಷ್ಟು ಮಾಡಬಹುದು...." ಎಂದಳು ಸರೋಜಿನಿ ಸಮಸ್ಯೆ ಬಗೆಹರಿದ ಗೆಲುವಿನಿಂದ.

"ನಿವೇಲ್ಲಿ ಇರುವುದು ಎಷ್ಟು ದಿವಸ ? ಉಹುಂ....ನೀವಲ್ಲ, ಅವರು ?" ಎಂದು ನಕ್ಕ.

"ಅದೇನು ? ಡಾಕ್ಟರರು ಹೇಳಿದ ಹಾಗೆ...."

"ಏನೆಂದರೂ ಎರಡು ಮೂರು ದಿವಸವಂತೂ ಇದ್ದೇ ಇರಬೇಕಾದೀತು. ಅಷ್ಟರಲ್ಲಿ ನನಗೆ ಕಾಗದ ಸಿಕ್ಕರೆ ಆಯಿತು."

"ಆಮೇಲೆ....?"

"ಆಮೇಲಿನದನ್ನು ರಜತಪರದೆಯ ಮೇಲೆ ನೋಡಿರಿ....!"

"ರಜತಪರದೆಯ ಮೇಲೆ ನೋಡುವುದಲ್ಲ ; ರಂಗಭೂಮಿಯ ಮೇಲೆ ಆಡುವುದು !"

"ಮಾತುಗಾರ್ತಿ !"

"ಸೊಗಸುಗಾರ !"

"ಯಾರು, ನಾನೇ ?"

"ಅಲ್ಲವೆ ?"

"ಪ್ರಶ್ನೆಗೆ ಪ್ರಶ್ನೆ !"

"ಅಲ್ಲ. ಪ್ರಶ್ನೆಗೆ ಉತ್ತರ !"

"ಏನದು ಉತ್ತರ ?"

"ಉತ್ತರಧ್ರುವ ! ಎಂದು ಕಿಲಕಿಲನೆ ನಕ್ಕಳು. ಹಗುರವಾದ ಹೃದಯದಿಂದ ಹೊರಬಿದ್ದ ಆ ನಗು 'ಪಾರಾದೆ' ಎಂದು ಪ್ರತಿಧ್ವನಿಸುತ್ತಿತ್ತು. ಸುತ್ತಲಿನ ಸಂಜೆಯ ಪ್ರಶಾಂತತೆಯಲ್ಲಿ ಆ ವಿಸ್ತೀರ್ಣ ಶಾಂತತೆಯನ್ನು ಭೇದಿಸಿ ಬಂದಿತು ಕಾಲೇಜಿನ ಗಡಿಯಾರದ ಗಂಟೆಯ ಸಪ್ಪಳ. ತಾವು ಬಂದು ಆಗಲೇ ಎರಡು ಗಂಟೆಯಾಯಿತೆಂಬುದರ ಅರಿವು ಸರೋಜಿನಿಗೆ ಆಗ ಬಂದಿತು.

"ಎಂಟು ಹೊಡೆಯಿತು ಕಾಣುತ್ತದೆ...."

ಯಾಕೆ, ತಡವಾಯಿತೆ?"

"ತಡವೇನು?....ಹುಂ....ಆದರೂ ಆಯಿತು...."

"ಮನೆಯಲ್ಲಿ ಹೇಳಿ ಬಂದಿದ್ದೀಯಾ ?"

"ಏನು, ನಿಮ್ಮ ಹತ್ತಿರ ಹೋಗುತ್ತೇನೆಂದೆ?" ಎಂದು ನಕ್ಕಳು.

"ಹಾಗಲ್ಲ. ಏನು ಹೇಳಿದ್ದೀ ಎಂದೆ !"

"ನಾಳೆ ಹೋಗುವುದಾದರೆ ಊರಲ್ಲಿಯ ಒಬ್ಬಿಬ್ಬ ಗೆಳತಿಯರನ್ನು ನೋಡಿಕೊಂಡು ಬರುತ್ತೇನೆಂದು ಹೇಳಿದೆ."

"ಸಿಕ್ಕರೇ ಅವರು ?"

"ನಾನು ಬಿಟ್ಟರಲ್ಲವೆ ಅವರು ಸಿಕ್ಕದೆ ಇರುವುದು !"

"ಅವರೇ ತಪ್ಪಿಸಿದ್ದರೆ?"

"ಅವರು ತಪ್ಪಿಸುವುದು ಸಾಧ್ಯವೇ ಇಲ್ಲ!"

"ಅಷ್ಟು ಹತ್ತಿರದವರೆ ?"

"ಅಲ್ಲದಿದ್ದರೆ ಓಡಿಬರುತ್ತಿದ್ದೆನೆ?"

ಮಾತು ನಡೆದೇ ಇತ್ತು. ನಕ್ಕು ನಲಿದಾಡುತ್ತಿದ್ದ ಎರಡು ಜೀವಗಳು ತಮ್ಮ ಬದುಕಿನ ದುಗುಡವನ್ನು ಮರೆತಿದ್ದವು. ಸುತ್ತಲೆಲ್ಲವೂ ರಾತ್ರಿಯಕ್ರಿಮಿಗಳು ಕಾಲಪುರುಷನಿಗೆ ಬಾಯಿಯಾಗಿ ವೇಳೆಯ ಎಣಿಕೆಯನ್ನು ಎಡಬಿಡದೆ ಹಾಕುತ್ತಿರುವಂತಿದ್ದವು. ಸರೋಜಿನಿಗೆ ಏನೋ ನೆನಪಾದಂತಾಗಿ ಕೇಳಿದಳು :

"ಹೊರಡೋಣವೆ ಇನ್ನು?"

"ಯಾಕೆ ನಿನಗೆ ತಡವಾಯಿತೆ ?"

"ನಾಳೆ ನಿಮಗೆ ಇನ್ನೂ ಎರಡು ಪೇಪರುಗಳಿವೆಯಲ್ಲವೆ ?"

"ನಾಳೆ ಪೇಪರುಗಳಿದ್ದರೂ ನೀನಿರುವುದಿಲ್ಲ !"

"ಅದು ಸರಿ. ಆದರೆ ಹೊರಟು ಬಿಡೋಣ !"

ಮತ್ತೆ ಹತ್ತು ನಿಮಿಷ ಸರಿದವು. ಕೊನೆಗೆ ಇಬ್ಬರಿಗೂ ಹೊರಡುವ ಮನಸ್ಸು ಇಲ್ಲದಿದ್ದರೂ ತೀರ ತಡವಾಯಿತೆಂದು ಮಾಧವನೇ ಎದ್ದ. ನಿಧಾನ ವಾಗಿ ಹೆಜ್ಜೆಹಾಕುತ್ತ, ಬಂದ ದಾರಿಯಿಂದ ಹಿಂತಿರುಗಿದರು. ದಾರಿ ಕವಲು ಒಡೆಯುವಲ್ಲಿ ಸರೋಜಿನಿಯ ಕೈ ಅದುಮಿ ಮಾಧವ ಹತ್ತನೆಯ ಬಾರಿ ಎಚ್ಚರಿಸಿದ. ಆಕೆ ಮುಂಬಯಿ ತಲುಪಿದ ಕೂಡಲೆ ತನ್ನ ಅಲ್ಲಿಯ ವಿಳಾಸ ವನ್ನು ತಿಳಿಸಬೇಕೆಂದು. ಕ್ಷಣಾರ್ಧದಲ್ಲಿಯೇ ಇಬ್ಬರೂ ಸುತ್ತಲಿನ ನಸುಗತ್ತ ಲಲ್ಲಿ ಮಾಯವಾದರು.

## 12

ಮಾಧವನ ಭೆಟ್ಟಿಯಾದ ಮೂರನೆಯ ದಿನ ಮಧ್ಯಾಹ್ನದ ಸುಮಾರಿಗೆ ಸರೋಜಿನಿ ತಾಯಿ-ಗೌಡನೊಂದಿಗೆ ದಾದರ್ ನಿಲ್ದಾಣದಲ್ಲಿಳಿದಾಗ ಬೆಕ್ಕಸ ಬೆರಗಾದಳು—ಸುತ್ತಲಿನ ಸನ್ನಿವೇಶವನ್ನು ನೋಡಿ. ಮನಸ್ಸೂ ಉಲ್ಲಾಸ ದಲ್ಲಿತ್ತು. ಮುಖ್ಯವಾಗಿ ತಾನು ತನ್ನ ಬಿಡುಗಡೆಯ ಮಾರ್ಗದಲ್ಲಿದ್ದೇನೆಂಬ ಭರವಸೆಯೇ ಅದಕ್ಕೆ ಕಾರಣವಾಗಿತ್ತು. ಅಲ್ಲದೆ ಇತ್ತೀಚಿನ ನಾಲ್ಕಾರು ದಿವಸಗಳಲ್ಲಿ ತಾಯಿಯ ದೇಹಸ್ಥಿತಿಯೂ ಅಷ್ಟು ಕೆಟ್ಟದ್ದಾಗಿ ಕಾಣುತ್ತಿರ ಲಿಲ್ಲ. ಮುಂಬಯಿಯಲ್ಲಿಯ ಚಿಕಿತ್ಸೆಯಿಂದ ತಾನು ಗುಣವಾಗುವೆನೆಂಬ ಆಸೆಯೇ ರಂಗಸಾನಿಯ ಉತ್ಸಾಹಕ್ಕೆ ಕಾರಣವಾಗಿರಬೇಕು. ಸರೋಜಿನಿ ಕೊನೆಗೆ ತನ್ನ ಕೈಗೆ ಸಿಕ್ಕಳೆಂಬ ಭರವಸೆಯಲ್ಲಿ ಗೌಡನೂ ಉತ್ಸಾಹಿತನಾಗಿದ್ದ. ಹೀಗಾಗಿ ನಿಲ್ದಾಣದಲ್ಲಿ ಇಳಿದಾಗ ಮೂವರೂ ಹೆಚ್ಚು ಕಡಿಮೆ ಗೆಲುವಿನ ಮನೋವೃತ್ತಿಯಲ್ಲಿಯೇ ಇದ್ದರು. ಗೌಡ ಕೇಳಿದ :

"ಹೇಗಿದೆ ಮುಂಬಯಿ ?"

"ಈಗಲೆ ಊರನ್ನೆಲ್ಲ ತೋರಿಸಿದ ಹಾಗೆಯೇ ಕೇಳುತ್ತಿದ್ದೀರಲ್ಲಾ ?"

"ಓ ! ನಿನಗೆ ಊರು ಬೇರೆ ತೋರಿಸಬೇಕೆ ನಾನು ?"

"ನೀವು ತೋರಿಸದಿದ್ದರೆ ನಾನು ನೋಡುವುದು ಹೇಗೆ ?" ಸರೋಜಿನಿ ಸೋಗಿನ ವೈಯಾರದಿಂದ ನಗೆಯನ್ನು ಬೀರಿದಳು. ಇದನ್ನು ಗಮನಿಸಿದಾಗ

1001

ರಂಗಸಾನಿ 'ಕೊನೆಗೊಮ್ಮೆ ಎಲ್ಲವೂ ಸರಿಹೋಗುವಂತಿದೆ' ಎಂದುಕೊಂಡಳು. ಗೌಡ ಹೇಳಿದ :

"ಇಲ್ಲಿಗೆ ನಾವು ಬಂದದ್ದು ನಿನ್ನತಾಯಿಯ ಚಿಕಿತ್ಸೆಗಾಗಿ. ಊರು ನೋಡಲಿಕ್ಕಲ್ಲ."

"ಚಿಕಿತ್ಸೆ ಏನು ? ಹಗಲು ಹನ್ನೆರಡು ಗಂಟೆಯೂ ನಡೆಯುವುದಿಲ್ಲ"ಎಂದು ಸರೋಜಿನಿ ಹೇಳಿದ್ದಕ್ಕೆ ರಂಗಸಾನಿಯೂ ದನಿಗೂಡಿಸಿದಳು.

ರಂಗಸಾನಿಯ ಚಿಕಿತ್ಸೆಯನ್ನು ಕೆ. ಇ. ಎಂ. ಆಸ್ಪತ್ರೆಯಲ್ಲಿ ಮಾಡಿಸುವುದೆಂದು ಗೊತ್ತಾದ್ದರಿಂದ ತಾವೆಲ್ಲ ಇಳಿದುಕೊಳ್ಳುವುದು ದಾದರ್ ಮತ್ತು ಪರೇಳಗಳ ನಡುವಿನ ದೊಡ್ಡ ಬೀದಿಯ ಬದಿಯಲ್ಲಿಯೇ ಇದ್ದ ಒಂದು ವಸತಿ ಗೃಹದಲ್ಲಿ ಎಂದು ಗೌಡ ಗೊತ್ತುಮಾಡಿದ್ದ. ಅಲ್ಲದೆ, ಆ ವಸತಿ ಗೃಹದ ಮಾಲೀಕ ಕನ್ನಡಿಗನಾಗಿದ್ದು, ಗೌಡನಿಗೆ ಸುಮಾರಾಗಿ ಬೇಕಾದವನಾಗಿದ್ದುದೂ ಒಂದು ಕಾರಣವಿತ್ತು. 'ವಿಕ್ಟೋರಿಯಾ'ದಿಂದ ಅಲ್ಲಿ ಹೋಗಿ ಮೂರನೆಯ ಅಂತಸ್ತಿನಲ್ಲಿಯ ಮೂಲೆಯ ಕೋಣೆಯಲ್ಲಿ ಸಾಮಾನುಗಳನ್ನು ಇರಿಸಿದಾಗ ಸುತ್ತಲಿನ ಆ ಗದ್ದಲ ಗಜಿಬಿಜಿಗಳನ್ನು ನೋಡಿ ಸರೋಜಿನಿಗೆ ಇನ್ನೂ ಆಶ್ಚರ್ಯವೆನಿಸಿತ್ತು. ಸುತ್ತಲಿನ ಅಲ್ಲಿಯ ಜನವಸತಿಗೆ ತಕ್ಕಂತೆ ವಸತಿ ಗೃಹದಲ್ಲಿ ಯಾವ ಅಚ್ಚುಕಟ್ಟುತನವೂ ಇರಲಿಲ್ಲ. ಗೌಡನಂಥವರು ಅಲ್ಲಿಗೆ ಬಂದಿಳಿಯುವುದು ಸರಿಯಾದುದಲ್ಲವೆಂದು ಮೊದಲ ಬಾರಿಮುಂಬಯಿಗೆ ಬಂದ ಸರೋಜಿನಿಗೂ ಎನಿಸುತ್ತಿತ್ತು. ಅಷ್ಟು ಬೇಸರವನ್ನುಂಟುಮಾಡುವಂತಹದಿತ್ತು ಆ ಪರಿಸರ. ಆದರೆ ಅಲ್ಲಿಯ ಯಾವ ಪರಿಸ್ಥಿತಿಯನ್ನೂ ತಿಳಿಯದವಳಾದ್ದರಿಂದ ಸರೋಜಿನಿಗೆ ಸುಮ್ಮನಾಗಿಯೇ ಇರಬೇಕಾಗಿತ್ತು.

ಸ್ನಾನ ಊಟದ ಕಾರ್ಯಕ್ರಮ ಮುಗಿದ ಮೇಲೆ ಗೌಡ ವಸತಿ ಗೃಹದ ಒಡೆಯನ ಹತ್ತಿರ ಹರಟೆಗೆ ಕುಳಿತ. ಸರೋಜಿನಿಗೆ ಕ್ಷಣಕ್ಷಣಕ್ಕೂ ಮಾಧವನ ನೆನಪು ಬರುತ್ತಿತ್ತು. ತನ್ನ ವಿಳಾಸವನ್ನು ತಿಳಿಸುವುದು ಮೊದಲ ಕೆಲಸವೆಂದು ಆ ಯೋಚನೆಗೆ ತೊಡಗಿದಳು. ಆದರೆ ಇನ್ನೊಬ್ಬರ ಸಹಾಯವಿಲ್ಲದೆ ಯಾವುದೂ ಸಾಧ್ಯವಾಗಿ ಕಾಣಲಿಲ್ಲ. ಬದಿಯ ಕೋಣೆಯಲ್ಲಿ ಯಾರೋ ಪರಕೀಯ ಗಂಡಸರಿದ್ದುದರಿಂದ ಯಾವ ಸಾಮಾಚಾರವೂ ತಿಳಿಯಲಿಲ್ಲ. ಗೌಡ ಎಲ್ಲಿಯಾದರೂ ಹೊರಗೆ ಹೋದರೆ ಮಾಲೀಕನನ್ನೇ ಉಪಾಯವಾಗಿ ಮಾತನಾಡಿಸಿ ಆ ಸ್ಥಳದ ವಿಳಾಸವನ್ನು ತಿಳಿದುಕೊಳ್ಳಬಹುದಾಗಿತ್ತು. ಆ ಸಂದರ್ಭಕ್ಕಾಗಿ ಕಾಯಬೇಕೆನ್ನುತ್ತಿರುವಾಗಲೇ ಇಡೀ ರಾತ್ರಿ ನಿದ್ದೆಗೇಡಾಗಿದ್ದ

ಮೂಲಕ ನಿದ್ರೆ ಒತ್ತರಿಸಿಬಂದಿತು. ಗೌಡನ ಮಾತು-ನಗೆ-ಗುಪಿತವಾದ ಆಲೋಚನೆ ಏನೇನೊ ಆಚೆಯ ಕೋಣೆಯಲ್ಲಿ ನಡೆದೇ ಇದ್ದವು. ಆಗ ಸರೋಜಿನಿಗೆ ಗಾಢವಾಗಿ ನಿದ್ರೆಹತ್ತಿತು.

ಸರೋಜಿನಿ ಎಚ್ಚತ್ತಾಗ್ಗ ಸಂಜೆಯು ಐದೂವರೆಯಾಗುತ್ತಾ ಬಂದಿತ್ತು. ಗೌಡ ಆಸ್ಪತ್ರೆಗೆ ಹೋಗಿ ಡಾಕ್ಟರರೊಡನೆ ವಿಚಾರಿಸಿಕೊಂಡು ಬರುವುದಕ್ಕಾಗಿ ಹೊಗಿದ್ದಾನೆಂದು ತಾಯಿಯಿಂದ ತಿಳಿದುಕೊಂಡು ತನಗೆ ಬೇಕಾದ ಸಮಾಚಾರವನ್ನು ತಿಳಿಯಲೆಂದು ಆಚೆ ಈಚೆ ಅಡ್ಡಾಡಿದಳು. ಮೋರೆ ತೊಳೆಯಲೆಂದು ಆಚೆಯ ಬದಿಯಲ್ಲಿಯ ಬಚ್ಚಲುಮನೆಗೆ ಹೋಗುತ್ತಿರುವಾಗ ಮಧ್ಯಾಹ್ನ ತಮ್ಮೆಲ್ಲರಿಗೂ ಊಟ ಬಡಿಸಿದ ಸೇವಕ ಸಿಕ್ಕ. ಅವನಿಂದ ವಿಳಾಸ ಸಿಕ್ಕಾಗ ಸರೋಜಿನಿಯ ಸಂತೋಷಕ್ಕೆ ಎಣೆಯೇ ಉಳಿಯಲಿಲ್ಲ. ಕೋಣೆಗೆ ಬಂದು ಆಗಲೇ ಬರೆಯಬೇಕೆಂದುಕೊಂಡಳು. ಆದರೆ ಅಷ್ಟರಲ್ಲಿ ಹೊರಗಿನಿಂದ ಗೌಡನ ಸವಾರಿ ಬಂದುಬಿಟ್ಟಿತು. ರಾತ್ರಿ ಬರೆದರಾಯಿತೆಂದು ಸುಮ್ಮನಾದಳು. ಮಾಧವ ಈಗ ರೈಲಿನಲ್ಲಿರಬೇಕಲ್ಲವೆ ?—ಎಂದು ಯೋಚಿಸಿಕೊಂಡಳು.

ಗ್ಯಾಲರಿಯಲ್ಲಿ ನಿಂತುಕೊಂಡು ಕೆಳಗಡೆ ಬೀದಿಯಲ್ಲಿಯ ಜನಸಮುದ್ರವನ್ನು, ಭೂತಾಕಾರವಾಗಿ ವೇಗದಿಂದ ಸಾಗುತ್ತಿದ್ದ ದೊಡ್ಡ ಬಸ್ಸುಗಳನ್ನು, ಕರ್ಣಕರ್ಕಶವಾಗಿ ಶಬ್ದ ಮಾಡುತ್ತಿದ್ದ ಟ್ರಾಮುಗಳನ್ನು, ಅವೆಲ್ಲವುಗಳಲ್ಲಿ ಕಿಕ್ಕಿರಿದು ತುಂಬಿದ ಜನವನ್ನು ನೋಡುವುದರಲ್ಲಿ ತಲ್ಲೀನಳಾಗಿದ್ದಳು. ಇಷ್ಟು ಜನ ಏನು ಮಾಡುತ್ತಾರೆಯೊ, ಎಲ್ಲಿಂದ ಬಂದು ಎಲ್ಲಿಗೆ ಹೋಗುತ್ತಿದ್ದಾರೆಯೊ ಎಂಬ ಯೋಚನೆಯಲ್ಲಿ, ಎಂಥ ವಿಚಿತ್ರವಾದ ಊರು ಎಂದುಕೊಳ್ಳುವಂತಾದಳು. ಹಿಂಬದಿಯಲ್ಲಿಯೆ ಗೌಡ ಬಟ್ಟೆಗಳನ್ನು ಬಿಚ್ಚಿ, ಕಾಟಿನ ಮೇಲೆ ಪವಡಿಸಿ, ತಾಯಿಯೊಡನೆ ಮಾತಾಡುತ್ತಿದ್ದ. ಅವರು ಮಾತಿಗಾರಂಭಿಸಿದಾಗ ಸರೋಜಿನಿಯ ಕಣ್ಣುಗಳು ಎದುರಿನ ದೃಶ್ಯವನ್ನು ನೋಡುತ್ತಿದ್ದುವಾದರೂ ಕಿವಿ–ಮನಸ್ಸು ಮಾತ್ರ ಅವರಿಬ್ಬರ ಮಾತುಗಳಲ್ಲಿಯೇ ನೆಟ್ಟಿದ್ದವು.

"ಏನಾಯಿತು ? ನಾಳೆಗೆ ಹೋಗುವುದೇ ಆಸ್ಪತ್ರೆಗೆ ?" ಎಂದು ಕೇಳಿದಳು ರಂಗಸಾನಿ.

"ನಾಳೆಗೇನೋ ಅಲ್ಲಿ ಆಪರೇಷನ್ ದಿವಸವಂತೆ. ಆದ್ದರಿಂದ ಮುಖ್ಯ ಮುಖ್ಯ ಡಾಕ್ಟರುಗಳೆಲ್ಲ ಮಧ್ಯಾಹ್ನದವರೆಗೆ ಕೆಲಸದಲ್ಲಿರುತ್ತಾರೆ...."

"ಹಾಗಾದರೆ ?"

"ಆದರೂ ಕೆಲಸ ಬೇಗ ಮುಗಿಯಬಹುದು. ಸುಮಾರು ನಾಲ್ಕು ಗಂಟೆಗೆ

ಬರಬಹುದು ಎಂದು ಹೇಳಿದ್ದಾರೆ...."

"ನಾಳೆ ಮಧ್ಯಾಹ್ನವೆ....? ಅಲ್ಲಿಯೇ ಇರಬೇಕಾಗುತ್ತದೆಯೆ ?"

"ಅದನ್ನೂ ಕೇಳಿದೆ. ಆದರೆ ಪೇಶಂಟನ್ನು ನೋಡದ ಹೊರತು ಹೇಳಲಾಗುವುದಿಲ್ಲ ಎಂದರು."

"ಯಾರಿಗೆ ಗೊತ್ತು ? ಧಾರವಾಡದಲ್ಲಿಯೇ ಇಟ್ಟುಕೊಂಡರೆಂದಮೇಲೆ...."

"ಇರಬೇಕಾದರೂ ಆದೀತು....ಅದಕ್ಕೇನು ಹೆದರಿಕೆಯೆ ?"

"ಹೆದರಿಕೆ ಏನಿಲ್ಲ. ಆದರೆ ನನಗೆ ಇಲ್ಲಿಯ ಜನರ ಮಾತೊಂದು ತಿಳಿಯಬೇಕಲ್ಲ ?"

"ನಿನ್ನನ್ನು ಯಾರೂ ಮಾತನಾಡಿಸಬರುವುದಿಲ್ಲ. ತಪಾಸು ಮಾಡುವಾಗಲಂತೂ ನಾನಿದ್ದೇ ಇರುತ್ತೇನೆ...."

"ಎಷ್ಟು ದಿವಸ ಇರಬೇಕಾಗಬಹುದು ಏನಾದರೂ ಹೇಳಿದರೆ ?"

"ನೋಡದ ಹೊರತು ಏನು ಹೇಳಬಹುದು ? ನಾನು ಕೇಳಲೂ ಇಲ್ಲ."

ರಾತ್ರಿ ಊಟವಾದನಂತರ ಒಂಬತ್ತೂವರೆಯ ಸುಮಾರಿಗೆ ವಸತಿಗೃಹದ ಮಾಲೀಕ "ಏನು ಗೌಡರೆ, ಏನ್ನಡಸೀರಿ....?" ಎನ್ನುತ್ತ ಕೋಣೆಯೊಳಗೆಯೇ ಬಂದ. ಆವನನ್ನು ನೋಡಿ ಸರೋಜಿನಿಗೆ ವಿಚಿತ್ರವೆನಿಸಿತು. ಉದ್ದವಾಗಿ ಬೆಳೆಯಿಸಿದ ಆತನ ಕೂದಲು, ಆ ಕೂದಲು ತುಂಬಿ ಹಣೆಗಿಳಿಯುತ್ತಿದ್ದ ಎಣ್ಣೆ, ಮುಖವನ್ನು ಕ್ರೂರವಾಗಿಸುವಂಥ ಕೋರೆಯಾದ ಮೀಸೆ, ತಂಬಾಕಿನಿಂದ ಕೆಂಪಾದ ಹಲ್ಲುಗಳು—ಒಟ್ಟನಲ್ಲಿ ನೋಡಿದಾಗ ಆತನ ಬಗೆಯಲ್ಲಿ ಹೆದರಿಕೆಯಾಗುತ್ತಿತ್ತಲ್ಲದೆ ಯಾವ ಬಗೆಯ ವಿಶ್ವಾಸವೂ ಹುಟ್ಟುತ್ತಿರಲಿಲ್ಲ. ಕೋಣೆಯಲ್ಲಿ ಅನಾಮಂತ್ರಿತನಾಗಿ ಬರುತ್ತಿರುವಾಗಲೇ ಕೇಳಿದ : "ಏನ್ ಗೌಡ್ರೆ ? ಮಲಗಿಬಿಡತೀರೇನು ?"

"ಹುಂ....ಮಧ್ಯಾಹ್ನವೂ ಮಲಗಲಿಲ್ಲ. ಪ್ರಯಾಣದ ಆಯಾಸ ಬೇರೆ "

"ಸಿನೀಮಾಕ್ಕೆ ಬರುತಿರೇನೂ....? ಇಲ್ಲೆ 'ಹಿಂದ್ ಮಾತಾ' ದೊಳಗ ಫಸ್ಟ್ ಕ್ಲಾಸ್ ಸ್ಟಂಟ್ ಬೋಲಪಟ ಆದ...."

"ಇವತ್ತೇನೂ ಬೇಡ....ನನಗೆ ತುಂಬ ಆಯಾಸ ಆಗಿದೆ...."

"ನಡೀರಿ....ಗೌಡ್ರ ! ವರ್ಷಕ್ಕ ಒಮ್ಮೆ ಬರೋದು....ಬಂದಾಗೂ ಏನ್ 'ಜೈನ್' ಮಾಡೋಹಾಂಗಿಲ್ಲ....ನಡೀರಿ....ಆಯಾಸ ಆಗಿದ್ದರ ನನ್ನ ಹತೀಲೆ 'ಔಷಧ' ಆದ, ಕೊಡತೀನಿ ಬೇಕಾದರ....!"

"ಇವತ್ತೇನೂ ಬೇಡ, ಮಹಾರಾಯರೆ....ನಾಳೆಗೆ ಮತ್ತೆ ಬೇಕಾದರೆ

ಹೋಗೋಣ...."

"ನಾಳಿಗೇನೂ ಮತ್ತೆ ಹೋಗೋದ್ಯ....ನನಗಂತೂ ಸಿನೀಮಾಕ್ಕ ಹೋಗ ಲಿಲ್ಲ ಅಂದರ ನಡಿಯೂದೇ ಇಲ್ಲ....ದಿವಸೆಲ್ಲಾ ಗೆಲ್ಲೇದ ಸ್ಕ್ಯಾಲೆ ಕೂತು ಜೀವ ಬ್ಯಾಡಾಗಿರತದ....ಅದಕ್ಕೆ ರಾತ್ರಿ ಒಂದಿಷ್ಟು ಗಾನಾ, ನಾಚ್ ವಗೈರೆ ನೋಡಿ ಬಂದರೆ ಸಮಾಧಾನ ಆಗತದ .. ಅಷ್ಟು ಆಗಲಿಲ್ಲಾಂದ್ರ ನನಗೆ ಇಡೀ ರಾತ್ರಿ ನಿದ್ದೀನೆ ಹತ್ತೋದಿಲ್ಲ...."

ಆತನ ಮಾತು, ವೃತ್ತಿ ನಡೆ, ನೋಟ ಎಲ್ಲವನ್ನೂ ನೋಡಿ ಸರೋಜಿನಿ ತೀರ ಅಸಹ್ಯಪಟ್ಟುಕೊಳ್ಳುತ್ತಲಿದ್ದಳು. ಆಗಾಗ ಆತ ಕದ್ದು ತನ್ನನ್ನು ನೋಡು ತ್ತಿದ್ದುದನ್ನು ನೆನೆದಾಗಲಂತೂ ಕೋಪದಿಂದ ಕೆಂಡದಂತಾಗುತ್ತಿದ್ದಳು. ಆತ ಹೋಗುವ ದಾರಿಯನ್ನೇ ನೋಡುತ್ತಿದ್ದಳು. ಆದರೆ ಆತನೇನೂ ಹೊರಡುವ ಲಕ್ಷಣ ಕಾಣಲಿಲ್ಲ. ಗೌಡ ಎಂದು ಕೇಳಿದ :

"ಹಾಗಾದರೆ ಪ್ರತಿನಿತ್ಯ ನಿಮಗೆ ಸಿನೀಮಾ ಆಗಲೇಬೇಕೆನ್ನಿರಿ...."

"ಹಾಂ....ಹೊರಗೆ ಸಿನೀಮಾ ಆದರೂ ಆಗಬೇಕು, ಇಲ್ಲಾಂದರ ಇಲ್ಲೇ 'ನಾಟಕ' ಆದರೂ ಆಗಬೇಕು...."

ಎಂದು ಗಟ್ಟಿಯಾಗಿ ನಕ್ಕು ಸರೋಜಿಯ ಕಡೆಗೆ ದೃಷ್ಟಿ ಬೀರಿದ. ತನ್ನ ಸುತ್ತಲಿನ ವಾತಾವರಣದ ಜೀವಂತ ಪ್ರತೀಕದಂತಿದ್ದ ಆತನೆದುರಿಗೆ ಉಳಿಯು ವುದಕ್ಕಿಂತ ಹೊರಗಡೆ ನಿಲ್ಲುವುದು ಒಳ್ಳೆಯದೆಂದು ಸರೋಜಿನಿ ಎದ್ದು ನಡೆ ದಳು. ಆತ ತನ್ನನ್ನೇ ದೃಷ್ಟಿಯಿಂದ ಹಿಂಬಾಲಿಸಿರಬೇಕೆಂಬುದರ ಬಗೆಯಲ್ಲಿ ಆಕೆಗೆ ಸಂದೇಹವೇ ಇರಲಿಲ್ಲ. ಗೌಡನನ್ನು ಆತ ಒತ್ತಾಯಪಡಿಸುತ್ತಲೇ ಇದ್ದ. ಕೊನೆಗೆ ಗೌಡ ಸುಳ್ಳು ಆಕಳಿಕೆಯೊಂದನ್ನು ತಂದು ಹೇಳಿದ :

"ನಾಳೆಗೆ ನೀವು ಹೇಳಿದಹಾಗೆ ಆಗಲಿ. ಇವತ್ತು ಬಹಳೇ ಬೇಸರವಾಗಿದೆ. ಇಂದಿನವುಟ್ಟಿಗೆ ನೀವು ನನ್ನನ್ನು ಕ್ಷಮಿಸಬೇಕು."

"ಆಯಿತು....ನಾ ಹೊರಡತೀನಿ ಹಾಂಗಾದರ " ಎಂದು ಎದ್ದು ಹೊರ ಹೊರಡುತ್ತ ಹೇಳಿದ : "ನಾ ಕರದರ ನೀವು ಯಾಕ ಬಂದೀರೆಪಾ, ನಿಮ್ಮ ದೆನೋ " ಎಂದು ಸರೋಜಿನಿಯನ್ನು ನೋಡಿ ನಕ್ಕ. ಆತನ ಕೆನ್ನೆಗೊಂದು ಏಟು ಕೊಡಬೇಕೆನ್ನುವಷ್ಟು ಕೋಪ ಆಕೆಯಲ್ಲಿ ಉರಿಯುತ್ತಿತ್ತು. ಆತ ಹೋದನಂತರ ಸರೋಜಿನಿ ಒಳಗಡೆ ಬಂದಳು. ಗೌಡ ನಕ್ಕು ಹೇಳಿದ : "ಇವನ ಜತೆಯಲ್ಲಿ ಯಾರು ಹೋದಾರು ಸಿನೀಮಾಕ್ಕೆ ?"

"ಯಾಕೆ ? ಹೋಗಬಹುದಾಗಿತ್ತಲ್ಲ?....ಪಾಪ....ಎಷ್ಟು ಆಗ್ರಹದಿಂದ

ಕರೆಯುತ್ತಿದ್ದರು" ಎಂದು ಬೇಕಂತಲೇ ಹೇಳಿದಳು. ಆತ ಹೋಗಿದ್ದರೆ ಚೆನ್ನಾಗಿತ್ತು ಎಂಬ ವಿಚಾರವೂ ಇದ್ದಿತು. ಆದರೆ ಈ ಮಾತಿನಿಂದ ಸರೋಜಿನಿಗೆ ಹೋಗಬೇಕಾಗಿರಬಹುದೆಂದು ಗೌಡ ಅರ್ಥಮಾಡಿಕೊಂಡು ಕೇಳಿದ :

"ನಿನಗೆ ಹೋಗಬೇಕಾಗಿದೆಯೇ ?"

"ಛೆ ! ಈ ಹೊತ್ತು ಸಿನೀಮಾಕ್ಕೆ ಹೋದರೆ ಕುಳಿತಲ್ಲಿಯೇ ನಿದ್ರೆಮಾಡಬೇಕು...."

"ಅದೇನು ? ಚಿತ್ರ ಒಳ್ಳೆಯದಿದ್ದರೆ ನಿದ್ರೆ ತಾನಾಗಿಯೇ ಹೋದೀತು.... ಹೋಗುವುದಾದರೆ ಹೇಳು...."

"ನೀವು ಹೋಗುತ್ತೀರಾ ?"

"ನೀವು ಬಂದರೆ ನಾನು ಹೊರಡುತ್ತೇನೆ...."

"ಮತ್ತೆ ಇದೇ ಈಗ ನಿದ್ರೆ ಬಂದಿದೆ, ತುಂಬ ಬೇಸರ ಬಂದಿದೆ ಎಂದಿರಲ್ಲ ಅವನಿಗೆ ?"

"ನೀನು ಬಂದರೆ ನಿದ್ರೆ, ಬೇಸರ ಎರಡೂ ಹೋಗುತ್ತದೆ!" ಎಂದು ಗೌಡ ನಕ್ಕ. ಪ್ರತಿಯಾಗಿ ಹೆಚ್ಚಿಗೆ ಮಾತನಾಡಿದರೆ ಪ್ರಯೋಜನವಿಲ್ಲವೆಂದು ಸರೋಜಿನಿ ಹೇಳಿದಳು :

"ಈ ಹೊತ್ತೇನೂಬೇಡ. ನಾಳೆಗೆ ಬೇಕಾದರೆ ಹೋಗೋಣವಂತೆ" ಎಂದು. ಗೌಡನಿಗೂ ಸಮಾಧಾನವಾಯಿತು. ನಾಳೆಗೆ ಹೇಗಾದರೂ ರಂಗಸಾನಿ ಆಸ್ಪತ್ರೆಗೆ ಹೋಗಬಹುದು ; ಹೋಗುವಳು. ಆಮೇಲೆ ಸರೋಜಿನಿಯೊಡನೆ ಸಿನೀಮಾ—ಇತ್ಯಾದಿಯಾಗಿ ಕನಸು ಹೆಣೆಯತೊಡಗಿದ. ನಡುನಡುವೆಯೇ ಆಚೆಯ ಕಾಟನ ಮೇಲೆ ಮಲಗಿದ ಸರೋಜಿನಿಯನ್ನು ಉದ್ದೇಶಿಸಿ ಆತ ಏನ್ನನಾದರೂ ಕೇಳುತ್ತಿದ್ದ : ಆ ನಾಲ್ಕೈದು ನಿಮಿಷಗಳಲ್ಲಿಯೇ ಸರೋಜಿನಿ ಸಂಪೂರ್ಣ ಎಚ್ಚರವಿದ್ದರೂ ನಿದ್ರೆಯನ್ನು ನಟಿಸಿ ಬೇಡವಾದ ಮಾತನ್ನು ತಡೆದಳು.

ಮರುದಿನ ಮುಂಜಾನೆ ಗೌಡ ಎಲ್ಲಿಯೋ ಹೋದಾಗ ತನ್ನ ವಿಳಾಸವನ್ನು ಬರೆದು, ವಿಳಾಸವನ್ನು ಹೇಳಿದ ಸೇವಕನಿಗೆ ಅದನ್ನು ಆದಷ್ಟು ತೀವ್ರವಾಗಿ ಅಂಚೆಗೆ ತಲುಪಿಸಬೇಕೆಂದು ಹೇಳಿ ಕೊಟ್ಟಳು. ಮಾಡಬೇಕಾದ ಕೆಲಸ ಮುಗಿಯಿತೆಂದು ಹಿಗ್ಗಿದಳು....ಬಹಳ ತಡವಾದರೆ ಮರುದಿನ ಮಾಧವ ಬರುವನೆಂದು ಮುಂದಿನ ಯೋಚನೆಗಳಲ್ಲಿ ಸಿಲುಕಿದಳು. ಆದರೆ ಯಾವುದೂ ಸ್ಪಷ್ಟವಾಗಿರಲಿಲ್ಲ. ಎಷ್ಟು ಯೋಚಿಸಿದರೂ ಮಾಧವನ ಮೂರ್ತಿಯು ಹೊರತು

ಕಣ್ಣೆದುರಿಗೆ ಇನ್ನಾವುದೂ ನಿಚ್ಚಳ ನಿಲ್ಲುತ್ತಿರಲಿಲ್ಲ....ಸಾಯಂಕಾಲ ಸರಿಯಾಗಿ ನಾಲ್ಕು ಗಂಟೆಗೆ ಮೂವರೂ ಆಸ್ಪತ್ರೆಯಲ್ಲಿದ್ದರು. ತಮ್ಮ ಸರತಿಗಾತಿ ಒಂದು ಗಂಟೆಯ ಮೇಲೆ ಕಾಯಬೇಕಾಯಿತು. ಅಷ್ಟು ದೊಡ್ಡದಾಗಿದ್ದರೂ, ನೂರಾರು ಜನ ಆ ಆವಾರದಲ್ಲಿದ್ದರು. ಆಸ್ಪತ್ರೆ ಪೂರ್ತಿ ನಿರ್ಜನವಾಗಿದ್ದಂತೆ ಭಯಾನಶಾಂತವಾಗಿ ಕಾಣುತ್ತಿತ್ತು. ಇಲ್ಲಿ ಕೆಲಸ ಮಾಡುವವರು ಹೇಗಾದರೂ ಇಂಥ ವಾತಾವರಣದಲ್ಲಿ ಬದುಕುತ್ತಾರೆಯೊ ಎಂದು ಸರೋಜಿನಿ ಆಶ್ಚರ್ಯಪಡುತ್ತಿರುವಷ್ಟರಲ್ಲಿ ರಂಗಸಾನಿಗಾಗಿ ಕರೆ ಬಂದಿತು. ಚಿಕಿತ್ಸೆ ನಡೆದಾಗ ಗೌಡನ ಹೊರತು ಇನ್ನೊಬ್ಬರಿಗೆ ಪ್ರವೇಶ ಸಿಕ್ಕಲಿಲ್ಲವಾದರಿಂದ ಸರೋಜಿನಿ ಹೊರಗಡೆ ಬೆಂಚಿನ ಮೇಲೆಯೇ ಉಳಿಯಬೇಕಾಯಿತು. ಅವರು ಹೋದದ್ದು ಕೇವಲ ಹದಿನೈದು ನಿಮಿಷ ಮಾತ್ರವಾದರೂ ಎಷ್ಟೋ ಕಾಲ ಸರಿದಂತೆ ಸರೋಜಿನಿಗೆ ಭಾಸವಾಗುತ್ತಿತ್ತು. ಹತ್ತಾರು ದಿಕ್ಕಿನಲ್ಲಿ ಯೋಚನೆಯನ್ನು ಓಡಿಸುತ್ತಿದ್ದಳು. ಆದರೆ ಹೊಸತಾಗಿ ಮುಂಬಯಿಗೆ ಬಂದ ಮನುಷ್ಯನಂತೆ ಸರೋಜಿನಿಯ ಮನಸ್ಸಿಗೆ ಯಾವ ದಾರಿಯೂ ಗೊತ್ತಾಗುತ್ತಿರಲಿಲ್ಲ. ಎತ್ತ ಹೋದರೂ ದಾರಿಯೇ! ಎತ್ತ ಹೋದರೂ ದಾರಿ ತಪ್ಪುವ ಹೆದರಿಕೆಯೆ! ಎನ್ನುವಂತಾಗಿ ಸರೋಜಿನಿಯ ಮನಸ್ಸು ಹೊರಟಲ್ಲಿಗೇ ಹಿಂದಿರುಗುತ್ತಿತ್ತು. ಅವರಿಬ್ಬರೂ ಹೊರಗೆ ಬಂದಕೂಡಲೆ ಸರೋಜಿನಿ ಕುತೂಹಲದಿಂದ ಕೇಳಿದಳು:

"ಏನಾಯಿತು?"

"ಆಗುವುದೇನು ಮಣ್ಣು....? ಮತ್ತೆ ಅದೇ ಹಾಡು !...." ಎಂದಳು ತಾಯಿ ಬೇಸರಗೊಂಡು.

"ಅಂದರೆ?"

"ಇಲ್ಲಿಯೇ ಇರಬೇಕಂತೆ....ನನಗೆ ಮೊದಲೇ ಅನಿಸಿತ್ತು...."

ಸರೋಜಿನಿಯ ಮೈ ಜುಂಮ್ಮೆಂದಿತು. ಈ ಒಂದು ಸಮಾಚಾರದಿಂದ ಬೆಳಗಿನಿಂದಲೂ ಆಕೆ ಎಣಿಕೆಹಾಕುತ್ತಿದ್ದ ಹೆದರಿಕೆ ಈಗ ನಿಜವಾಗಿತ್ತು. ಇಷ್ಟು ದಿನ ಪಾರಾದದ್ದು ಒಂದೆಡೆಯಾದರೆ ಇನ್ನು ಮುಂದಿನ ಇಪ್ಪತ್ತು ನಾಲ್ಕುಗಂಟೆ ಪಾರಾಗುವುದು ಕಷ್ಟವಾಗಿ ಕಾಣುತ್ತಿತ್ತು. ಮನಸ್ಸು ಏನನ್ನೊ ಯೋಚಿಸುತ್ತಿದ್ದರೂ ಬಾಯಿಂದ ಸುಮ್ಮನೆ ಕೇಳಿದಳು :

"ಎಷ್ಟು ದಿನವಂತೆ?"

"ನಾಡಿದ್ದು ಮುಂಜಾನೆಯವರೆಗೆ ಇಲ್ಲಿಯೇ ಪರೀಕ್ಷೆಮಾಡಿ ನೋಡುತ್ತಾರಂತೆ...."

ಇಷ್ಟರಲ್ಲಿಯೇ ಆಸ್ಪತ್ರೆಯ ಸೇವಕನೊಬ್ಬನು ಬಂದು ಗೌಡನನ್ನು ಆಫೀಸಿನ ಕಡೆಗೆ ಕರೆದುಕೊಂಡು ಹೋದ. ರಂಗಸಾನಿ ಎಷ್ಟು ಪರಿಯಿಂದ ಮಾತನಾಡಿಸಿದರೂ ಸರೋಜಿನಿ ಸುಮ್ಮನಾಗಿಯೇ ಇದ್ದಳು.

ಮುಂದೆ ಅರ್ಧ ಗಂಟೆಯಲ್ಲಿ ರಂಗಸಾನಿಯನ್ನು 'ಅಬ್ಸರ್ವೇಶನ್ ವಾರ್ಡ್'ನಲ್ಲಿ ಸೇರಿಸಲಾಯಿತು. ರಾತ್ರಿ ಹಣ್ಣುಗಳನ್ನು ತಂದುಕೊಡಬೇಕೆಂದು ಹೇಳಿ, ಎಲ್ಲ ವ್ಯವಸ್ಥೆಗಳನ್ನು ಮುಗಿಯಿಸಿ ದಾದಿಯು ಹೊರಡುವುದರಲ್ಲಿದ್ದಳು. ಆಕೆಯನ್ನು ಸರೋಜಿನಿ ಕೇಳಿದಳು :

"ಇವರ ಹತ್ತಿರ ನಾನು ರಾತ್ರಿ ಇರಬಹುದಲ್ಲವೆ ?"

"ಓ. ಎಸ್. ಇರಬಹುದು. ಆದರೆ ನಿಮಗೆ ಹೊರಗಡೆಯಲ್ಲಿ ಮಲಗಬೇಕಾದೀತು. ಪೇಶಂಟ್‌ನ ಹತ್ತಿರ ಮಲಗಲಾಗುವುದಿಲ್ಲ...."

ಸರೋಜಿನಿಯ ಮನಸ್ಸಿನ ಭಾರ ಮುಕ್ಕಾಲುವಾಸಿ ಇಳಿಯಿತು.

"ಇಲ್ಲಿ ನೀನು ಇದ್ದುಕೊಂಡಾದರೂ ಏನು ಮಾಡುವ ಹಾಗಿದ್ದೀ?" ಎಂದಳು ರಂಗಸಾನಿ.

"ಏನು ಮಾಡುವದಿರದಿದ್ದರೂ ನಾನಿರುವುದು ಇಲ್ಲಿಯೇ...." ಎಂದು ಸರೋಜಿನಿ ಹಟದಿಂದ ಹೇಳಿದಳು.

"ಹೊರಗೆ ಮಲಗಬೇಕಂತಲ್ಲ?"

"ಹುಂ....ಆದರೇನಾಯಿತು?"

"ಆಯಿತು, ಇಲ್ಲಿಯೇ ಇರು. ಅಷ್ಟೇಕೆ ಅದಕ್ಕಾಗಿ ಹಟ" ಎಂದು ಗೌಡ ಹೇಳಿದ್ದನ್ನು ಕೇಳಿ ಸರೋಜಿನಿಗೆ ವಿಚಿತ್ರವೆನಿಸಿತು.

ವೇಳೆ ಏಳಕ್ಕೆ ಸಮೀಪಿಸಿತು. ದೀಪಗಳು ಆಗಲೇ ಹತ್ತಿಕೊಂಡಿದ್ದವು. ಸುತ್ತಲಿನ ಗಂಭೀರವಾದ ವಾತಾವರಣ ಆ ಸಂಜೆಯ ಸಮಯದಲ್ಲಿ ಇನ್ನೂ ಗಂಭೀರವಾಗಿ ಮನಸ್ಸನ್ನು ಸಂಕಟಗೊಳಿಸುತ್ತಿತ್ತು. ಅಲ್ಲಿಯ ಆ ಪ್ರೇತ ಪ್ರಶಾಂತತೆಯನ್ನು ನೆನೆದಾಗ ಇಲ್ಲಿಯಾದರೂ ಇರುವುದು ಹೇಗೆ—ಅದೂ ರಾತ್ರಿಯಲ್ಲಿ—ಎಂದು ಹೆದರಿಕೊಳ್ಳುತ್ತಿದ್ದಳಾದರೂ ಮನಸ್ಸನ್ನು ಗಟ್ಟಿಯಾಗಿಸುವ ಯತ್ನದಲ್ಲಿಯೇ ಇದ್ದಳು. ಗೌಡ ಹೊರಡಲನುವಾಗಿ ಸರೋಜಿನಿಯನ್ನು ಕೇಳಿದ :

"ಹಾಗಾದರೆ ರಾತ್ರಿ ನೀನು ಇಲ್ಲಿಯೇ ಇರುತ್ತೀಯಾ ?"

"ಹುಂ...."

"ಹೆದರಿಕೆಯಾಗುವುದಿಲ್ಲವೆ ನಿನಗೆ?"

"ಹೆದರಿಕೆ ಯಾತರದು ?"

"ಯಾತರದೆಂಡೇನೂ ಅಲ್ಲ. ಎಷ್ಟಾದರೂ ಆಸ್ಪತ್ರೆ....ವಿಚಿತ್ರವೆನಿಸುತ್ತದೆ ಇಲ್ಲಿ."

"ಹುಂ....ಅದೇನೋ ಸರಿ....ಈಕೆಗಾದರೂ ವೇಳೆ ಸರಿಯಬೇಕಲ್ಲ....ನಿದ್ರೆ ಬರುವವರೆಗೆ ಮಾತನಾಡುತ್ತ ಕುಳಿತರೆ ಆಕೆಗೂ ಅಷ್ಟು ಹಗುರೆನಿಸೀತು...."

"ಹುಂ....ಅದೂ ಸರಿ....ಈಕೆಗೂ ಹಣ್ಣು ತಂದುಕೊಡಬೇಕು...."

"ಇಲ್ಲಿಯೇ ಎಲ್ಲಿಯಾದರೂ ಸಿಕ್ಕುತ್ತವೆಯೆ ?"

"ಹುಂ....ಅಷ್ಟೇನೂ ದೂರವಿಲ್ಲ ಪೇಟೆ....ಅಥಾವ ನೀನು ಊಟಮಾಡಿ ಬರುವ ಮುಂದೆಯೇ ತಂದರಾಯಿತು...."

"ಅಂದರೆ ಊಟಕ್ಕೆ ಮತ್ತೆ ಹೊಟೇಲಿಗೆ ಹೋಗಬೇಕೆ !"

"ಇಲ್ಲಿಯೇ ಆತ ಊಟ ತಂದು ಬಡಿಸುತ್ತಾನೆಂದು ತಿಳಿದಿದ್ದೀಯೋ ಏನು ?" ಎಂದು ಗೌಡ ನಕ್ಕ.

ಸರೋಜಿನಿ ತನ್ನ ಯೋಚನೆಯಲ್ಲಿಯೇ ಇದ್ದಳಾದ್ದರಿಂದ ಅಂದಳು :

"ಅಲ್ಲದೆ, ನನಗೆ ಹಾಸಿಗಯನ್ನೂ ಏನಾದರೂ ತೆಗೆದುಕೊಂಡಬರಬೇಕು —ಅಲ್ಲವೆ...."

"ಅದೇ....ಊಟ ಮಾಡಿಕೊಂಡು ಬರುವ ಮುಂದೆ ತಂದರಾಯಿತು...."

"ಈಗಲೇ ಹೊರಟು ಬಿಡೋಣವೆ ಹಾಗಾದರೆ ?"

"ಹುಂ....ಆಚೆ ಈಚೆ ಪೇಟೆಯಲ್ಲಿ ಅಡ್ಡಾಡಿ ಹೋಗುವಷ್ಟೊತ್ತಿಗೆ.... ವೇಳೆಯೇ ಆಗಿಬಿಡುತ್ತದೆ."

ತನ್ನ ಪ್ರತಿಯೊಂದು ಮಾತಿಗೂ ಗೌಡ ಒಪ್ಪುತ್ತಿದ್ದುದನ್ನು ನೋಡಿ ಸರೋಜಿನಿಗೆ ಆಶ್ಚರ್ಯವಾಯಿತು. ತಾಯಿ ಆಸ್ಪತ್ರೆಯಲ್ಲಿರಬೇಕೆಂದಾಗಿನಿಂದ ಈವರೆಗೆ ತಾನು ಪಟ್ಟ ವ್ಯಥೆ ವ್ಯರ್ಥ ಎಂದುಕೊಂಡಳು. ಆ ಉತ್ಸಾಹದಲ್ಲಿಯೇ ಹೇಳಿದಳು :

"ಹಾಗಾದರೆ ಬೇಗನೆ ಹೋಗಿ ಬಂದುಬಿಡುವಾ...." ಎಂದು.

"ಇನ್ನೇನಾದರೂ ತರಬೇಕೆ ಕೋಣೆಯಿಂದ ನಿನಗಾಗಿ ?" ಎಂದ ಗೌಡ ರಂಗಸಾನಿಗೆ.

"ನನಗೇನೂ ಬೇಕಿಲ್ಲ....ನೀವು ಎಷ್ಟು ಗಂಟೆಗೆ ಬರುತ್ತೀರಿ ?"

"ಈಗಾಗಲೆ ಏಳೂವರೆ ಆಗುತ್ತ ಬಂದಿತು. ಊಟ ಮಾಡಿಕೊಂಡು ಬರಬೇಕಾದರೆ ಒಂಬತ್ತು ಗಂಟೆಯಾದರೂ ಆದೀತು....ನಡೆ ಹಾಗಾದರೆ...."

ಎಂದಿಬ್ಬರೂ ಆಸ್ಪತ್ರೆಯಿಂದ ಹೊರಬಿದ್ದರು.

ಊಟವಾಗುವ ಸುಮಾರಿಗೆ ಒಂಬತ್ತು ಗಂಟೆಯಾಯಿತು. ಗೌಡ ಕೋಣೆಗೆ ಬಂದು "ತೆಗೆದುಕೊಂಡು ಹೋಗಬೇಕಾದ ಹಾಸುಗೆ—ಹೊದ್ದಿಕೆಗಳನ್ನು ತೆಗೆದುಕೊ, ನಾನಿದೇ ಬಂದೆ" ಎಂದು ಹೇಳಿ ಮಾಲೀಕನ ಕೋಣೆಗೆ ಹೊರಟುಹೋದ. ಸರೋಜಿನಿ ಒಂದೆರಡು ಸಾಮಾನುಗಳನ್ನು ಕೈಲಚೀದಲ್ಲಿ ಸೇರಿಸಿಕೊಂಡು ಸಿದ್ಧವಾಗಿ, ಗ್ಯಾಲರಿಯಲ್ಲಿ ಬಂದು ನಿಂತಳು. ಬೀದಿಯಲ್ಲಿಯ ಜನಸಂದಣಿ ಕಡಿಮೆಯಾಗತೊಡಗಿ ಭವ್ಯಭಯಾನಕವಾಗಿ ಕಾಣತೊಡಗಿದ್ದವು. ಕಣ್ಣು ಹರಿಯುವವರೆಗೂ ಉದ್ದಕ್ಕೂ ಸಾಲಾಗಿನಿಂತ ಬೀದಿಯ ದೀಪಗಳು ಬದುಕಿನ ಕತ್ತಲು ದಾರಿಯಲ್ಲಿ ವಿವೇಕದ ವಿಚಾರಗಳಂತೆ—ನಾವಿರುವಾಗ ಯಾವ ಅನ್ಯಾಯ ನಡೆದೀತು—ಎಂಬ ಆತ್ಮವಿಶ್ವಾಸದಿಂದೆಂಬಂತೆ ಎತ್ತರವಾಗಿ ನಿಂತಿದ್ದವು....ವೇಳೆ ಒಂಬತ್ತೂವರೆಗೆ ಸಮೀಪಿಸಿದರೂ ಗೌಡ ಬಾರದಿದ್ದುದನ್ನು ನೆನೆದು ಸರೋಜಿನಿಗೆ ಹೆದರಿಕೆಯಾಗತೊಡಗಿತು. ಈತ ಬಾರದೆಯೆ ಇದ್ದರೆ ? ಎಂದು. ಆಚೆಯ ಕೋಣೆಯಿಂದ ಮಾಲೀಕನೊಡನೆ ನಡೆದ ಹರಟೆ ಅಸ್ಪಷ್ಟವಾಗಿ ಕೇಳಿಬರುತ್ತಿತ್ತು. ನಡುನಡುವೆ ಹುಚ್ಚರಂತೆ ಇಬ್ಬರೂ ಕೂಡಿಯೇ ನಕ್ಕದ್ದು ಕೇಳಬರುತ್ತಿತ್ತು. ಮತ್ತೆ ಹತ್ತು ನಿಮಿಷ ಸರಿದುವು. ಸರೋಜಿನಿಗೆ ಸಡೆಯದಾಯಿತು. ಹರಟೆ ನಡೆದೇ ಇತ್ತು. ಅದರ ಬಗೆಯನ್ನು ನೆನೆದಾಗ ಅದೇನೂ ಬೇಗ ಮುಗಿಯುವ ಲಕ್ಷಣ ಕಾಣಲಿಲ್ಲ. ತಾನು ಹೋಗಿ ನೆನಪು ಕೊಡದ ಹೊರತು ಗೌಡ ಬರುವುದು ಕಷ್ಟವಾಗಿ ಕಾಣಿಸಿತಾದ್ದರಿಂದಲೇ ಮತ್ತೆ ಐದುನಿಮಿಷ ತಡೆದು ಸರೋಜಿನಿ ಅವರಿಬ್ಬರೂ ಕುಳಿತು ಹರಟೆ ಹೊಡೆಯುತ್ತಿದ್ದ ಕೋಣೆಯ ಹತ್ತಿರ ಹೋಗಿ,ಒಮ್ಮೆ ಇಣಿಕಿ ನೋಡಿದಳು ಮಾತ್ರ—ಸರೋಜಿನಿಯ ಕೈಕಾಲೇ ತಣ್ಣಗಾದುವು. ಗೌಡ ಬಾಗಿಲ ಕಡೆಗೆ ಬೆನ್ನು ತಿರುವಿಕೊಂಡು ಕುಳಿತಿದ್ದನಾದ್ದರಿಂದ ಆತನ ಮುಖ ಕಾಣಲಿಲ್ಲ. ಮಾಲೀಕನ ಮುಖ ಮಾತ್ರ ವಿಕಾರವಾಗಿತ್ತು. ಅವರಿಬ್ಬರ ನಡುವಿದ್ದ ಮೇಜಿನ ಮೇಲಿನ ಅರ್ಧ ತುಂಬಿದ ಎರಡು ಗ್ಲಾಸುಗಳು, ಒಂದು ಸೀಸೆ ಸರೋಜಿನಿಯ ಕಣ್ಣನ್ನು ಇರಿದುವು—ಅವರ ವಿಕಾರವಾದ ನಗೆ ಆಕೆಯ ಹೃದಯವನ್ನಿರಿದಂತೆ !

ಕಾಲೆಳೆಯುತ್ತ ತಿರುಗಿ ಬಂದು ಮೊದಲಿನ ಸ್ಥಳದಲ್ಲಿಯೇ ನಿಂತಳು. ವೇಳೆ ಹತ್ತಕ್ಕೆ ಸಮೀಪಿಸಿತ್ತು. ಸರೋಜಿನಿಯ ನಾಲಗೆ ಒಣಗಿತ್ತು—ಹೃದಯದಲ್ಲಿಯ ಬದುಕಿನ ಆಸೆಯೇ ಒಣಗುತ್ತಿದ್ದುದರ ಪರಿಣಾಮವಾಗಿಯೋ ಏನೋ

ಎನ್ನುವಂತೆ! ಬೀದಿ ಇನ್ನೂ ನಿರ್ಜನವಾಗತೊಡಗಿತ್ತು. ಯಾರೊ ಒಬ್ಬರು ಬಂದು ಬೀದಿಯಲ್ಲಿಯ ದೀಪಗಳನ್ನು ಅಲ್ಲಿಗೊಂದು. ಇಲ್ಲಿಗೊಂದರಂತೆ ಆರಿಸುತ್ತ ನಡೆದಿದ್ದರು. ದೀಪಗಳು ಕಡಿಮೆಯಾಗುತ್ತಿದ್ದಹಾಗೆ ಬೀದಿಯಲ್ಲಿಯ ಶಾಂತತೆ ಇನ್ನುಡಿಸುತ್ತಿತ್ತು. ಮತ್ತೊಮ್ಮೆ ಹೋಗಿ ನೇರವಾಗಿ ಗೌಡನನ್ನು ಎಚ್ಚರಿಸದ ಹೊರತು ಬೇರೆ ದಾರಿಯೇ ಕಾಣಲಿಲ್ಲ ಸರೋಜನಿಗೆ. ಆದರೆ ಹೊರಡಲು ಕಾಲೇಳಲಿಲ್ಲ. ತಾನಾಗಿಯೇ ಆತನಿಗೆ ತಿಳಿಸದೆಯೇ ಹೊರಟು ಹೋದರೆ ? ಎಂದೂ ಯೋಚಿಸಿದಳು. ಆದರೆ ದಾರಿ ಸಿಕ್ಕುವ ಭರವಸೆ ಎನಿಸಲಿಲ್ಲ. ಅಲ್ಲದೆ ಕ್ಷಣಕ್ಷಣಕ್ಕೂ ಬೆಳೆಯುತ್ತಿದ್ದ ಬೀದಿಯಲ್ಲಿಯ ನೀರವತೆ ಸುರಕ್ಷಿತವಾದ ಯಾವ ಆಶ್ವಾಸನವನ್ನೂ ಕೊಡುತ್ತಿರಲಿಲ್ಲ....ಕೊನೆಗೊಮ್ಮೆ ಧೈರ್ಯ ಮಾಡಿ ಕೋಣೆಯೆದುರು ಹೋಗಿ ಕಾಲು ಸದ್ದು ಮಾಡಿದಳು.

ಸದ್ದು ಕೇಳಿದೊಡನೆ ಗೌಡ ತಟ್ಟನೆ ಹಿಂದಿರುಗಿದ—ಎದ್ದು ನಿಂತ. ಹೊರಡಲಿಕ್ಕೆ ತಡವಾಯಿತೆಂಬುದಕ್ಕಿಂತಲೂ ತನ್ನ ಈ ಕಾರ್ಯಕ್ರಮವನ್ನು ಸರೋಜಿನಿ ನೋಡಿಯೇ ಬಿಟ್ಟಳೇನೋ ಎಂಬುದಕ್ಕಾಗಿ.

"ಯಾಕರೀ ರಾಯರ, ಎದ್ದೇಬಿಟ್ರಿ ?"

"ಸಾಕಿನ್ನು....ಹೋಗೋಣ...." ಎಂದು ಗೌಡ ತಡವರಿಸಿದ.

"ಯಾಕ ? ಇಷ್ಟರಾಗೇ ಅವಸರ ಆಯ್ತೇನು ಮತ್ತೆ....? ಅದನ್ನಷ್ಟು ಮುಗಿಸಿಯಾದರೂ ಮುಗಿಸಿರೆಲ್ಲ....ಅದೇನೂ ಅಂಥಾ ಇಂಥಾದ್ದಲ್ಲ....ಆಂ ? ನನ್ನ ಸಾಮಾನಂದ್ರ ಯಾವಾಗಲೂ ಫಸ್ಟ್‌ಕ್ಲಾಸ್ !"

ಗೌಡ ಹೊರಡುವುದರಲ್ಲಿಯೇ ಉಳಿದ ಅರ್ಧ ಗ್ಲಾಸನ್ನು ಮುಗಿಸಿದ. ಆತ ಹೊರಡುತ್ತಿರುವಾಗ ಮಾಲೀಕನ ಮಾತು ಕೇಳಬರುತ್ತಿತ್ತು : "ಹೂಂ.... ಹೋಗರೆಪಾ....ಇನ್ನು....ನಾನೂ ಹೋಗತೀನಿ ಹುಂ....ಅಂತೂ ಛೈಸಿ ಮಾಡಿಬಿಟ್ಟರೆಪಾ, ಮುಂಬಯಿಗೆ ಬಂದು ! ಆಂ?" ಎಂದು ಏನೇನೊ ಮಾತನಾಡುತ್ತಿದ್ದ. ತನ್ನ ನಾಲಗೆಯ ಮೇಲೆ ಆತನಿಗೆ ಪ್ರಭುತ್ವ ಉಳಿದಿರಲಿಲ್ಲವೆಂಬುದು ಸ್ಪಷ್ಟವಾಗಿತ್ತು.

ಗೌಡ ಕೋಣೆಯಲ್ಲಿ ಬಂದಾಗ ಸರೋಜಿನಿ ತನ್ನ ಕಾಟನ ಮೇಲೆ ಕುಸಿದಿದ್ದಳು. ಹೆದರಿಕೆ–ನಿರಾಶೆಗಳಿಂದ ಧೈರ್ಯವೇ ಉಡುಗಿಹೋಗಿತ್ತು. ಆದರೆ ಬಂದುದನ್ನು ಧೈರ್ಯವಾಗಿ ಎದುರಿಸತಕ್ಕದ್ದೆಂದು ಮನಸ್ಸನ್ನು ಗಟ್ಟಿಮಾಡತೊಡಗಿದಳು. ಆದರೆ ಕೋಣೆಯಲ್ಲಿ ಕಾಲಿಡುತ್ತಿದ್ದ ಗೌಡನ ಸ್ಥಿತಿಯನ್ನೂ ವಿಕಾರವಾದ ಮುಖವನ್ನೂ ನೋಡಿದಾಗ ಕಲೆಹಾಕಿದ ಧೈರ್ಯವೂ ಮಾಯ

ವಾಗತೊಡಗಿತು....ಹಾಗೂ ಹೀಗೂ ತಡವರಿಸುತ್ತ ಹೇಳಿದಳು :

"ಎಷ್ಟು ತಡವಾಗಿಬಿಟ್ಟಿತಲ್ಲ ? ಆಗಲೆ ಹತ್ತು ಹೊಡೆದುಹೋಯಿತು !"

"ತಡ ಆಯ್ತು ? ಯಾತಕ್ಕೆ ? ತಡ ಆಗಿಯೇ ಇಲ್ಲ....ಏನೂ ಇಲ್ಲ...." ಎಂದು ಗೌಡ ಹುಚ್ಚುಚ್ಚಾಗಿ ನಕ್ಕ.

"ಒಂಬತ್ತಕ್ಕೆ ಬರುತ್ತೇವೆ ಎಂದು ಹೇಳಿದ್ದಿಲ್ಲವೆ ?"

"ಹೇಳಿದರೇನಾಯಿತು ?"

ಗೌಡನ ಮಾತಿನ ಒಲವು ಸರೋಜಿನಿಗೆ ಮೊದಲೇ ಸ್ಪಷ್ಟವಾಗಿದ್ದು ಈಗ ಇನ್ನೂ ನಿಚ್ಚಳವಾಯಿತು. ಇನ್ನು ಧೈರ್ಯಗೆಟ್ಟು ಪ್ರಯೋಜನವಿಲ್ಲವೆಂದು ತುಸು ಬಿರುಸಾಗಿಯೇ ಕೇಳಿದಳು :

"ಅಂದರೆ ಈಗ ನಾವು ಆಸ್ಪತ್ರೆಗೆ ಹೋಗುವ ಹಾಗಿಲ್ಲವೆ ?"

"ಯಾತಕ್ಕೆ ಹೋಗಬೇಕು ? ಏನಿದೆ ಕೆಲಸ ?"

"ಏನಿದೆ ಕೆಲಸವೇ ? ಹಾಗಾದರೆ ಮೊದಲಿಗೆ ಹೋಗೋಣ ಎಂದಿರಲ್ಲ ಮತ್ತೆ....?"

ಗೌಡನಿಗೆ ಮಾತು ಬೇಸರವೆನಿಸತೊಡಗಿತ್ತು. ಸರೋಜಿನಿಯ ಹತ್ತಿರ ಬರುತ್ತ ಹೇಳಿದ :

"ಹೌದು ಅಂದಿದ್ದೆ....ಆದರೆ ನಿನಗೆ ಇಷ್ಟೂ ತಿಳಿಯುಬಾರದೆ ?" ಎಂದು ಮತ್ತೆ ನಕ್ಕ.

"ನನಗೆ ಎಲ್ಲವೂ ತಿಳಿದಿದೆ."

"ನಿನಗೆ ಏನೂ ತಿಳಿದಿಲ್ಲ....ಅಂತೆಯೇ ಹೀಗೆ ಮಾತನಾಡುತ್ತಿದ್ದೀ.... ಆಗಲೆ ನಾನು ಹಾಗೆ ಹೇಳಿರದಿದ್ದರೆ ನೀನು ಆಸ್ಪತ್ರೆಯಿಂದ ಬರುತ್ತಲೇ ಇರ ಲಿಲ್ಲ....ಆದಕ್ಕೆಂದೇ...."

"ಆದಕ್ಕೆಂದೇ ಈ ಮೋಸ ಹೂಡಿದಿರೇನು ?"

"ನೀನು ಏನು ಬೇಕಾದ್ದನ್ನೂ ಅನ್ನಬಹುದು....ಇನ್ನು ಆಸ್ಪತ್ರೆಗೆ ಮಾತ್ರ ಹೋಗುವ ಮಾತಿಲ್ಲ !"

"ನನಗೆ ಹೋಗಲೇಬೇಕು...." ಎಂದಳು ಸರೋಜಿನಿ ಖಂಡಿತವಾಗಿ.

"ನಿನಗೆ ಬೇಕಾದದ್ದು ಸಾವಿರ....ಕೇಳುವವರಾರು ?"

"ಯಾರೂ ಕೇಳಬೇಕಾದದ್ದಿಲ್ಲ....ನಾನೀಗ ಹೋಗಲೇಬೇಕು...."

"ಹೋಗು ಹಾಗಾದರೆ....ಹೋಗಲ್ಲ...."

"ಆ ಬಾಗಿಲದ ಹತ್ತಿರದಿಂದ ಸರಿಯಿರಿ, ನಾನೇ ಹೋಗುತ್ತೇನೆ...."

"ಎಲ್ಲಿಗೆ?"

"ಎಲ್ಲಿಗೆ ಬೇಕಾದಲ್ಲಿಗೆ ಹೋಗುತ್ತೇನೆ...."

"ಹೋಗುವಿಯಂತೆ. ಬೇಕಾದಲ್ಲಿಗೆ....ಆದರೆ...."

"ಆದರೆ ಇಲ್ಲ, ಏನೂ ಇಲ್ಲ...."

"ಅಬಬ....!" ಎಂದು ಗೌಡ ಮತ್ತೆ ವಿಕಾರವಾಗಿ ನಕ್ಕ—ಈ. ಬೇಟೆ ಬಲೆಯಿಂದ ಏನು ಪಾರಾದೀತು ಎಂದು ದೃಷ್ಟ ಆತ್ಮವಿಶ್ವಾಸದಲ್ಲಿ.

"ಇದು ನೋಡಿರಿ, ಗೌಡರೇ ಇದು ಸರಿಯಲ್ಲ.....ನಾನು ಮೊದಲೇ ಹೇಳಿ ಬಿಡುತ್ತೇನೆ....ಇದರಿಂದ ನಿಮ್ಮ ಪರಿಣಾಮ ಚೆನ್ನಾಗಲಿಕ್ಕಿಲ್ಲ....!"

"ಯಾಕೆ, ನಿನ್ನ ಹೆದರಿಕೆಯೆ ನನಗೆ? " ಎಂದು ಮುಂದಕ್ಕೆ ಬಂದ. ಸರೋಜಿನಿ ಹಿಂದಕ್ಕೆ ಸರಿದು,

"ದೂರ ಸರಿಯಿರಿ....ಇಲ್ಲವಾದರೆ...." ಎಂದು ತಡೆದಳು.

"ಏನು ಮಾಡುವ ಹಾಗಿದ್ದೀಯೆ?"

"ನಾನು ಏನೂ ಮಾಡವುದು ಸಾಧ್ಯವಿಲ್ಲ ಎಂದೇ ಈ ಜೋರೇನು ?"

"ಜೋರು ಇಲ್ಲ, ಏನೂ ಇಲ್ಲ....ನಾನು ಹೇಳಿದ ಹಾಗೆ ನೀನು ಕೇಳಿದರೆ ಎಲ್ಲವೂ ಸರಿಯಾಗುತ್ತದೆ."

"ಏನದು ನೀವು ಹೇಳುವುದು?" ಎಂದು ರೊಚ್ಚಿನಿಂದ ಕೇಳಿದಳು.

"ಏನು ಮಾಡುವುದು ಹೇಳಲೆ....ಎಂದು ಇನ್ನೂ ಮುಂದಕ್ಕೆ ಸರಿದ. ಬಾಯಿಂದ ದುರ್ವಾಸನೆ ಅಸಹ್ಯವಾಗಿ ಬರುತ್ತಿತ್ತು.

"ನೀವು ಏನೂ ಹೇಳುವ ಕಾರಣವಿಲ್ಲ....ದೂರ ಸರಿಯಿರಿ ಮೊದಲು."

"ಸರಿಯುವುದಿಲ್ಲ...."

"ಇಲ್ಲದಿದ್ದರೆ ನಾನೀಗ ಚೀರಿ ಸುತ್ತಲಿನವರನ್ನು ಎಬ್ಬಿಸುತ್ತೇನೆ...."

"ಹಾ ಹಾ ಹಾ....! ಹುಚ್ಚು ಹಿಡಿದಿದೆ ನಿನಗೆ...." ಎಂದು ಕೈ ಹಿಡಿದು ಸೆಳೆದ....

"ಅಯ್ಯಯ್ಯೋ....!"

ಆ ಚೀತ್ಕಾರಕ್ಕೆ ಗೌಡನೂ ತುಸು ಬೆದರಿದ. ಆದರೆ ಸುತ್ತಲಿಂದ ಪ್ರತಿಧ್ವನಿಯ ಹೊರತು ಯಾವ ಪ್ರತಿಕ್ರಿಯೆಯೂ ಬರಲಿಲ್ಲ. ಅರೆನಿಮಿಷದ ನಂತರದಲ್ಲಿ ದೂರದಿಂದ ಯಾರೋ ಗಟ್ಟಿಯಾಗಿ ನಗುತ್ತಿದ್ದುದು ಮಾತ್ರ ಕೇಳಬಂದಿತು. ಸರೋಜಿನಿ ಸರಿದು ಗೋಡೆಗಾತುಕೊಂಡು ನಿಂತಿದ್ದಳು. ಕಣ್ಣುಗಳು ಕಿಡಿಕಾರುತಿದ್ದವು. ಆದರೆ ಗೌಡನ ಕಣ್ಣುಗಳಲ್ಲಿ ಉನ್ಮಾದ

ತುಂಬಿ ಕುಣಿಯುತ್ತಿತು.

"ಹೀಗೆ ನೀನು ಸುಮ್ಮನೆ ಆರ್ಭಟ ಮಾಡಿದರೆ ಸರಿಯಾಗುವುದಿಲ್ಲ....!"

"ನನ್ನ ಹತ್ತಿರ ಬಂದರೆ ಜೀವ ತೆಗೆಯುತ್ತೇನೆ...."

"ನಿನಗೆ ಬೇಕಾಗಿದೆಯಲ್ಲವೆ ನಿನ್ನ ಜೀವ ?" ಎಂದ ಗೌಡ ಕಠೋರವಾಗಿ. ಆದರೆ ಸರೋಜಿನಿಗೆ ಯಾವುದರ ಪರಿವೆಯೋ ಉಳಿದಿರಲಿಲ್ಲ. ತನಗೆ ಇದಿರಾಗಿ ನಿಂತಿದ್ದ ಗೌಡನನ್ನು ನೂಕಿ ಹೊರಗೆ ಓಡಿಹೋಗಬಹುದೇ ಎಂಬ ಯೋಚನೆ ಸುಳಿದುಹೋಯಿತು. ಆಕೆ ಬಾಗಿಲ ಕಡೆಗೆ ನೋಡಿದ್ದರಿಂದ ಆಕೆಯ ಈ ಯೋಚನೆ ಗೌಡನಿಗೆ ಹೊಳೆದಿರಬೇಕು ಅವನಂದ :

"ಯಾಕೆ ನೀನು ಓಡಿಹೋಗಬೇಕೆನ್ನುತ್ತಿದ್ದಿಯೇನು ? ನೀನು ಎಲ್ಲಿಗೂ ಹೋಗುವುದು ಸಾಧ್ಯವಿಲ್ಲ !"

"ಸಾಧ್ಯವಿಲ್ಲವೇ ?" ಎಂದು ಆಕೆ ಬಾಗಿಲ ಕಡೆಗೆ ಧಾವಿಸಿದಳು. ಸರ್‍ರನೆ ಗೌಡ ಆಕೆಯ ಸೆರಗು ಹಿಡಿದು ಕೋಣೆಯ ಇನ್ನೊಂದು ಬದಿಯಲ್ಲಿ ಬಂದು ಬೀಳುವಂತೆ ಎಳೆದ. ಆಕೆ ಬೀಳುತ್ತಿರುವಾಗಲೇ ಬಾಗಿಲನ್ನು ಭದ್ರಪಡಿಸಿದ. ಸರೋಜಿನಿಗೆ ಮೈಮೇಲೆ ಎಚ್ಚರವಿದ್ದಂತಿರಲಿಲ್ಲ. ನೆಟ್ಟದೃಷ್ಟಿಯಿಂದ ಗೌಡನನ್ನೇ ದಿಟ್ಟಿಸುತ್ತಿದ್ದಳು. ಗೌಡನೆಂದ :

"ಇದೆಲ್ಲ ಬಗೆಹರಿಯದ ಮಾತು, ಇನ್ನು ಸುಮ್ಮನೆ...."

"ಬಗೆಹರಿಯುವುದಿಲ್ಲವೇಕೆ? ಬಗೆಹರಿಸಿಯೇ ಬಿಡುತ್ತೇನೆ...."

"ಏನದು ನೀನು ಬಗೆಹರಿಯಿಸುವುದು....? ಎಂದವನೇ ಸರೋಜಿನಿಯನ್ನು ಮತ್ತೆ ಎಳೆದ.

ಆವೇಗ-ಉದ್ವೇಗಗಳನ್ನು ಸಹಿಸಲಾಗದ್ದಕ್ಕೆ ಸರೋಜಿನಿಯ ಬಾಯಿಗೆ ದನಿಯೇ ಬರಲಿಲ್ಲ. ಗಂಟಲಲ್ಲಿ ದನಿ ಅಡಗಿದಂತೆ ಕೈಕಾಲುಗಳಲ್ಲಿಯ ಇದ್ದ ಬಿದ್ದ ಶಕ್ತಿಯೂ ಅಡಗಿತು. ಸರೋಜಿನಿಯನ್ನು ಎಳೆದುಕೊಂಡು ಆಕೆಯ ಬಾಯಿ ಮೇಲೆ ಗಟ್ಟಿಯಾಗಿ ಕೈಯಿಟ್ಟು ಕಠೋರನಾಗಿ ಹೇಳಿದ : "ಇನ್ನು ನೀನು ಸುಮ್ಮನಿರದಿದ್ದರೆ ನಿನ್ನನ್ನು ಹೀಗೆಯೇ ಕೊಂದುಹಾಕುತ್ತೇನೆ ! ತಿಳಿಯಿತೆ?" ಎಂದು. ಆತನ ಕಣ್ಣುಗಳಲ್ಲಿಯ ಕ್ರೌರ್ಯ ಆತ ತನ್ನ ಮಾತನ್ನು ನಡೆಯಿಸಬಹುದು ಎಂಬುದನ್ನು ಸಾರುತ್ತಿತ್ತು. ಆ ಕ್ರೌರ್ಯ ಆ ಉನ್ಮಾದ, ಆ ಶಕ್ತಿಯ ಎದುರು ಸರೋಜಿನಿಯ ಆಟ ಸಾಗಲಿಲ್ಲ.

# 13

ಮರುದಿನ ಮುಂಜಾನೆ ಒಂಬತ್ತು ಗಂಟೆಯಾಗಿ ಹೋದರೂ ಸರೋಜಿನಿ ಹಾಸಿಗೆಯಿಂದ ಏಳಲಿಲ್ಲ. ನಾಲ್ಕಾರು ಬಾರಿ ಗೌಡ ಎಬ್ಬಿಸಲು ಪ್ರಯತ್ನಿಸಿದ. ಒಮ್ಮೆಯಂತೂ ತೀರ ಹತ್ತಿರ ಕುಳಿತು ಅಲುಗಾಡಿಸಿದ. ಆಗ ಮಾತ್ರ ಸರೋಜಿನಿಗೆ ತಡೆಯಲಾಗದೆ ಆತನ ಕೈಯನ್ನು ಆಚೆಗೆ ನೂಕಿ ಕಣ್ಣು ಮುಚ್ಚಿಕೊಂಡಳು....ಎಚ್ಚರಾಗಿದ್ದರೂ ಏಳುವ ಮನಸ್ಸಿರಲಿಲ್ಲ. ಬೆಳಕು ನೋಡಲೂ ನಾಚಿಕೆಯಾಗುತ್ತಿತ್ತು. ಕಡೆಗೂ ಪಣ ಕಳೆದುಕೊಂಡ ನಿರಾಶೆ ಹೃದಯವನ್ನು ಕೊರೆಯುತ್ತಿತ್ತು....ಗೌಡ ಹತ್ತು ಗಂಟೆಯ ಸುಮಾರಿಗೆ ಆಸ್ಪತ್ರೆಗೆ ಹೋಗಿ ಒಂದೆರಡು ಗಂಟೆಗಳಲ್ಲಿ ಹಿಂತಿರುಗಿದ. ಆತ ಒಳ್ಳೆ ಉಲ್ಲಾಸ ದಲ್ಲಿದ್ದಂತ್ತಿತ್ತು. ಆತ ಹೊರಗಡೆ ಹೋದಾಗ ಸರೋಜಿನಿ ಎದ್ದು ಗ್ಯಾಲರಿ ಯಲ್ಲಿ ಬಂದು ನಿಂತಿದ್ದಳು. ಕೆಳಗಡೆ ಬೀದಿಯಲ್ಲಿಯ ಜನಸಂದಣಿ, ಗದ್ದಲ, ವಾಹನಗಳ ಓಡಾಟ ಎಲ್ಲಿಯೋ ಕನಸಿನಲ್ಲಿ ಕಾಣುತ್ತಿರುವ ದೃಶ್ಯದಂತೆ ಕಣ್ಣ ಮುಂದೆ ಸುಳಿಯುತ್ತಿತ್ತು. ಆದರೆ ಯಾವುದರ ಅರ್ಥವೂ ಆಗದಂತೆ ಮನಸ್ಸು ಬಧಿರವಾಗಿತ್ತು. ಯಾವ ಬಗೆಯ ಸಂವೇದನಾಶಕ್ತಿಯೂ ಆಕೆಯಲ್ಲಿ ಉಳಿ ದಂತೆ ಕಾಣುತ್ತಿರಲಿಲ್ಲ. ಇನ್ನು ಬದುಕಿ ಏನು ಎಂಬ ವೇದನೆಯೊಂದೇ ಬದು ಕನ್ನು ಕನಸನ್ನಾಗಿ ಮಾಡಿ ತೋರಿಸುತ್ತಿತ್ತು. ಅಲ್ಲಿ ನಿಂತಾಗಲೇ ಒಂದು ಯೋಚನೆ ಸುಳಿದುಹೋಗಿತ್ತು : ತಟ್ಟನೆ ಕೆಳಗಡೆ ಹಾರಿಕೊಂಡುಬಿಟ್ಟರೆ ? ಹಾಗೆ ಹಾರಿಕೊಂಡು ಜೀವಕೊಟ್ಟು ಗೌಡನ ಮೇಲೆ ಸೇಡು ತೀರಿಸಿ ಕೊಂಡರೆ ? ಎಂದು ಆದರೆ ಮನಸ್ಸಾಗಲಿಲ್ಲ. ಏನು ಮಾಡಿದ ಹಾಗಾ ಯಿತು ? ಇಂಥ ಬೇಸರದ ಬದುಕಿಗಿಂತ ಸಾಯುವುದೇನು ಕೆಡಕು ? ಎನ್ನು ತ್ತಿತ್ತು. ಒಂದು ಮನಸ್ಸು ಆದರೆ ಇನ್ನೊಂದು ಮನಸ್ಸು ಹೇಳುತ್ತಿತ್ತು : "ಸಾಯುವುದೇನು ಸುಲಭವಾದೀತು. ಆದರೆ ಸತ್ತಮೇಲೆ ಬದುಕಲಾದೀತೆ ? ಇದೇನೋ ನಿನಗೆ ಕಷ್ಟ ಹೌದು. ಆದರೆ ಬದುಕನ್ನು ಮರೆಯಲಾಗದಿದ್ದರೆ ಬದುಕುವುದು ಸಾಧ್ಯವೇ ? ಇದನ್ನೆಲ್ಲ ಮರೆತುಬಿಡಬೇಕು...." ಎಂದು. ಸರೋಜಿನಿ ಕೇಳಿಕೊಳ್ಳುತ್ತಿದ್ದಳು : "ಇದನ್ನು ಮರೆಯುವುದು ಸಾಧ್ಯವೇ?" ಎಂದು. ಸಾಧ್ಯವಿಲ್ಲ ಎಂದು ಹೇಳುತ್ತಿರುವಂತೆ ಹೊರಗಿನಿಂದ ಗೌಡ ಬಂದಿದ್ದ.

ಯೋಚಿಸಿ ಬೇಸರಪಟ್ಟು ಮತ್ತೆ ಬಂದು ಹಾಸಿಗೆಯಲ್ಲಿ ಬಿದ್ದುಕೊಂಡಳು. ದೇಹ-ಮನಸ್ಸುಗಳೆರಡೂ ಸೋತುಹೋಗಿದ್ದವು. ಗೌಡ ಎಷ್ಟು ಪರಿಯಿಂದ ಮನವೊಲಿಸಿದರೂ ಆಕೆ ಏಳಲಿಲ್ಲ, ಊಟ ಮಾಡಲಿಲ್ಲ.

"ಏನು ಹೀಗೆ ಮಾಡಿದರೆ, ಸುತ್ತಲಿನವರು ಏನೆಂದಾರು ?"

ಸರೋಜಿನಿ ಮಾತನಾಡಲಿಲ್ಲ. ಏನಾದರೂ ಮಾಡಿ ಸರೋಜಿನಿಯನ್ನು ಮಾತನಾಡುವಂತೆ ಮಾಡಬೇಕೆನ್ನುವುದು ಗೌಡನ ಹಟ. ಕೊನೆಗೆ ಕೇಳಿದ :

"ಮಧ್ಯಾಹ್ನ ಆಸ್ಪತ್ರೆಗೆ ಬರುವಿಯಲ್ಲವೇನು ?"

ಸರೋಜಿನಿ ಮೋರೆ ತಿರುವಲಿಲ್ಲ, ಬಾಯಿ ತೆರೆಯಲಿಲ್ಲ. ಗೌಡ ಮತ್ತೆ ಸಮೀಪಕ್ಕೆ ಬಂದು,

"ಏನು? ಬರುತ್ತೀಯಲ್ಲವೇನು?" ಎಂದು ಭುಜ ತಟ್ಟಿದ.

"ನಾನು ಬರುವುದಿಲ್ಲ !"

"ನಾನಾಗಲೇ ಹೋಗಿ ಬಂದೆ. ಮಧ್ಯಾಹ್ನ ನಿನ್ನನ್ನು ಕರೆದುಕೊಂಡು ಬಾ ಎಂದಳು, ನಿನ್ನ ತಾಯಿ !"

"ನಾನು ಬರುವುದಿಲ್ಲ ಎಂದು ಹೇಳಿರಿ ಆಕೆಗೆ !"

ಇಷ್ಟು ಖಂಡಿತವಾಗಿ ತಾನು ಬರುವುದಿಲ್ಲ ಎಂದು ಹೇಳಲಿಕ್ಕೆ ಸರೋಜಿನಿಗೆ ತಾಯಿಯ ಬಗೆಯಲ್ಲಿಯ ತಿರಸ್ಕಾರ—ದ್ವೇಷವಾಗಿ ಬೆಳೆಯುತ್ತಿದ್ದ ಅಸಹನೆ—ಮಾತ್ರ ಕಾರಣವಾಗಿರಲಿಲ್ಲ. ಸುಟ್ಟ ಆಸೆಗಳ ಬೂದಿಯಲ್ಲಿಯೇ ಇನ್ನೂ ಆಸೆಯನ್ನು ಕಾಣುತ್ತಿದ್ದಳು. ಮಧ್ಯಾಹ್ನ ಮಾಧವ ಬಂದರೆ ? ಎಂಬುದೇ ಆ ಆಸೆ. ಒಮ್ಮೊಮ್ಮೆ ಇನ್ನುಮೇಲೆ ಮಾಧವ ಬಂದರೇನು, ಬಾರದಿದ್ದರೇನೆಂದೂ ಯೋಚಿಸುತ್ತಿದ್ದಳು. ಆದರೆ ಒಂದು ದಿವಸದ ನರಕದ ಅನುಭವವೇ ಆಕೆಯನ್ನು ಮಾಧವನಿಗಾಗಿ ಹಾತೊರೆಯುವಂತೆ ಮಾಡಿತ್ತು. ಇನ್ನೇನನ್ನು ಮಾಡದಿದ್ದರೂ ಆತ ತನ್ನ ದುಃಖಕ್ಕೆ ಕಿವಿಗೊಟ್ಟು ಸಹಾನುಭೂತಿಯನ್ನಾದರೂ ತೋರಿಸಿಯಾನು. ಹೃದಯದಲ್ಲಿಯ ತನ್ನ ದುಃಖವನ್ನು ತೋಡಿಕೊಳ್ಳಲಾದರು ಆದೀತೆಂಬ ಆಸೆಯಲ್ಲಿ ಇಡೀ ದಿವಸ ಆತನಿಗಾಗಿ ಕಾದಳು—ಹಸಿದ ಹೊಟ್ಟೆ, ಕಂಗಾಲಾದ ಹೃದಯ, ಸೋತ ದೇಹ, ಸುಟ್ಟುಹೋದ ಮನಸ್ಸು—ಎಲ್ಲವೂ ಆತನಿಗಾಗಿ ಕಾದು ನಿಂತಿದ್ದವು. ಆದರೆ ಮಾಧವ ಬರಲಿಲ್ಲ !

ಸಾಯಂಕಾಲ ಆರೂವರೆಯಾಗಿ ಹೋದರೂ ಮಾಧವ ಬರಲಿಲ್ಲ. ಸರೋಜಿನಿ ತೀರ ಹತಾಶಳಾದಳು. ಹಿಂದಿನ ರಾತ್ರಿಯ ನೆನಹು ಹೃದಯವನ್ನು ನಡುಗಿಸಿತು. ಮಧ್ಯಾಹ್ನ ಗೌಡ ಆಸ್ಪತ್ರೆಗೆ ಹೋಗೋಣವೆಂದಿದ್ದ. ಆಗಲೇ ಹೋಗಿದ್ದರೆ ಚೆನ್ನಾಗಿತು. ಎನಿಸಿತು. ಇನ್ನು ಏನಾದರೂ ಯುಕ್ತಿ ಹೂಡಿ ಅಲ್ಲಿಂದ ಹೊರಡಬೇಕೆಂದು ಹಂಚಿಕೆಹಾಕತೊಡಗಿದಳು. ಹೊರಗಡೆ ದೀಪಗಳು ಹತ್ತಿಕೊಳ್ಳತೊಡಗಿದ್ದವು. ಆಚೆಯ ಕೋಣೆಯಿಂದ ಗೌಡ ಬಂದು, ಸಮಾಧಾನದ

ದನಿಯಲ್ಲಿ ಹೇಳಿದ :

"ಒಂದಿಷ್ಟು ಚಹವನ್ನಾದರೂ ತೆಗೆದುಕೊಳ್ಳಬಾರದೆ....? ಏನು ಹೀಗೆಲ್ಲ ಮಾಡಿದರೆ ?"

"ಎಲ್ಲಿದೆ ಚಹ?" ಎಂದಳು ಸರೋಜಿನಿ, ಹಂಚಿಕೆಗೆ ಪೂರ್ವಪೀಠಿಕೆಯಾಗಿ.

"ಹಾ....ಹೀಗೆ ಬಾ.. ಸುಮ್ಮನೆ ಏನು ? ಹಾಗೆ ಉಪವಾಸ ಬಿದ್ದುಕೊಂಡರೆ ಏನು ಮಾಡಿದಹಾಗಾಯಿತು ?"

ಎಂದು ಎದ್ದು ಹೊರಗೆ ಹೋಗಿ ಐದು ನಿಮಿಷಗಳಲ್ಲಿಯೆ ಚಹ ತಿಂಡಿ ತೆಗೆದುಕೊಂಡು ಬಂದ. ಚಹ ಕುಡಿದಾದಮೇಲೆ ಸರೋಜಿನಿ ಒಂದು ಮಾತನ್ನೂ ಆಡದೆ, ಮೊರೆ ತೊಳೆದುಕೊಂಡು ಬಂದಳು.

"ಹುಂ....ಈಗ ಹೋಗುವುದ್ದೇ ಇನ್ನು ?" ಎಂದು ಗೌಡನೇ ಪ್ರಸ್ತಾಪಿಸಿದ ಅನುಕೂಲವಾಗಿ.

"ಎಲ್ಲಿಗೆ ಹೋಗುವುದು ?"

"ಎಲ್ಲಿಗೇನು ? ಬೇಕಾದಲ್ಲಿಗೆ....ನೀನೆಲ್ಲಿ ಹೋಗುವುದೆನ್ನುತ್ತೀಯೋ ಅಲ್ಲಿಗೆ !" ಎಂದು ಗೌಡ ನಕ್ಕ. ಸರೋಜಿನಿ ತನ್ನ ಕೂಡ ಮಾತನಾಡುತ್ತಿರುವುದೇ ಹೆಚ್ಚು, ಎನ್ನುವಂತೆ ಇತ್ತು ಆತನ ಆಗಿನ ವೃತ್ತಿ.

"ಆಸ್ಪತ್ರೆಗೆ ಹೋಗುವುದೆಂದು ಅಂದಿರಲಿಲ್ಲವೇನು?"

"ಹೌದು. ಆದರೆ ನೀನು ಬರುವುದಿಲ್ಲ ಎಂದೆ."

"ಹುಂ....ಅಂದೆ...."

"ಈಗ ಹೋಗೋಣ ಅನ್ನುತ್ತೀಯಾ ?"

"ಹುಂ...."

"ನಡೆ ಹಾಗಾದರೆ...."

"ಹೋಗುವುದು ಆಸ್ಪತ್ರೆಗೇ ಅಲ್ಲವೇನು?"

"ಹೌದು. ಮತ್ತೆಲ್ಲಿಗೆ ?"

"ಯಾರಿಗೆ ಗೊತ್ತು? ನೀವು ನನ್ನನ್ನು ಆಸ್ಪತ್ರೆಗೆ ಒಯ್ದು ಮುಟ್ಟಿಸಿದಾಗಲೆ ಆ ಮಾತು...."

• "ಅಷ್ಟು ವಿಶ್ವಾಸವಿಲ್ಲವೆ, ಸರೋಜಿನಿ?"

"ಹುಂ ! ವಿಶ್ವಾಸ...."

ಆ ಒಂದು ಉದ್ಗಾರದಲ್ಲಿ ಸರೋಜಿನಿಯಲ್ಲಿಯ ತಿರಸ್ಕಾರ, ಅವಿಶ್ವಾಸ, ದ್ವೇಷ ಎಲ್ಲವೂ ಹುದುಗಿಕೊಂಡಿದ್ದುದು ತಿಳಿಯುವಂತಿತ್ತು. ಗೌಡನಿಗೂ

ಆ ಮಾತು ತಿಳಿಯದಿರಲಿಲ್ಲ.

ಸರೋಜಿನಿಯೊಡನೆ ಗೌಡ ಆಸ್ಪತ್ರೆಗೆ ಬಂದಾಗ ಮೂವರು ಡಾಕ್ಟರರೂ ರಂಗಸಾನಿಯನ್ನು ಮತ್ತೆ ಚಿಕಿತ್ಸೆ ಮಾಡುತ್ತಿದ್ದರು. ಅವರೆಲ್ಲರೂ ಯಾವುದೊ ಒಂದು ತೀರ್ಮಾನಕ್ಕೆ ಬಂದಂತಿದ್ದರು. ಆದರೆ ಈ ಕೇಸಿನಲ್ಲಿ ಅವನ್ನು ಬದುಕಿಸುವುದೊಂದೇ ಅವರಿಗೆ ಕೆಲಸವಾಗಿದ್ದಂತೆ ತೋರಲಿಲ್ಲ. ಅವರ ಮಾತಿನ ಮೇಲಿಂದ ಅವರೆಲ್ಲರೂ ರಂಗಸಾನಿಯನ್ನು ವೈದ್ಯಕೀಯ ಅಭ್ಯಾಸಕ್ಕೆ ಒಂದು ಮಾದರಿಯಾದ ಕೇಸು ಎಂಬ ದೃಷ್ಟಿಯಿಂದಲೇ ಆಕೆಯನ್ನು ಅವರು ಪರೀಕ್ಷಿಸುತ್ತಿರುವಂತಿತ್ತು. ಆಕೆಯಿಂದ ಮುಂಜಾನೆಯೇ ತೆಗೆದುಕೊಂಡುಹೋದ ರಕ್ತದ ಪರೀಕ್ಷೆಯನ್ನು ಮಾಡಿ ನೋಡಿದ್ದರಂತೆ. ಒಟ್ಟಿನಲ್ಲಿ ಗೌಡನಿಗೆ ಅರ್ಥವಾಗದ ಯಾವುದೋ ಒಂದು ವಿಷಯ ಅವರ ಕುತೂಹಲ ಬುದ್ಧಿಯನ್ನು ಕೆರಳಿಸಿತ್ತು. ಗೌಡ ಬಂದು ಸಮೀಪದಲ್ಲಿಯೇ ನಿಂತುದನ್ನು ನೋಡಿ ಅವರ ಮುಖ್ಯಸ್ಥ ಕೇಳಿದ :

"ನೀವು ಈ ಕೇಸಿಗೆ ಗಾರ್ಡಿಯನ್ ಏನು ?"

"ಹೌದು...."

"ನಮಗೆ ಒಂದಿಷ್ಟು 'ಮಾಹಿತಿ' ಬೇಕಾಗಿದೆ....ಹೇಳಬಲ್ಲಿರಾ ?"

"ಏನು ?"

ಮುಖ್ಯಸ್ಥ ಡಾಕ್ಟರರು ಒಮ್ಮೆ ರಂಗಸಾನಿ, ಒಮ್ಮೆ ಸರೋಜಿನಿಯ ಕಡೆಗೆ ಸೂಕ್ಷ್ಮವಾಗಿ ನೋಡಿ,

"ನಮ್ಮ ರೂಮಿಗೆಯೇ ಬಂದುಬಿಡಿರಿ...." ಎಂದ.

ಗೌಡ ಮೂವರು ಡಾಕ್ಟರರನ್ನು ಹಿಂಬಾಲಿಸಿ ಹೋದ. ಕೋಣೆಯಲ್ಲಿ ಕುಳಿತುಕೊಂಡು ಮುಖ್ಯಸ್ಥ ಕೇಳಿದ :

"ಈ ಪೇಶಂಟು ನಿಮಗೇನಾಗಬೇಕು ?"

"ಅವರು ನನಗೆ...." ಎಂದು ಗೌಡ ತಡವರಿಸತೊಡಗಿದ. ಅದನ್ನು ನೋಡಿ, ಆವನ ಅನುಮಾನವನ್ನು ತಿಳಿದೇ,

"ಏನಿದ್ದುದನ್ನು ನಮಗೆ ನೀವು ಹೇಳಲೇ ಬೇಕು....ಮತ್ತೇನಿಲ್ಲ.... ವೈದ್ಯಕೀಯದ ದೃಷ್ಟಿಯಿಂದ ನಮಗೆ ಕೆಲವು ವಿಷಯವನ್ನು ತಿಳಿಯಬೇಕಾಗಿದೆ. ಅದಕ್ಕಾಗಿ ಪೇಶಂಟಿನ ಮೊದಲಿನ ಹಿಸ್ಟರೀ ಬೇಕು, ಅಷ್ಟೆ" ಎಂದ ಮೊದಲಿನವ.

"ಇವರು ನಿಮಗೆ..."ಎಂದು ಎರಡನೆಯವ ದಾರಿ ಕಡಿಯತೊಡಗಿದ.

"ನನಗೆ ಇವರು ಏನೂ ಆಗಬೇಕಿಲ್ಲ...."

"ಅಂದರೆ ?"

"ಏನೋ ಮೊದಲಿನಿಂದ ಪರಿಚಯ, ಋಣಾನುಬಂಧ. ಅವರಿಗೂ ಬೇರೆ ಯಾರೂ ಇಲ್ಲ...."

"ನನಗೇನೂ ಅರ್ಥವಾಗುವುದಿಲ್ಲ, ನಿಮ್ಮ ಮಾತು...."

"ಇವರಿಗೆ ಮನೆಯವರು ಯಾರೂ ಇಲ್ಲವೆ ?"

"ಒಬ್ಬ ಮಗಳಿದ್ದಾಳೆ. ಆಗಲೆ ಅವರ ಹತ್ತಿರ ಇದ್ದಳಲ್ಲ...."

"ಗಂಡ ?"

"ಅವರು ಮದುವೆಯಾಗಿಲ್ಲ....! ಅವರು...." ಎಂದು ಮತ್ತೆ ಗೌಡ ತಡವರಿಸಿದ.

"ಅಂದರೆ ಅವರು....ವೇಶ್ಯೆಯೆ?" ಎಂದ ಮೊದಲಿನವ,ಒಟ್ಟಿನಲ್ಲಿ ಸಂದರ್ಭ ವನ್ನು ತಿಳಿದು.

"ಹೌದು...."

"ಆಯ್ ಸೀ....ಆಯ್ ಸೀ...." ತೊಡಕು ಅರ್ಥ ಬಿಟ್ಟಿತು ಎನ್ನುತ್ತಿರು ವಂತ್ತಿತ್ತು ಅವರ ಮಾತಿನ ರೀತಿ. ಉಳಿದ ಇಬ್ಬರು ಸಹೋದ್ಯೋಗಿಗಳನ್ನು ಕುರಿತು ಹೇಳಿದರು : "ನನಗಾಗಲೆ ಹಾಗೆ ಅನಿಸಿತು....ಅನಿಸುವುದೇನು....? ನನಗೆ ಪೂರ್ತಿ ವಿಶ್ವಾಸವಾಗಿಬಿಟ್ಟಿತ್ತು....ಹೀಗೇನಾದರೂ ಇರಲೇಬೇಕು ಎಂದು...."

"ಎಷ್ಟು ದಿವಸದಿಂದ ಇವರು ಈ ವೃತ್ತಿಯಲ್ಲಿದ್ದಾರೆ, ಗೊತ್ತೇ ?" ಎಂದು ಎರಡನೆಯವ.

"ಎಷ್ಟು ದಿವಸವೇನು ? ಅವರ ಮನೆಯ ಪರಂಪರೆ ಅದು...."

"ಅಂದರೆ ಇವರ ತಾಯಿ ?"

"ನನಗೆ ಗೊತ್ತಿದ್ದ ಮಟ್ಟಿಗೆ ಮೂರು ನಾಲ್ಕು ತಲೆಮಾರಾಗಿರಬೇಕು."

"ಅಂದರೆ—ದಯವಿಟ್ಟು ಕ್ಷಮಿಸಿ ! ನಮಗೆ ಅದು ತಿಳಿಯಲೇಬೇಕು. ಇವರು ಯಾರ ಒಬ್ಬರ ಹತ್ತಿರವಿದ್ದರೊ....ಅಥವಾ "

"ಮೊದಲು ಒಬ್ಬರ ಹತ್ತಿರ ಇದ್ದರು. ಆದರೆ ಹಿಂದುಗಡೆ "

"ದ್ಯಾಟ್ಸ್ ಆಲ್‌ರಾಯಿಟ್ "

"ಹಾಗಾದರೆ ಇವರ ಮಗಳು ಅಂತಿದ್ದೀರಲ್ಲ ಅವರನ್ನು ಒಂದಿಷ್ಟು ಪರೀಕ್ಷೆ ಮಾಡಬೇಕೆನ್ನುತ್ತೇವೆ "ನಿಮ್ಮದೇನೂ ಅಭ್ಯಂತರವಿಲ್ಲವಷ್ಟೆ "

"ಪರೀಕ್ಷೆ ಅಂದರೆ ?"

"ವಿಶೇಷವೇನೂ ಇಲ್ಲ....ಜಸ್ಟ್ ಬ್ಲಡ್ ಟೆಸ್ಟ್, ರಕ್ತ ಪರೀಕ್ಷೆ ಮಾತ್ರ."

"ಆಗಬಹುದು....ಅದಕ್ಕೇನು. ಆದರೆ ಪೇಶಂಟನ ಬೇನೆ ಡೈಗ್ನೋಸ್ ಆಯಿತೆ?"

"ಅದಕ್ಕೆಂದೇ ಇದೆಲ್ಲ....ನಿಮಗೆ ತೊಂದರೆ ಕೊಟ್ಟಿದ್ದೇನೆ...."

"ತೊಂದರೆ ಏನೂ ಇಲ್ಲ....ನಾಳೆಗೆ ಗೊತ್ತಾಗಬಹುದಲ್ಲವೆ ರಿಜಲ್ಟು ?''

"ಓ. ಎಸ್....ನಾಳೆ ಮಧ್ಯಾಹ್ನ....ಹುಂ....ನಾಳೆ ಮಧ್ಯಾಹ್ನ ನಾಲ್ಕು ಗಂಟೆಗೆ ಬನ್ನಿರಿ...."

"ಅಂದರೆ ಏನಾದರೂ ಸೀರಿಯಸ್ ಇದೆ ಏನು ?''

"ಸೀರಿಯಸ್ ಏದು....ಹುಂ, ಬೇನೆಯನ್ನು ಬಹಳ ದಿವಸ ದುರ್ಲಕ್ಷ್ಯ ಮಾಡಿದ ಹಾಗಿದೆ....ಅದೇ ತೊಂದರೆ ನೋಡಬೇಕು....ಆದರೂ....''

"ಹಾಗಾದರೆ ನಾಳೆ ಮಧ್ಯಾಹ್ನ ಬರಲಾ ?''

"ಓಕೆ....!'' ಎಂದು ಮೂವರೂ ಬೇರೆ ಕೆಲಸದಲ್ಲಿ ತೊಡಗಿದರು.

ಗೌಡ ಹೊರಬಿದ್ದು ಬಂದ. ಅದೇಕೋ ತಿಳಿಯಲಿಲ್ಲ ಗೌಡನಿಗೆ—ಮೂವರೂ ಡಾಕ್ಟರರು ತಮ್ಮತಮ್ಮಷ್ಟಕ್ಕೆಯೆ ಮಾತನಾಡಿಕೊಂಡು ನಗುತ್ತಿದ್ದರು. ಮೊತ್ತಮೊದಲನೆಯ ಬಾರಿ ಗೌಡನಿಗೆ ನಾಚಿಕೆಯಿಂದ ಮುಖ ತಗ್ಗಿಸುವಂತೆ ಆಯಿತು. ಅದರ ಪರಿಣಾಮವೆಂದರೆ ಸರೋಜಿನಿಗೆ ಸುಲಭವಾಗಿ ಆಸ್ಪತ್ರೆಯಲ್ಲಿಯೇ ಉಳಿಯಲನುಕೂಲವಾಯಿತು. ವಸತಿಗೃಹದ ಕಡೆಗೆ ಹೊರಟಾಗ ಗೌಡ ಡಾಕ್ಟರರು ಆಡಿದ ಮಾತುಗಳನ್ನು, ಅವರ ನಗೆಯನ್ನು, ಆ ನಗೆಯ ಹಿಂದೆ ಅಡಕವಾದ ಸೂಚಿತ ಪರಿಹಾಸವನ್ನು ನೆನೆಯುತ್ತಿದ್ದ. ಅದೇನೋ ವಿಚಿತ್ರವಾಗಿ ಅವನಲ್ಲಿ ಆ ಕ್ಷಣಕ್ಕೆ ವಿವೇಕದ ಒಂದು ಪರಿ ಜಾಗೃತವಾದ ಹಾಗಿತ್ತು. ತಾನಿಷ್ಟರವಟ್ಟಿಗೆ ಬಂದು ಹೀಗೆ ಮೂರುನಾಲ್ಕುಜನ ಸುಶಿಕ್ಷಿತ ಸಭ್ಯಗೃಹಸ್ಥರ ಎಣಿಕೆಯಲ್ಲಿ ಇಳಿದುಹೋದಂತಾಯಿತಲ್ಲಾ ಎಂದು ಎಲ್ಲಿಯೋ ಒಂದೆಡೆ ಹೃದಯದಲ್ಲಿ ಅಳುಕು ಹುಟ್ಟಿಕೊಂಡಿತ್ತು. ಹೀಗೆ ಯೋಚಿಸುತ್ತಿದ್ದಾಗ ಮೊದಲ ದಿನ ಸರೋಜಿನಿಯ ಮೇಲೆ ತಾನು ಸಂಪಾದಿಸಿದ ಗೆಲುವು ಎಂಥ ಹೀನಾಯದ್ದು ಎಂದೂ ತೋರಿತು. ಮಡದಿ ಮಕ್ಕಳ ನೆನಹೂ ಬಂದಿತು. ಆದರೆ ಇದೆಲ್ಲವೂ ಒಂದು ಕ್ಷಣ ಮಾತ್ರ. ವಸತಿಗೃಹ ಮುಟ್ಟಿ ಮಾಲೀಕನೆದುರು ಮತ್ತೆ ಹರಟುತ್ತ ಕುಳಿತಾಗ ಅವರಿಬ್ಬರ ಮಾತಿನಿಂದ ಏಳುತ್ತಿದ್ದ ನಗುವಿನಲ್ಲಿ ಆ ವಿಚಾರ, ಆ ಮೋಹ, ಎಲ್ಲಿಯೋ ತೇಲಿಹೋದವು.

## 14

ಮಾಧವ ಮುಂಬಯಿಗೆ ಬಂದು ನಾಲ್ಕು ದಿನವಾದರೂ ಸರೋಜಿನಿಯಿಂದ ಯಾವ ಕಾಗದವೂ ಬಾರದಿದ್ದುದಕ್ಕಾಗಿ ಕಳವಳಪಡತೊಡಗಿದ್ದ. ಖಂಡಿತ ವಾಗಿ ಬಂದ ಕೂಡಲೆ ವಿಳಾಸವನ್ನು ತಿಳಿಸುತ್ತೇನೆಂದು ಹೇಳಿದವಳು ಬರೆಯು ವುದನ್ನು ಮರೆತಿರುವುದು ಸಾಧ್ಯವೇ ಇರಲಿಲ್ಲ. ಹಾಗಾದರೆ ಅವರು ಊರಿಗೆ ಬರುವುದೇ ನಿಂತುಹೋಯಿತೇ....? ಅಥವಾ ಇನ್ನೇನಾದರೂ ಆಗಿದ್ದರೆ ? ತಾಯಿಯ ಸ್ಥಿತಿ ತೀರಾ ಕೆಟ್ಟಿದೆ ಎಂದು ಹೇಳಿದ್ದಳು. ಹಾಗೇನಾದರೂ ಆಗಿ ಸರೋಜಿನಿ ಅಲ್ಲಿಯೇ ಉಳಿದಿದ್ದರೆ? ಏನಿದ್ದರೂ ಆತನಿಗೆ ಸರೋಜಿನಿಯ ವಿಷಯ ಯೋಚನೆಗೊಂದು ಮಾರ್ಗವಾಗುತ್ತಿತ್ತೇ ಹೊರತು ನಿಶ್ಚಿತವಾಗಿ ಯಾವುದನ್ನೂ ಹೇಳಲಾಗುತ್ತಿರಲಿಲ್ಲ. ಅಲ್ಲದೆ ಸರೋಜಿನಿಯಿಂದ ವಿಳಾಸದ ಕಾಗದ ಬರದ ಹೊರತು ತಾನಾದರೂ ಏನನ್ನೂ ಮಾಡುವಂತಿರಲಿಲ್ಲ.

ವಯಸ್ಸಿನಿಂದ ಹತ್ತು ವರುಷ ಹಿರಿಯನಾದರೂ ಗೆಳೆಯನಿಗಿಂತಲೂ ಗೆಳೆಯನಾಗಿದ್ದ ಶ್ರೀಧರನ ಹತ್ತಿರ ಬಂದ ಕೂಡಲೆ ಮಾಧವ ಕೇಳಿದ್ದ : ತನ ಗಾಗಿ ಏನಾದರೂ ಕಾಗದ ತಾನು ಬರುವ ಮೊದಲೇ ಬಂದಿದೆಯೆ ? ಎಂದು. ಕಳೆದ ಎರಡು ಮೂರು ದಿವಸಗಳಲ್ಲಿ ನಿತ್ಯ ನಾಲ್ಕಾರು ಬಾರಿಯಾದರೂ ಬರ ಬೇಕಾಗಿದ್ದ ಕಾಗದದ ಬಗೆಯಲ್ಲಿ ಮಾಧವ ಗೆಳೆಯನನ್ನು ವಿಚಾರಿಸುತ್ತಲೇ ಇದ್ದುದರಿಂದ ಶ್ರೀಧರನಿಗೆ ತಡೆಯದಾಗಿ ಕೇಳಿದ :

"ಅಂಥ ಯಾವ ಪತ್ರವಪ್ಪಾ ಅದು ನಿನಗೆ ಬರಬೇಕಾದದ್ದು ಮೂರು ದಿನವೂ ನನ್ನನ್ನು ಕಾಡುತ್ತಿದ್ದೀಯಾ...."

"ಇದೆ—ಹೀಗೇಯೇ ಒಂದು ಬರಬೇಕಾಗಿತ್ತು ಈಗಾಗಲೆ...."

"ಯಾರದು ಹೇಳಬಾರದೆ ? ಅಂದರೆ ನೋಡುವ...."

"ಅಂದರೆ ಈಗಾಗಲೇ ಬಂದದ್ದು ಬಚ್ಚಿಟ್ಟದ್ದೀಯ ನೀನು ?"

"ಇಲ್ಲ ಮಹಾರಾಯ, ನಾನು ಯಾತಕ್ಕೆ ಬಚ್ಚಿಡಲಿ ?" ಎಂದು ಗಟ್ಟಿ ಯಾಗಿ ನಕ್ಕ. ಶ್ರೀಧರ ನಕ್ಕದ್ದು ಮಾಧವನ ಕಾತರವಾದ ಆತುರವನ್ನು ನೋಡಿ. ಆದರೆ ಮಾಧವನಿಗೆ ಮಾತ್ರ ಶ್ರೀಧರ ತನ್ನನ್ನು ಪೀಡಿಸಲಿಕ್ಕೆಂದೇ ಹೀಗೆ ಮಾಡುತ್ತಿದ್ದಾನೆಂದು ಭಾಸವಾಯಿತು.

"ಕೊಡಬಾರದೆ, ಬಂದಿದ್ದರೆ ?"

"ಬಂದಿಲ್ಲ ಮಹಾರಾಯ...."

"ಸುಮ್ಮನೆ ಚೇಷ್ಟೆ ಮಾಡಬೇಡ, ಶ್ರೀಧರಾ....ಅದಕ್ಕಾಗಿ ನಾನು ಎಷ್ಟು

ದಾರಿ ಕಾಯುತ್ತಿದ್ದೇನೆ...."

"ಹೆಂಡತಿಯ ಪತ್ರಕ್ಕಾಗಿ ಕೂಡ ನಾನಿಷ್ಟು ದಾರಿ ಕಾಯ್ದಿಲ್ಲ.... ನಿನಗಂತೂ ಇನ್ನೂ ಮದುವೆಯಾಗಿಲ್ಲ....ಅಂದಮೇಲೆ ಅಂಥ ಯಾರದ್ದಪ್ಪಾ ಆ ಪತ್ರ....?"

"ಯಾರದೂ ಅಲ್ಲ. ನನ್ನ ಗೆಳೆಯನೊಬ್ಬ ಇಲ್ಲಿಗೆ ಬಂದಿದ್ದಾನೆ. ತನ್ನ ಇಲ್ಲಿಯ ವಿಳಾಸ ತಿಳಿಸುತ್ತೇನೆ ಎಂದಿದ್ದ...."

"ನೀನು ಇಲ್ಲಿಯ ನನ್ನ ವಿಳಾಸ ಕೊಟ್ಟಿದ್ದೀಯಾ ?"

"ಹುಂ....ಕೊಟ್ಟಿದ್ದೇನೆ...."

"ಆಯ್ತಲ್ಲ ಹಾಗಾದರೆ—ಆತ ಪತ್ರ ಯಾತಕ್ಕೆ ಬರೆಯಬೇಕು? ತಾನಾಗಿಯೇ ಬಂದರೂ ಬರಬಹುದು ಇಲ್ಲಿಗೆ...."

"ತಾನಾಗಿಯೇ ಬರುವಹಾಗಿಲ್ಲ "

"ಯಾಕೆ? ನಮಗೆ ಅಷ್ಟು ಹೆದರಿದ್ದಾನೇನು ನಿನ್ನ ಗೆಳೆಯ ?"

"ಹಾಗೇನಿಲ್ಲ....ಆದರೂ...."

"ಅಥವಾ ನಿನ್ನ 'ಗೆಳೆಯಾ' ಸೀರೆ ಉಟ್ಟುಕೊಳ್ಳುವ ಗೆಳೆಯನೊ?" ಎಂದು ಗಟ್ಟಿಯಾಗಿ ನಕ್ಕ.

"ಹೇ ! ಹೆ...!" ಎಂದು ಮಾಧವ ಮೋರೆ ತಿರುವಿದ. ಆದರೆ ಅಷ್ಟರಲ್ಲಿ ಹೇಗೋ ಯೋಚನೆ ಹೊಳೆಯಿತು.

"ಅವನಿಗೆ ಈ ಊರು ಗೊತ್ತಿಲ್ಲ. ಇದೇ ಮೊದಲ ಸಲ ಇಲ್ಲಿಗೆ ಬಂದದ್ದು ಆತ!" ಎಂದ.

"ಏನೋ ನೀನು ಹೇಳುತ್ತಿದ್ದೀ—ನಾನು ಒಪ್ಪಿಕೊಳ್ಳುತ್ತಿದ್ದೇನೆ. ಆದರೆ ನನಗೇಕೋ ಬಾರಿ ಸಂಶಯ ನೋಡು .. ನಿನ್ನ ಈ ಆತ ನೂರಕ್ಕೆ ತೊಂಬತ್ತು ಪಾಲು ಆಕೆ ಇರಬೇಕು ಎಂದು !"

"ಆಯಿತು, ನಿನಗಂತೂ ಎನಾದರೂ ಒಂದು ಎಳೆ ಸಿಕ್ಕರೆ..."

"ಅಂತೂ ಎಳೆಯಾದರೂ ಇದೆ ಅನ್ನಬಾರದೆ ಹಾಗಾದರೆ ?"

"ಎಳೆ ಇಲ್ಲ, ಬೆಳೆ ಇಲ್ಲ."

"ಏನೂ ಇಲ್ಲ, ಅಹುದಲ್ಲವೆ ? ಹಾಗಾದರೆ ಆ ಪತ್ರ ಬರಲಿ. ಬಂದಾಗ ನಾನೇ ಅದನ್ನು ಮೊದಲು ಓದುವವ ! ಒಪ್ಪಿಗೆಯೆ ?"

"ಹುಂ....ಬರಲಿ....ಓ. ಎಸ್...."

ಆದರೆ ಪತ್ರ ಬಾರಲೇ ಇಲ್ಲ. ಪತ್ರ ಬಾರದಿದ್ದುದಕ್ಕೆ ಕಾರಣವಿಷ್ಟೆ :

ಸರೋಜಿನಿ ಪತ್ರ ಬರೆದು ಅಂಚೆಗೆ ಕಳುಹಿಸಲೆಂದು ಸೇವಕನಿಗೆ ಕೊಟ್ಟದ್ದನ್ನು ಆ ಸೇವಕ ಅದನ್ನೊಯ್ದು ಅಂಚೆಕಟ್ಟೆಗೆ ಹೋಗಬೇಕಿದ್ದ ಉಳಿದ ಪ್ರವಾಸಿಕರ ಪತ್ರಗಳೊಂದಿಗೆ ಮಾಲೀಕರ ಮೇಜಿನ ಮೇಲೆ ಇಟ್ಟದ್ದ. ಮಧ್ಯಾಹ್ನದ ಊಟದ ವೇಳೆಯ ಸುಮಾರಿಗೆ ಮಾಲೀಕನೊಡನೆ ಹರಟುತ್ತ ಕುಳಿತಾಗ ಮೇಜಿನ ಮೇಲಿದ್ದ ಪತ್ರಗಳನ್ನು ಗೌಡ ಒಂದೊಂದಾಗಿ ಕೈಯಾಡಿಸುತ್ತಿದ್ದ. ಏನೂ ಬರೆಯದೆ ಇದ್ದ ಬರೀ ಕಾರ್ಡೊಂದು ಅವನ ಲಕ್ಷ್ಯ ಸೆಳೆಯಿತು. ಹಿಮ್ಮಗ್ಗುಲಿನಲ್ಲಿ ಸರೋಜಿನಿ ವಸತಿಗೃಹದ ವಿಳಾಸವನ್ನು ಮಾತ್ರ ಬರೆದು 'ನಿನಗಾಗಿ ದಾರಿ ಕಾಯುತ್ತಿರುವ—ಸರೋಜ' ಎಂದು ರುಜುಹಾಕಿದ್ದಳು. ಹೊರಗಡೆಯಲ್ಲಿ ಬರೆದಿದ್ದ ವಿಳಾಸವನ್ನು ನೋಡಿದ—ಮಾಧವನದು! ತಟ್ಟನೆ ನೆನಪಾಯಿತು—ಸರೋಜಿನಿಯ ವಸತಿಗೃಹದ ಹತ್ತಿರ ಆ ದಿನ ಸಾಯಂಕಾಲ ಅವರಿಬ್ಬರೂ ಕೂಡಿಬರುತ್ತಿದ್ದುದು! 'ಓ! ಹೀಗಿದೆಯೋ ಕಾರಸ್ಥಾನ?' ಎಂದುಕೊಂಡು ಮಾಲೀಕನ ಕಣ್ಣು ತಪ್ಪಿಸಿ ಆ ಕಾರ್ಡನ್ನು ಜೇಬಿಗಿರಿಸಿದ್ದ. ಆ ಕ್ಷಣದಲ್ಲಿಯೆ ಸರೋಜಿನಿಯನ್ನು ಏನಾದರೂ ಸಾಯಂಕಾಲ ಮಣಿಸಿಯೇ ಬಿಡತಕ್ಕದ್ದು ಎಂಬ ದುಷ್ಟ ನಿರ್ಧಾರ ಮಾಡಿದ್ದ! ಅದರಂತೆಯೇ ನಲ್ಲನಿಗಾಗಿ ಕಾಯುತ್ತಿದ್ದ ನಲ್ಲೆಯನ್ನು ಕ್ರೂರತನದಿಂದ ನಡೆಸಿಕೊಂಡಿದ್ದ.

ಸಾಯಂಕಾಲ ಊಟಕ್ಕೆ ಕುಳಿತಾಗ ಶ್ರೀಧರ ಮಾತೆತ್ತಿದ:

"ಅಲ್ಲಪ್ಪಾ, ಇದೇನು, ಪರೀಕ್ಷೆಯಾದ ಕೂಡಲೆ ಹೀಗೆ ಓಡಿ ಬಂದುಬಿಟ್ಟೆ?"

"ಮತ್ತಿನ್ನೇನು ಮಾಡುವುದು?"

"ಕೆಲಸ ಹುಡುಕುವುದು ಅಷ್ಟು ಅಗತ್ಯವಿತ್ತೇ? ಅದೂ ನಿನಗೆ...."

"ಅಂದರೆ, ನನ್ನದೆಂದೇನು ವಿಶೇಷ....? ಎಂದಿಲ್ಲೊಂದು ದಿವಸ ಇಷ್ಟು ಮಾಡಬೇಕಾದದ್ದೇ...."

"ನಿನಗೇತಕ್ಕೋ ಕೆಲಸ....? ನಮ್ಮಂಥವರಿಗೊಂದು ನಿರ್ವಾಹವಿಲ್ಲ. ಈ ಊರಿಗೆ ಬಂದು ಸಿಕ್ಕುಬಿದ್ದಿದ್ದೇನೆ...."

"ನನಗೂ ನಿರ್ವಾಹವಿಲ್ಲ. ಅಂತೆಯೇ ಬಂದಿದ್ದೇನೆ "

"ಅಂತೂ ದುಡ್ಡು ಕೂಡಿಹಾಕಬೇಕು ಅನ್ನುವ ಬುದ್ಧಿ ಈಗಿನಿಂದಲೇ ಇಷ್ಟಾದರೆ "

"ಎಲ್ಲಿಯ ದುಡ್ಡೊ? ದುಡ್ಡು ಸಿಕ್ಕರಲ್ಲವೆ ಕೂಡಿಡುವುದು?"

"ಈಗ ಇದ್ದದ್ದು?"

"ಈಗೇನಿದೆ, ನನ್ನ ತಲೆ...."

"ತಲೆ ಇದೆ ಬಿಡು ನಿನಗೆ—ಆದರೆ ನಿನಗೆ ದುಡ್ಡಿಲ್ಲ ಎಂದರೆ ಯಾರು ನಂಬಬೇಕೋ, ಮಾಧವಾ ?"

"ನಿನಗೇನೋ ಭ್ರಮೆ, ಶ್ರೀಧರಾ ದುಡ್ಡಿದ್ದರೆ ಯಾತಕ್ಕೆ ಬರುತ್ತಿದ್ದೆ ಇಲ್ಲಿಯ ತನಕ ಧಾವಿಸಿ ?"

"ನೀನು ಏನೂ ಹೇಳು. ನಾನೊಂದು ಕೇಳಬೇಕಲ್ಲ....ಏನಾಯಿತು ನಿಮ್ಮ ಅಪ್ಪನ ದುಡ್ಡು ?" ಎಂದ ಶ್ರೀಧರ, ಅರ್ಧ ನಗುನಗುತ್ತಲೆ. ಆದರೆ ಮಾಧವ ಗಂಭೀರನಾದ, ಯಾವ ಉತ್ತರವನ್ನೂ ಹೇಳದೆ ಸುಮ್ಮನಾದ. ಶ್ರೀಧರನಿಗೆ ಪುಟುವು ಕೊಟ್ಟಂತಾಗಿ ಮುಂದುವರಿದ :

"ಯಾಕೆ, ಸುಮ್ಮನಾದಿ ? ನನಗೆ ಗೊತ್ತಿಲ್ಲವೆ ?"

"ನಿನಗೆ ಗೊತ್ತಿರಬಹುದು, ಶ್ರೀಧರಾ....ಆದರೆ ನಿನಗೆ ಗೊತ್ತಿಲ್ಲದ್ದೂ ಇದೆ...."

"ಏನು ? ನಿನ್ನ ಕಕ್ಕನ ಸಮಾಚಾರ ಅಹುದಲ್ಲವೆ ? ಆತ ಕೊಡುವುದಿಲ್ಲ ಅನ್ನುತ್ತಾನೇನು ?" ಹುಂ....ಅಂದರೂ ಅನ್ನುವ ಜಾತಿಯೇ....ಅಂತೂ ನಿಮ್ಮ ಕಕ್ಕನಿಗೆ ದುಡ್ಡೆಂದರೆ ಒಂದಿಷ್ಟು ಲೋಭ....ನಿಮ್ಮಪ್ಪನ ಹಾಗಲ್ಲ ನೋಡು, ಏನಾದರೂ...."

ಮಾಧವ ಸುಮ್ಮನಾದ. ಎಲ್ಲಿ ಹೋದರೂ ಆ ತಂದೆ, ಆ ದುಡ್ಡಿನ ಲೆಕ್ಕ ! —ಅದು ತನ್ನ ಬೆನ್ನುಬಿಡುವಂತೆ ಕಾಣಲಿಲ್ಲ ! ಆ ಹಿಂದಿನ ಇತಿಹಾಸವನ್ನು ಅಳಿಸುವುದು ಸಾಧ್ಯವಿಲ್ಲವೆನಿಸತೊಡಗಿತು ಮಾಧವನಿಗೆ. ಅದು ಯಾವುದೂ ಬೇಡವೆಂದು ಇಷ್ಟು ದೂರ ಬಂದು, ಬದುಕಿಗೊಂದು ಹೊಸ ದಾರಿಯನ್ನು ಹುಡುಕಿಕೊಳ್ಳೋಣವೆಂದು ಓಡಿಬಂದರೂ ಮತ್ತೆ ಅದೇ ಕತೆ. ಮಾಧವನಿಗೆ ತೀರ ಬೆಸರವೆನಿಸಿತು. ಆದರೆ ಮಾಧವನ ಈ ವಿಚಾರಸರಣಿಯನ್ನು ತಿಳಿಯದ ಶ್ರೀಧರ ಗತಕಾಲದಲ್ಲಿಯೇ ಸಿಲುಕಿದ್ದ. ಅವನೆಂದ :

"ನಿಮ್ಮಪ್ಪನ ನೆನಪು ನಿನಗೆ ಎಷ್ಟರಮಟ್ಟಿಗಿದೆಯೊ. ದೊಡ್ಡ ಮನುಷ್ಯ. ಅಂಥ ಧಾರಾಳ ಮನಸ್ಸಿನ ಮನುಷ್ಯನನ್ನು ನಾನು ಇನ್ನೆಲ್ಲಿಯೂ ನೋಡಿಲ್ಲ."

ಮಾಧವ ಸುಮ್ಮನಾಗಿಯೇ ಇದ್ದ. ಭೀಮಣ್ಣಾ, ತನ್ನ ತಾಯಿ ಊರಿಗೆ ಹೋದ ದಿನ ತಮ್ಮನ್ನು ನಿಲ್ದಾಣಕ್ಕೆ ತಂದಿದ್ದ ಟಾಂಗಾದವನ ನೆನಪಾಯಿತು. ಅವನಾದರೂ ಇದೇ ಅಭಿಪ್ರಾಯವನ್ನು ಹೇಳಿದ್ದ. ಶ್ರೀಧರ ಹೇಳುತ್ತಿದ್ದ :

"ಬೇಡಿದವರಿಗೆ 'ಇಲ್ಲ' ಎಂಬ ಮಾತು ಎಂದಿಗೂ ಆತನ ಬಾಯಿಗೆ ಬರಲಿಲ್ಲ, ನೋಡು...."

ಮಾಧವನಿಗೆ ತಡೆಯದಾಗಿ ಹೇಳಿದ :

"ಆದರೆ ಏನು ಪ್ರಯೋಜನ, ಶ್ರೀಧರಾ? ಕೊನೆಗೆ ಮಾಡಿದ್ದೇನು? ಮೊದಲಾದರೂ ಮಾಡಿದ್ದೇನು ?"

"ಕೊನೆಗೆ ಏನೋ ಆಯಿತು ಅನ್ನು. ಆದರೆ ಬದುಕಿದ್ದಾಗ ದೊಡ್ಡ ಆಲದ ಮರದ ಹಾಗಿದ್ದ. ಎಷ್ಟು ಜನರಿಗೆ ಆಶ್ರಯ ! ಏನು ಕತೆ....! ನನಗೆ ತಿಳಿದ ಮಟ್ಟಿಗೆ ಅವನಿಂದ ಹತ್ತಿಪ್ಪತ್ತು ಮನೆ ಉಳಿದು ಬೆಳೆದುವು. ಅಂಥ ಔದಾರ್ಯ ಇಂದಿನ ಕಾಲದಲ್ಲಿ ಕೇಳಲೂ ಸಿಗುವುದಿಲ್ಲ."

ಮಾಧವ ಯೋಚನೆಯಲ್ಲಿ ಮುಳುಗಿದ್ದ. ಶ್ರೀಧರನ ಯೋಚನೆ ತನಗೆ ಇದ್ದರೆ ತಾನೂ ಸುಖಿಯಾಗಿ ಇರಬಹುದಿತ್ತು ಎಂದು. ಆದರೆ ಆ ಯೋಚನೆ ಸರಿಯಾದುದಲ್ಲವೆಂದು ಆತನ ಒಳದನಿ—ವಿವೇಕ—ಹೇಳುತ್ತಿತ್ತು. ಹಿಂದು ಮುಂದಿನ ಯೋಚನೆಯನ್ನೇ ಬಿಟ್ಟುಕೊಟ್ಟಾಗ ಸುಖವಾಗಬಹುದು. ಆದರೆ ಸುಖವೇ ಮುಖ್ಯವೆ ? ಶ್ರೀಧರ ಮತ್ತೆ ಹೇಳತೊಡಗಿದ :

"ಅಷ್ಟು ದೂರ ಯಾತಕ್ಕೆ ? ನಿಮ್ಮ ತಂದೆ ನನಗೆಯ ಸಹಾಯ ನೀಡಿರದಿದ್ದರೆ ನಾನೇ ಇಂದಿಗೆ ಏನಾಗುತ್ತಿದ್ದೆನೊ ! ಇಂದಿಗೆ ನಾನು ಗಳಿಸುತ್ತಿದ್ದ ದುಡ್ಡು, ಉಣ್ಣುತ್ತಿದ್ದ ಅನ್ನ ಅವನದು !"

"ನನಗಂತೂ ಅರ್ಥವಾಗುವುದಿಲ್ಲಪ್ಪಾ...." ಎಂದು ಮಾಧವ ನಿರ್ವಿಕಾರವಾಗಿ.

"ನಿನಗೆ ಹೇಗೆ ಗೊತ್ತಾಗಬೇಕು ? ನೀನಿನ್ನೂ ಚಿಕ್ಕವ....ನಾಲ್ಕನೆಯ ವರ್ಷ ಎಂ.ಬಿ ಬಿ.ಎಸ್. ದಲ್ಲಿದ್ದಾಗ ಅಕಸ್ಮಾತ್ತಾಗಿ ಹೋಗಿಬಿಟ್ಟರು ನಮ್ಮ ತಂದೆ....ಎಲ್ಲೆಲ್ಲಿಯೂ ಸಹಾಯ ಸಾಧ್ಯವಿರಲಿಲ್ಲ....ಹತ್ತು ಜನರ ಬಾಯಲ್ಲಿ ಕೇಳಿದ್ದೆ ನಿಮ್ಮ ತಂದೆಯ ಹೆಸರನ್ನ....ಹೋಗಿ ಹೇಳಿಕೊಂಡೆ. ಆತ ಅಂದು ದೊಡ್ಡ ಮನಸ್ಸು ಮಾಡಿದ್ದರಿಂದೇ...." ಎಂದು ಸುಮ್ಮನಾದ. ಶ್ರೀಧರನ ದನಿಯಲ್ಲಿ ಕೃತಜ್ಞತೆ ತುಂಬಿ ತುಳುಕುತ್ತಿತ್ತು. "ಹೀಗೆಯೇ ಎಷ್ಟು ಜನಕ್ಕೆ ಆತ ಸಹಾಯ ಮಾಡಿದ್ದಾನೆ ನಿನಗೇನು ಗೊತ್ತು ?" ಎಂದ.

"ಹತ್ತು ಮನೆ ನಿಲ್ಲಿಸಿರಬೇಕು, ಆದರೆ...."

"ಏನು ಆದರೆ ? ಅದಕ್ಕೇನೂ ಮಹತ್ವ ಇಲ್ಲದ ಹಾಗೆಯೇ ಹೇಳುತ್ತಿದ್ದೀಯಲ್ಲ ?"

"ಹತ್ತು ಮನೆ ನಿಲ್ಲಿಸಿದವರು ಇಪ್ಪತ್ತು ಮನೆಗಳನ್ನು ಮುರಿದಿದ್ದರೆ ?"

"ಬೇಡಾದವರು ಹೇಳುವ ಮಾತು ಅದು "

"ಯಾರು ಹೇಳುವ ಅಗತ್ಯವೇ ಇಲ್ಲ. ಕೊನೆಯಲ್ಲಿ ನಡೆದ ಪ್ರಕರಣ ಸ್ಪಷ್ಟವಾಗಿಯೇ ಇದೆ."

"ಆದೇನೇ ಇರಲಿ. ಇಷ್ಟು ಜನಕ್ಕೆ ಉಪಕಾರ ಮಾಡಿದವ ಏನು ಮಾಡಿದರೂ ಸರಿಯೆ !"

"ನೀನು ಉಪಕೃತ್ಯ ಎಂದು ನೀನೆಯೇ ಹೇಳುತ್ತೀ. ಅಂತೆಯೇ ನೀನು ಹೀಗೆ ಹೇಳುತ್ತಿರುವುದು. ಅಪಕೃತರಾದವರನ್ನು ಕೇಳು. ಕೇವಲ ತಂದೆಯನ್ನಷ್ಟೇ ಏಕೆ, ಇಡೀ ನಮ್ಮ ವಂಶವನ್ನೇ ಶಪಿಸುತ್ತಿದ್ದಾರೆ...."

"ಏನಾಗಬೇಕು ಅವರ ಶಾಪದಿಂದ ?"

"ಇಂಥವರ ಮಗ ಎಂದೀಗ ನಾನು ಅನ್ನಿಸಿಕೊಳ್ಳುತ್ತಿಲ್ಲವೆ ? ಸಾಕಲ್ಲವೆ ಅಷ್ಟು....?"

"ಅದರಲ್ಲಿ ಯಾವ ಅವಮಾನವೂ ಇಲ್ಲ, ನನ್ನ ಮಾತು ಕೇಳಿದರೆ "

"ಅಷ್ಟು ಮಹತ್ವವಲ್ಲವೆ, ದುಡ್ಡಿಗೆ?" ಎಂದು ಮಾಧವ ಕೊಂಕು ನುಡಿದ.

"ದುಡ್ಡೆಂದು ಹೇಳುತ್ತಿದ್ದೇನೆಯೆ ನಾನು ? ಎಷ್ಟು ದುಡ್ಡು ಬೇಕಾದಷ್ಟು ಜನರ ಹತ್ತಿರ ಇದ್ದಿರಬಹುದು. ಅದಕ್ಕೂ ಹೆಚ್ಚು ಇರಬಹುದು. ಆದರೆ ಆ ಧಾರಾಳವಾದ ಮನಸ್ಸು....ಹತ್ತು ಸಾವಿರಕ್ಕೊಬ್ಬನೂ ಸಿಕ್ಕಲಿಕ್ಕಿಲ್ಲ...."

"ಏನೋಪ್ಪ....ನನಗೇನೂ ಹಾಗೆ ತೋರುವುದಿಲ್ಲ...."

"ನೀನು ಯೋಚಿಸಿಲ್ಲ—ಕೆಟ್ಟ ಮಾತಿನ ಕಡೆಗೆಯೇ ನೀನು ನೋಡುತ್ತಿದ್ದೀ. ಅವನಲ್ಲಿ ಕೆಟ್ಟದ್ದು ಇರಲಿಲ್ಲ ಎಂದು ನಾನು ಹೇಳುವಂತಿಲ್ಲ. ಆತ ಅಪ್ರಾಮಾಣಿಕನಾಗಿರಬಹುದು ತನ್ನ ಗಳಿಕೆಯಲ್ಲಿ ; ಆದರೆ ಆತ ಅದನ್ನು ಬಳಸಿದ ರೀತಿಯನ್ನು ನೋಡಿದರೆ....ಎಲ್ಲವನ್ನೂ ಮರೆಯುವಂತಾಗುತ್ತದೆ."

"ನನಗಂತೂ ಸರಿಯಾಗಿ ಕಾಣುವುದಿಲ್ಲ ಈ ದೃಷ್ಟಿ. ತಾನು ಉಪಕಾರ ಮಾಡಲಿಕ್ಕೆಂದು ಇನ್ನೊಬ್ಬರಿಂದ ಅಪಹಾರ ಮಾಡುವುದೆ ?"

"ಒಳ್ಳೆಯದನ್ನು ಮಾಡಲಿಕ್ಕೆಂದು ಕೆಟ್ಟದನ್ನು ಮಾಡಿದರೆ ಏನು ತಪ್ಪು?"

"ಕಳ್ಳ ಉದಾರಿಯಾದರೆ ಆತನಿಗೆ ಶಿಕ್ಷೆ ಇಲ್ಲ ಅಂದ ಹಾಗಾಯಿತು, ನಿನ್ನ ಎಣಿಕೆಯಲ್ಲಿ !"

"ಶಿಕ್ಷೆ ಇಲ್ಲ ಎಂದೇನೂ ನಾನು ಹೇಳುವಂತಿಲ್ಲ. ಆದರೂ ಶಿಕ್ಷೆಯಲ್ಲಿ ವ್ಯತ್ಯಾಸವಾದರೂ ಆಗಬೇಕು...."

"ಅದೇನೂ ದೊಡ್ಡ ಮಾತಲ್ಲ....ಶಿಕ್ಷೆಗೆ ಗುರಿಯಾಗುವಂಥದನ್ನು ಮಾಡುವುದು, ಮಾಡದಿರುವುದು ಮುಖ್ಯ...." ಎಂದ ಮಾಧವ, ಕೊನೆಯಲ್ಲಿ

ತಾನೇ ಮಾತಿನಲ್ಲಿ ಗೆದ್ದವನಂತೆ. ಕೈ ತೊಳೆಯುತ್ತಿರುವಾಗ ಹೇಳಿದ : "ನನಗೆ ಅದೇ ಬೇಡವಾಗಿದೆ ನೋಡು. ಅದಕ್ಕೆಂದೇ ಬಂದಿದ್ದೇನೆ, ಎಲ್ಲವನ್ನೂ ಬಿಟ್ಟು ಕೊಟ್ಟು—ಆ ಹಿಂದಿನದೆಲ್ಲವನ್ನೂ ನನಗೆ ಮರೆಯಬೇಕಾಗಿದೆ. ಆ ಎಲ್ಲ ಸಂಬಂಧವನ್ನೂ ಒಂದೇಟಿಗೆ ಕಡಿದೊಗೆಯಬೇಕಾಗಿದೆ...."

ಆದರೆ ಮಾಧವನ ಮಾತಿಗೆ ಶ್ರೀಧರ ಎಷ್ಟು ಮಾತ್ರವೂ ಒಪ್ಪಲಿಲ್ಲ.

## 15

ಮತ್ತೆ ನಾಲ್ಕು ದಿವಸಗಳು ಸರಿದುವು. ಸರೋಜಿನಿಯ ಯಾವ ಸಮಾಚಾರವೂ ತಿಳಿಯದ್ದರಿಂದ ಮಾಧವ ತೀರ ದಿಗಿಲಿನಲ್ಲಿ ಬಿದ್ದಿದ್ದ. ಆದರೆ ಎಷ್ಟು ಯೋಚಿಸಿದರೂ ನಿಶ್ಚಿತವಾಗಿ ಏನೂ ತಿಳಿಯುವಂತಿರಲಿಲ್ಲವಾದ್ದರಿಂದ ಸುಮ್ಮನಾಗಿರದೆ ಬೇರೆ ಮಾರ್ಗವೂ ಇರಲಿಲ್ಲ. ಧಾರವಾಡಕ್ಕೆ ಪತ್ರ ಬರೆದು ತಿಳಿದುಕೊಳ್ಳುವಂತೆಯೂ ಇರಲಿಲ್ಲ. ಒಮ್ಮೆ ಅಲ್ಲಿಯವರೆಗೆ ಹೋಗಿ ನೋಡಿಕೊಂಡು ಬಂದರೆ ? ಎಂದೂ ಯೋಚಿಸುತ್ತಿದ್ದ. ಆದರೆ ತಾನು ಅಲ್ಲಿಗೆ ಬಂದುದೇಕೆ ? ಎಂಬ ವಿಚಾರ ಮೂಡಿದೊಡನೆ, ಆ ಯೋಚನೆಯೂ ಹಿಂದಕ್ಕೆ ಸರಿಯುತ್ತಿತ್ತು. ಬಂದಾಗಿನಿಂದಲೂ ಕೆಲಸಕ್ಕೆ ಎಲ್ಲೆಲ್ಲಿಯೂ ಅಲೆದಾಡಿದರೂ ಸುಲಭವಾಗಿ ಕೆಲಸ ಸಿಗುವ ಲಕ್ಷಣ ಕಾಣಲಿಲ್ಲ. ಈ ಅಲೆದಾಟದಲ್ಲಿ, ಸರೋಜಿನಿಯ ಬಗೆಯಲ್ಲಿಯ ಯೋಚನೆಗಳಲ್ಲಿ ದೇಹ ಮನಸ್ಸುಗಳೆರಡೂ ದಣಿಯುತ್ತಿದ್ದವು. ಯಾವುದೋ ಒಂದು ಬಗೆಯ ನಿರಾಶೆ ಪ್ರಪಂಚವನ್ನು ರಾತ್ರಿ ಆವರಿಸಿದಂತೆ ಮಾಧವನ ಹೃದಯವನ್ನು ಮುತ್ತುತ್ತಿತ್ತು. ಅಂದಿನ ದಿನವಂತೂ ಅಲೆದಾಟ ವಿಪರೀತವಾಗಿ ಮಾಧವನಿಗೆ ತೀರ ಬೇಸರವೆನಿಸತೊಡಗಿತ್ತು. ರಾತ್ರಿಯ ಊಟವಾದನಂತರ ದಿನದಂತೆ ಗೆಳೆಯನೊಡನೆ ಮಾತನಾಡುತ್ತ ಕುಳಿತಿದ್ದ. ಎಂದಿನಂತೆ ಶ್ರೀಧರ ನಿತ್ಯದ ಸಮಾಚಾರವನ್ನು ಕೇಳಿಕೊಳ್ಳುತ್ತಿದ್ದ. ಕೊನೆಗೆ ಮಾಧವ ಹೇಳಿದ :

"ನನಗೇನೂ ಕೆಲಸ ಸಿಕ್ಕುವ ಹಾಗೆ ಕಾಣುವುದಿಲ್ಲ; ಶ್ರೀಧರಾ.... ಈ ಹೊತ್ತಂತೂ ತೀರಾ ಬೇಸರವಾಗಿಬಿಟ್ಟಿದೆ, ನೋಡು."

"ಇಷ್ಟರಲ್ಲಿಯೇ ಬೇಸರವಾಗಿಬಿಟ್ಟಿತೆ ?"

"ಹುಂ.... ಎಷ್ಟು ಕಡೆ ಹೋದರೂ ಒಂದಿಲ್ಲೊಂದು ನೆಪ ಹೇಳಿ ದೂಡಿಬಿಡುತ್ತಾರೆ. ಅಲ್ಲದೆ ಪೇಪರಿನಲ್ಲಿ ಬರುವ ಕೆಲಸದ ಜಾಹಿರಾತುಗಳಂತೂ ತುಂಬ ಮೋಸಗಾರಿಕೆ ಎಂದೇ ಕಾಣುತ್ತದೆ."

"ಮೋಸ ಏನು? ಯೋಗ್ಯ ಜನವಾದರೂ ಸಿಕ್ಕಬೇಕಲ್ಲ !"

"ಯೋಗ್ಯ ಜನಕ್ಕಾಗಿ ಅಲ್ಲವೇ ಅಲ್ಲ. ಯಾರ ಕಣ್ಣಿಗೊ ಮಣ್ಣೆರಚಲಿಕ್ಕೆ ಈ ಜಾಹೀರಾತಿನ ಸೋಗು ! ಜಾಹೀರಾತು ಕೊಡುವ ಮೊದಲೇ ಯಾರಿಗೆ ಕೊಡತಕ್ಕದ್ದೆಂಬುದನ್ನು ಆಗಲೆ ಹೆಚ್ಚುಕಡಿಮೆ ನಿರ್ಣಯಿಸಿಯೇ ಇರುತ್ತಾರೆ."

"ಹಾಗೂ ಇರುತ್ತದೆ ಅನ್ನು, ಆದರೂ...."

"ಏನಾದರೂ ಕಣ್ಣಿಗೆಯೇ ಇಷ್ಟು ದೊಡ್ಡದು ಈ ಊರು. ಬೇಕಾದಷ್ಟು ಅಸ್ಪದವಿದ್ದಂತೆ ಕಾಣುತ್ತದೆ. ಸಮೀಪಕ್ಕೆ ಬಂದು ನೋಡಿದರೆ ಯಾವ ಅಸ್ಪದವೂ ಇಲ್ಲ ; ಅರ್ಥವೂ ಇಲ್ಲ."

"ನೀನು ಇಂದು ತೀರ ಬೇಸರಪಟ್ಟಂತೆ ಕಾಣುತ್ತದೆ....ಸಿಕ್ಕೀತು....ಸಿಕ್ಕದೇ ಏನು ?"

"ಏನು ಸಿಕ್ಕುತ್ತದೆಯೊ ಏನು ಮಣ್ಣೊ! ಉಸಿರು ಸಿಕ್ಕರೆ ಸರಿ !"

"ನಾನೊಂದು ಕಡೆಗೆ ಹೇಳುತ್ತೇನೆ. ಅಲ್ಲಿ ನೀನು ಹೋದರೆ ಕೆಲಸ ಸಿಕ್ಕುತ್ತದೆ."

"ಆಗಲಿ ನೋಡುವ, ನಿನ್ನ ಸರತಿ ಇನ್ನು ಮುಂದೆ. ನನ್ನದಂತೂ ಮುಗಿದ ಹಾಗಾಯಿತು."

"ನೀನು ಹೋದರೆ ಸಿಕ್ಕೇ ಸಿಕ್ಕುತ್ತದೆ."

"ಅಷ್ಟು ನಿಶ್ಚಿತವೆ ?"

"ನನಗಂತೂ ಯಾವ ಸಂದೇಹವೂ ಇಲ್ಲ !"

"ಎಲ್ಲಿ ಅದು ?"

"ಆದರೆ ನೀನೇನೆನ್ನುತಿಯೋ ಯಾರಿಗೆ ಗೊತ್ತು?"

"ನಾನೇನೆನ್ನುವುದು, ಕೆಲಸ ಬೇಕು ಎಂದು ಗೋಳಾಡುತ್ತಿರುವಾಗ ?"

"ನಿನ್ನ ಹೆಸರು ಕೇಳಿದ ಕೂಡಲೇ ಆತ ಸಹಾಯ ಮಾಡಿಯೇ ಮಾಡುತ್ತಾನೆ !"

"ಯಾರವರು ? ಅದನ್ನಾದರೂ ಹೇಳಬಾರದೆ ?"

"ಇಲ್ಲಿಯ ಇಂಡಿಯನ್ ಬ್ಯಾಂಕಿನ ಡೈರೆಕ್ಟರ್ ದೇಶಪಾಂಡೆ ಎಂದು ಇದ್ದಾರೆ."

"ಅದೇನು ಅವರು ನನಗಾಗಿ ಕಾಯುತ್ತಿದ್ದಂತೆ ಹೇಳುತ್ತೀ ?"

"ಹುಂ....ಕಾಯುತ್ತಿದ್ದಂತೆಯೆ. ನೀನು ಹೋಗಿ ನೋಡು ಬೇಕಾದರೆ...."

"ಯಾಕೆ ಎನ್ನುವುದನ್ನು ಹೇಳಬಾರದೆ ?"

"ಆ ದೇಶಪಾಂಡೆಯವರು ನಿನ್ನ ತಂದೆಗೆ ಪರಮ ಸ್ನೇಹಿತರಾಗಿದ್ದರು. ನಿನ್ನ ತಂದೆಯ ವಿಷಯದಲ್ಲಿ ತುಂಬ ಗೌರವವನ್ನಿಟ್ಟುಕೊಂಡಿದ್ದಾರೆ. ಅಂಥವರ ಮಗ ನೀನು ಕೆಲಸಕ್ಕಾಗಿ ಎಂದು ಹೋದರೆ ಇಲ್ಲ ಎಂದು ಹೇಳುತ್ತಾರೆಯೆ? ನನಗಂತೂ ಸಾಧ್ಯವಾಗಿ ಕಾಣುವುದಿಲ್ಲ...."

"ಅಂತೂ ನನಗೆ ಕೆಲಸ ಸಿಕ್ಕಬೇಕಾದರೆ ನಾನು ಇಂಥವರ ಮಗ ಎಂದು ಹೇಳಿಕೊಂಡು ಹೋಗಬೇಕಲ್ಲವೆ ?"

"ನೀನು ಹೀಗೇನ್ನುತ್ತೀಎನ್ನುವುದು ನನಗೆ ಮೊದಲೇಗೊತ್ತಿತ್ತು. ಅಂತೆಯೇ ನಾನು ಈ ಮಾತು ಹೇಳಿರಲಿಲ್ಲ ಇಷ್ಟು ದಿವಸ...."

"ಯಾವುದನ್ನು ತಪ್ಪಿಸಬೇಕು ಎಂದು ನಾನು ಕೆಲಸ ಹಿಡಿಯಬೇಕೆಂದಿದ್ದೇನೆ ಅದನ್ನೇ ಒಪ್ಪಿಕೊಂಡಂತಾಯಿತಲ್ಲ ಇಷ್ಟು ಮಾಡಿದರೆ...."

"ನಿಜವಾಗಿಯೂ ನಿನ್ನ ಹಟ ನನಗೆ ಅರ್ಥವಾಗುವುದಿಲ್ಲ, ಮಾಧವಾ. ನಿನ್ನ ವಿಚಾರ ಅರ್ಥವಾಗುತ್ತದೆ. ಆದರೆ ಈ ಹಟ ! ಅದೇಕೊ, ನಡೆಯಲಾರದು ಎಂದು ಕಾಣುತ್ತದೆ."

"ನಡೆಯಲಾರದೆ ? ಯಾಕೆ ನಡೆಯಬಾರದು ?"

ಶ್ರೀಧರ ವಿಚಾರಮಗ್ನನಾದ. ಈ ಹಟ ನಡೆಯಲಾರದು ಎಂಬುದರಲ್ಲಿ ಆತನಿಗೆ ಸಂದೇಹವೇ ಇರಲಿಲ್ಲ. ಆದರೆ ಮಾಧವನಿಗೆ ತಿಳಿಹೇಳುವುದು ಹೇಗೆ ? ಕೊನೆಗೆ ನಿಧಾನವಾಗಿ ಹೇಳಿದ :

"ಇದು ನೋಡು ಮಾಧವಾ, ಇಂಥವರ ಮಗ ಎಂದು ನೀನು ಹೇಳಿಕೊಳ್ಳಲಾರದಕ್ಕೆ ಒಂದು ಒಳ್ಳೆಯ ಕೆಲಸ ಸಿಗುವ ಅವಕಾಶವನ್ನು ಮಾತ್ರ ಕಳೆದುಕೊಳ್ಳುತ್ತಿದ್ದೀ."

"ಇಂಥ ಹತ್ತು ಅವಕಾಶ ಹೋದರೂ ನನಗೆ ಪರಿವೆ ಇಲ್ಲ. ಆದರೆ ಈ ಮಾತನ್ನು ಮಾತ್ರ ಹೇಳಿಕೊಳ್ಳುವುದು ನನ್ನಿಂದ ಸಾಧ್ಯವಿಲ್ಲ."

"ಈ ಹಟದಲ್ಲಿ ನನಗೆ ಯಾವ ಅರ್ಥವೂ ಕಾಣುವುದಿಲ್ಲ."

"ಅರ್ಥವಿಲ್ಲವೆ ಈ ಹಟದಲ್ಲಿ ? ನನಗೆ ಆ ಸಂಬಂಧವನ್ನೇ ಪೂರ್ತಿಯಾಗಿ ಕಡಿದೊಗೆದು ಹೊಸದಾಗಿ ಒಂದು ಹೊಸದಾದ ಮನೆಯನ್ನು ಕಟ್ಟಬೇಕಾಗಿದೆ."

"ಮನೆ ಹೊಸದಾದರೂ ಮಣ್ಣು ಹಳೆಯದೇ, ಮಾಧವಾ !"

"ಮಣ್ಣು ಹಳೆಯದಾದರೂ ಅದನ್ನು ಸುಟ್ಟು, ಭಟ್ಟಿಯಾಗಿಸಿ, ಇಟ್ಟಿಗೆಯಾಗಿಸಿದನಂತರ ಕಟ್ಟಬೇಕೆಂದಿದ್ದೇನೆ."

"ಅದು ಹೋಗಲಿ. ಇಂಥವರ ಮಗ ಎಂದು ನೀನು ಹೇಳಿಕೊಳ್ಳದಿದ್ದರೆ ಆಯಿತೆ? ಪ್ರಪಂಚ ನಿನ್ನನ್ನು ಗುರುತಿಸುವುದು ಏನೆಂದು ? ಅಲ್ಲದೆ ಅವರ ಮಗ ನೀನಿದ್ದದ್ದು ಸುಳ್ಳು ಅಲ್ಲವಲ್ಲ ?"

"ಪ್ರಪಂಚ ಹಾಗೆ ತಿಳಿಯುತ್ತಿದ್ದರೆ ಅದಕ್ಕೆ ನನ್ನ ವ್ಯಕ್ತಿತ್ವದ ಅರಿವು,ಪರಿವೆ ಇಲ್ಲ ಎಂದರ್ಥ. ನಾನು ಅವರ ಮಗನಾಗಿರಬಹುದು. ಇದ್ದಿವೇನೆ ಆದರೂ ನಾನು ನಾನೇ ಅಲ್ಲವೆ?"

"ಕೆಲಮಟ್ಟಿಗೆ ಹೌದು. ನೀನು ನೀನೇ ಆದರೂ ನೀನು ಅವರ ಮಗ ಎಂಬುದು ಪ್ರಪಂಚದ ಇತಿಹಾಸದಲ್ಲಿಯ ಒಂದು ಬದಲಾಯಿಸಲಾಗದ ಮಾತು. ಆ ಮಾತನ್ನು ನೀನು ಏನು ಮಾಡಿಯೂ ಮರೆಯಿಸಲಾರೆ."

"ನಾನು ನಾನೇ ಆಗಿ, ಬೇರೆಯಾಗಿ, ಬೆಳೆಯಬಲ್ಲೆನಾದರೆ ಅದನ್ನು ಮರೆಯಿಸಲೂ ಸಾಧ್ಯ. ನೀನು ಬೆಳೆಯಲಾಗದವನಾದರೆ ಆ ಇತಿಹಾಸವೇ ನಿಜ."

"ಒಪ್ಪಿದೆ. ಆದರೆ ನೀನು ಎಷ್ಟು ಬೆಳೆದರೂ ಕೆಲವು ಅಪರಿಹಾರ್ಯವಾದ ಅಂಶ ಉಳಿಯಲೇಬೇಕು. ಉಳಿದೇ ಉಳಿಯುತ್ತವೆ. ಹಳೆಯದು ಎನ್ನುವುದು ಅಳಿಯುವುದೇ ಇಲ್ಲ. ಹಾಗೆ ನೋಡಿದರೆ ಈ ಪ್ರಪಂಚದಲ್ಲಿ ಹೊಸದು ಎಂಬುದು ಇಲ್ಲವೇ ಇಲ್ಲ ಎಂದೂ ಹೇಳಬಹುದು...."

ಮಾಧವ ಒಂದು ಕ್ಷಣ ಯೋಚನೆಗೀಡಾದ. ಒಂದೆರಡು ನಿಮಿಷಗಳ ನಂತರ ಹೇಳಿದ :

"ನೀನು ಹೇಳುವ ಮಾತು ವಿಜ್ಞಾನ ದೃಷ್ಟಿಯಿಂದ ನಿಜವಿದ್ದಿರಬಹುದು. ಆದರೆ ಮನುಷ್ಯನಿಗೆ ಭಾವನೆಗಳಿಲ್ಲವೆ ?"

"ಸರಿ. ನನಗೆ ಹೇಳಬೇಕಾದದ್ದನ್ನು ನೀನೇ ಹೇಳುತ್ತಿದ್ದೀ. ನೀನು ಭಾವನೆಯ ದೃಷ್ಟಿಯಿಂದ ವಿಚಾರ ಮಾಡುತ್ತಿದ್ದೀ ಎಂದೇ ಈ ತಪ್ಪು ತಿಳಿವು ಬಂದಿದೆ !"

"ಹಾಗಾದರೆ ಭಾವನೆಗಳಿಗೆ ಇಲ್ಲಿ ಅವಕಾಶವಿರಬಾರದೆ ?"

"ಇರಬಹುದು. ಖಂಡಿತವಾಗಿ ಇರಬಹುದು. ನಿನಗೆ ನಿನ್ನ ತಂದೆಯ ಇತಿಹಾಸ ಬೇಡವಾಗಿರಬಹುದು. ಅದನ್ನೂ ಒಪ್ಪುತ್ತೇನೆ. ಆದರೆ ಈ ರೀತಿಯ ಭಾವನೆಯಿಂದ ನನಗಂತು ಯಾವ ಪ್ರಯೋಜನವೂ ಕಾಣುವುದಿಲ್ಲ!"

"ಪ್ರಯೋಜನ ಇದ್ದೆ ಇದೆ, ನನ್ನ ದೃಷ್ಟಿಯಿಂದಾದರೂ. ಇಂದು ನೀನು ಹೇಳಿದಂತೆ ನನ್ನ ತಂದೆಯ ವರ್ಚಸ್ಸನ್ನು ಬಳಸಿ ಕೆಲಸವೊಂದನ್ನು ಸಂಪಾದಿಸಿದರೆ ಏನಾದ ಹಾಗಾಯಿತು ? ಆ ಪಾಪದ ವರ್ಚಸ್ಸಿನ ಪ್ರಭಾವ

ಕೊನೆಯುವರೆಗೂ ನನ್ನ ಮೇಲೆ ಉಳಿದ ಹಾಗಾಗುವುದಿಲ್ಲವೆ? ಅವನ ವರ್ಚಸ್ಸು ಒಂದು ಪಾಪದ ಫಲವಾಗಿದ್ದಾಗ ಆ ಹಿಂದಿನ ಪಾಪವನ್ನೇ ನಾನು ಉಪಯೋಗಿಸಿಕೊಂಡು ಮುಂದೆ ಸಾಗಿದಂತಾಗಲಿಲ್ಲವೆ ? ನೀತಿಯ ದೃಷ್ಟಿಯಿಂದ ಇದು ಸರಿಯೆ ? ನನ್ನ ಹಟ ಈ ಯೋಚನೆಗಾಗಿ. ಇದು ಕೇವಲ ಭಾವನೆಯ ಪ್ರಶ್ನೆಯಾಗಿಲ್ಲವಲ್ಲ....?"

"ಇದು ನಿಜ. ಆದರೂ ಕಲ್ಪನೆ ಮಾತ್ರ. ಮನುಷ್ಯನಿಗೆ ಸ್ಮರಣಶಕ್ತಿ ಇದ್ದ ಹಾಗೆ ವಿಸ್ಮರಣಶಕ್ತಿಯೂ ಇರುತ್ತದೆ. ಒಂದರಷ್ಟೇ ಅಗತ್ಯ ಇನ್ನೊಂದು, ಮಾಧವಾ."

"ಹಾಗಾದರೆ ಮರೆಯುವುದು ಅಷ್ಟು ಅಗತ್ಯವೆ ?"

"ಆ ಅಗತ್ಯ ಸೃಷ್ಟಿಯ ನಿಯಮ. ಸಾವಿನಿಂದ ಜನ್ಮಾಂತರದ ಸ್ಮೃತಿ ಅಳಿಯುತ್ತದೆ. ಆ ಸ್ಮೃತಿಯೆಲ್ಲವೂ ಉಳಿಯುತ್ತಿದ್ದರೆ ಮನುಷ್ಯ ನೂರುಗಳಿಗೆ ಬಾಳುತ್ತಿರಲಿಲ್ಲ."

"ಅದನ್ನು ಯಾರು ಹೇಳಬೇಕು ? ದೂರದ ದೃಷ್ಟಿ ಬೇಡವಾದವನಿಗೆ ಈ ವಿಸ್ಮರಣೆ ಒಂದು ಸಮರ್ಥನೆ ಅಷ್ಟೆ. ಇನ್ನೇನೂ ಅಲ್ಲ."

ಶ್ರೀಧರ ಬೇರೆ ದಾರಿ ಹಿಡಿಯಬೇಕೆಂದ. ಮಾತುಮಾತಿಗೆ ವಿಚಾರ ದೂರ ದೂರ ಓಡುತ್ತಿತ್ತು. ಆ ವಿಚಾರವನ್ನೇ ಬೆನ್ನಟ್ಟುತ್ತ ಹೇಳಿದ :

"ಈ ಸ್ಮರಣೆ–ವಿಸ್ಮರಣೆಯ ಮಾತು ಹಾಗಿರಲಿ. ಇಂದು ನೀನು ನೀನೇ ಎಂದು ಹೇಳಿಕೊಳ್ಳುವ ನೀನು ನೀನೇ ಅಲ್ಲ ಎಂದು ಹೇಳಿದರೆ ಏನೆನ್ನುತ್ತೀ ?"

"ಒಂದು ವಾದಕ್ಕೆ ಪ್ರತಿಯಾಗಿ ಇನ್ನೊಂದು ವಾದ ಎನ್ನುತ್ತೇನೆ" ಎಂದು ಮಾಧವ ನಕ್ಕ. ಆದರೆ ಶ್ರೀಧರ ಆ ನಗೆಮಾತಿನಲ್ಲಿಯ ಪರಿಹಾಸಕ್ಕೆ ಗಮನ ಕೊಡುವ ಸ್ಥಿತಿಯಲ್ಲಿರಲಿಲ್ಲ. ಅವನೆಂದ :

"ಅದು ವಾದವಲ್ಲ. ವಾದಕ್ಕೆ ಪ್ರತಿಯಾಗಿ ವಾದವೂ ಅಲ್ಲ. ನಿಜವಾದ ವಿಷಯ ಅದು. ನಿನಗೆ ಪುನರ್ಜನ್ಮದಲ್ಲಿ ವಿಶ್ವಾಸವಿದೆಯೊ ಇಲ್ಲವೊ? ಜನ್ಮಾಂತರದ ಮಾತನ್ನು ನಾನೂ ಹೇಳುತ್ತಿಲ್ಲ. ಆದರೆ ಇದೇ ಜನ್ಮದಲ್ಲಿಯೇ ತಾಯಿ ತಂದೆಗಳು ತಮ್ಮ ಮಕ್ಕಳಲ್ಲಿ ಪುನರ್ಜನ್ಮ ಪಡೆಯುತ್ತಾರೆ !"

"ಅದು ಪುನರ್ಜನ್ಮವಲ್ಲ. ಪ್ರತಿರೂಪವಾಗಬಹುದು, ಅಷ್ಟೆ."

"ಅಷ್ಟಾದರೂ ಒಪ್ಪುತ್ತೀಯಲ್ಲ. ಆದರೆ ಪ್ರತಿರೂಪ ಮಾತ್ರವಲ್ಲ, ಪ್ರತಿ ಸತ್ವವೆಂದೆ ಹೇಳಬೇಕಾಗುತ್ತದೆ. ನಿನ್ನ ವಿಚಾರ, ನಿನ್ನ ಆಚಾರ, ನಿನ್ನ ಭಾವನೆ, ನಿನ್ನ ಸಂಸ್ಕಾರ, ನಿನ್ನ ಎಲ್ಲ ಶಕ್ತಿಸಾಮರ್ಥ್ಯಗಳೂ ನಿನ್ನ ಹಿಂದಿನವರಿಂದ

ಬಂದುವು. ನಿನ್ನ ಆತ್ಮದ ಸಂಸ್ಕಾರ ಬೇರೆಯಾಗಿದ್ದಷ್ಟರ ಮಟ್ಟಿಗೆ ನೀನು ಬೇರೆಯಾಗಬಹುದು. ಆದರೆ ಅದೂ ಕೆಲಮಟ್ಟಿಗೆ ಮಾತ್ರ. ಬಹುಮಟ್ಟಿಗೆ ಹಿಂದಿನದೇ ಮುಂದುವರಿಯುತ್ತದೆ. ಇಂದು ನಿನ್ನದೇಹದಲ್ಲಿ ಹರಿಯುವ ರಕ್ತ ನಿನ್ನ ತಂದೆಯ ದೇಹದಲ್ಲಿಯದೆಂದಮೇಲೆ.... ?"

ಮಾಧವ ಸುಮ್ಮನಾದ. ಶ್ರೀಧರನ ವಾದಕ್ಕೆ ಪ್ರತಿಯಾಗಿ ಹೇಳುವುದು ಸಾಧ್ಯವಾಗಿ ಕಾಣಲಿಲ್ಲ. ಆದರೆ ಆ ವಿಚಾರದಿಂದ ಆತನ ಹೃದಯಕ್ಕೆ ಸಮಾಧಾನ ದೊರೆಯುಲಿಲ್ಲ. ಅದಕ್ಕಾಗಿ ಹಾತೊರೆಯುತ್ತಿದ್ದ. ಹೃದಯದ ಹಾರೈಕೆಗೆ ತತ್ವದ ಸಮರ್ಥನೆಯನ್ನು ಬಯಸುತ್ತಿದ್ದ.

"ನನ್ನ ರಕ್ತವೂ ನನ್ನದಲ್ಲವೆ ?"

"ಅಲ್ಲವೇ ಅಲ್ಲ. ಅದರ ಗುಣ-ದುರ್ಗುಣ ಎಲ್ಲವೂ ಎರವಲು."

"ಹಾಗಾದರೆ ನನ್ನ ತಂದೆಯ ದುರ್ಗುಣ ನನ್ನಲ್ಲಿಯೂ ಇರಬೇಕಾಯಿತು!"

"ಸುಪ್ತವಾಗಿ ಇರಬಹುದು. ಅವಕಾಶ ದೊರೆತರೆ ಹೊರಬೀಳಲೂಬಹುದು" ಎಂದು ಶ್ರೀಧರ ನಕ್ಕು ಮುಂದುವರಿದ : "ಆದರೆ ಆತ ಮಾಡಿದ್ದೆಲ್ಲವನ್ನೂ ನೀನು ಮಾಡಿಯೆ ಮಾಡುವಿ ಎಂಬ ಭವಿಷ್ಯವನ್ನೇನೂ ನಾನು ಹೇಳಲಾರೆ."

"ಏನೋಪ್ಪ, ನನಗಂತೂ ಸಮಾಧಾನವಿಲ್ಲ...." ಎಂದು ಮಾಧವ ಎದ್ದ. ಇಬ್ಬರೂ ಮಲಗಲನುವಾದರು. ಶ್ರೀಧರ ಇನ್ನೂ ತನ್ನ ವಿಚಾರದ ಸುಳಿಯಲ್ಲಿಯೇ ಇದ್ದ. ಹಾಸಿಗೆಯಲ್ಲಿ ಬಿದ್ದುಕೊಂಡೇ ಹೇಳಿದ :

"ರಕ್ತದ ಈ ಗುಣ-ದುರ್ಗುಣ ಎಂದು ಹೇಳಿದೆನಲ್ಲ, ಆಗಲೆ. ಆ ಮಾತಿಗೆ ಎಷ್ಟು ಬೇಕಾದಷ್ಟುಸಾಕ್ಷ್ಯಕೊಡಬಹುದು. ಈಗ ನಾಲ್ಕುದಿನ ಹಿಂದೆಯೇ ಆಸ್ಪತ್ರೆಯಲ್ಲಿ ಒಂದು ಪ್ರಯೋಗ ಮಾಡಿ ನೋಡಿದೆವು."

"ಏನದು....?" ಮಾಧವನಿಗೆ ಕುತೂಹಲವೆನಿಸಿದ್ದರೂ ಕೇಳಿದ.

"ಮೂರು ದಿವಸ ಒಂದು ಕೇಸನ್ನು ಆಬ್ಸರ್ವ್ ಮಾಡುತ್ತಿದ್ದೆವು. ಒಬ್ಬ ಮುದುಕಿ. ಆಕೆಗೆ ಕೆಟ್ಟ ಬೇನೆ...."

"ಅಂದರೆ ?"

"ಇಂದ್ರಿಯಗಳಿಗೆ ಸಂಬಂಧಪಟ್ಟ ಹಾಗೆ. ಆದರೆ ಅದನ್ನು ಪರೀಕ್ಷಿಸುತ್ತಿದ್ದ ಹಾಗೆ ನನಗೇನೋ ಕುತೂಹಲ ಹೆಚ್ಚಾಯಿತು. ಅಷ್ಟು ತೀವ್ರಾವಸ್ಥೆಯಲ್ಲಿದ್ದ ಕೇಸು ನಾನು ನೋಡಿರಲಿಲ್ಲ. ಓಹ್! ಆಕೆಯ ರಕ್ತ ಎಂದರೆ ಶುದ್ಧ ವಿಷ....!"

"ಬಹಳ ದಿವಸದ ಕೇಸು ಇದ್ದಿರಬಹುದು....ದುರ್ಲಕ್ಷ್ಯಮಾಡಿರಬಹುದು ಅವರು...."

"ಅದಂತೂ ಸರಿಯೆ. ಆದರೆ ಅದಕ್ಕೊಂದು ಹಿಸ್ಟರಿಯೂ ಇತ್ತು....ಆಕೆ ವೇಶ್ಯೆ...."

"ಅಂದರಂತೂ ಸರಿಯಾಯಿತಲ್ಲ...."

"ಆ ಬೇನೆ ಅನುವಂಶಿಕವಾಗಿಯೂ ಇರಬಲ್ಲದು. ಅಂತೆಯೇ ನಮಗೆ ನೋಡಬೇಕಾಗಿದ್ದಿತು ಆಕೆಯಿಂದ ಆಕೆ ಮಕ್ಕಳಿಗೆ ಆಗಲೇ ಹಬ್ಬಿದೆಯೊ ಹೇಗೆ ಎಂದು. ಅದರಲ್ಲಿಯೂ ವಿಷದ ಇದೇ ತೀವ್ರತೆ ಮಕ್ಕಳಲ್ಲಿ ಇದೆಯೋ ಹೇಗೆ ಎಂಬುದು ತಿಳಿಯಬೇಕಾಗಿತ್ತು...."

"ನೋಡಲು ಸಿಕ್ಕಿತೆ ?"

"ಓ, ಎಸ್....ಆಕೆಯ ಮಗಳೂ ಬಂದಿದ್ದಳು, ಆಕೆಯ ಕೂಡ...."

ಮಾಧವನಲ್ಲಿ ಏನೋ ಒಂದು ಕುತೂಹಲ ಬೆಳೆಯತೊಡಗಿತ್ತು. ಅದರಲ್ಲಿಯೂ ಆಕೆಯ ಕೂಡ ಆಕೆಯ ಮಗಳಿದ್ದಳು ಎಂದು ಹೇಳಿದಾಗಲಂತೂ ಆತನ ಕುತೂಹಲ ಇನ್ನೂ ಬೆಳೆದುನಿಂತಿತು. ಅದನ್ನು ತಡೆಯಲಾಗದೆ ನಡುವೆಯೇ ಕೇಳಿದ :

"ಎಲ್ಲಿಯ ಕೇಸು ಇದು ?"

"ಎಲ್ಲಿಯವರೊ ಏನೊ, ಇಲ್ಲಿಯವರಂತೂ ಅಲ್ಲ. ನಮ್ಮ ಕಡೆಯ ಜನ ಎಂದು ಕಾಣುತ್ತದೆ."

"ನಮ್ಮ ಕಡೆಯವರೇ ?"

"ಹುಂ....ತಮ್ಮತಮ್ಮಲ್ಲಿ ಅವರು ಕನ್ನಡದಲ್ಲಿಯೇ ಮಾತನಾಡಿಕೊಂಡದ್ದನ್ನು ಕೇಳಿದ್ದೆ. ಆದರೆ ಯಾರಿದ್ದರೇನು ? ಆ ಮಗಳ ರಕ್ತದ ಪರೀಕ್ಷೆ ಮಾಡಿದಾಗ ನಾನು ತೀರ ಬೆರಗಾಗಿ ಹೋದೆ. ತಾಯಿಯ ಬೇನೆಯ ತೀವ್ರಸ್ಥಿತಿ ಅಲ್ಲಿರದಿದ್ದರೂ ಆಕೆಯ ರಕ್ತದಲ್ಲಿಯ ಆ ವಿಷದ ಪ್ರಮಾಣ ಅಸಾಧಾರಣವಾಗಿತ್ತು...."

ಮಾಧವನಿಗೆ ಶ್ರೀಧರನ ಮಾತಿನ ಕಡೆಗೆ ಲಕ್ಷ್ಯವಿದ್ದಂತಿರಲಿಲ್ಲ. ಈ ತಾಯಿ—ಮಗಳು—ರಂಗಸಾನಿ—ಸರೋಜಿನಿಯರು ಆಗಿದ್ದಿರಬಹುದೆ ಎಂದೇ ಯೋಚಿಸುತ್ತಿದ್ದ. ನೇರವಾಗಿ ಕೇಳುವುದಾದರೂ ಹೇಗೆ ? ಮತ್ತು ಏನೆಂದು? ಅಂತೆಯೇ ಸುತ್ತುಸುತ್ತಾಗಿ ಕೇಳತೊಡಗಿದ :

"ಯಾವ ಆಸ್ಪತ್ರೆಯಲ್ಲಿ ಇದನ್ನು ನೀನು ನೋಡಿದ್ದು ?"

"ಕೆ.ಇ.ಎಮ್...."

"ಆಕೆ ಅಲ್ಲಿ ಉಪಚಾರ ಪಡೆಯುತ್ತಿದ್ದಾಳೆಯೆ ?"

"ಇಲ್ಲ ಎಂದು ಕಾಣುತ್ತದೆ. ಕೇಸು ಆಗಲೇ ಹೋಪ್‌ಲೆಸ್...."

"ಯಾಕೆ ? ಟ್ರೀಟ್‌ಮೆಂಟ್ ಸಾಧ್ಯವಿರಲಿಲ್ಲವೆ ?"

"ಆ ಅವಸ್ಥೆ ಎಂದಿಗೋ ಮೀರಿಹೋಗಿದೆ. ಮೈಯಲ್ಲಿ ರಕ್ತವೂ ಇಲ್ಲ. ಇದ್ದುದಷ್ಟೆಲ್ಲ ವಿಷ ! ಅಂದಿಗೇ ಡಿಸ್‌ಚಾರ್ಜ್ ಮಾಡಿಬಿಟ್ಟರು...."

ಮಾಧವನಿಗೆ ಬೇಕಾದ ಸಮಾಚಾರ ಸಿಗದಿದ್ದಕ್ಕಾಗಿ ನಿರಾಶೆಯಾಯಿತು. ಕುತೂಹಲ ಮಾತ್ರ ಕೆರಳಿ ನಿಂತಿತ್ತು. ಏನಾದರೂ ತಿಳಿಯೋಣವೆಂದು ಕೇಳಿದ, ಆ ಕೇಸಿನ ವೈದ್ಯಕೀಯದಲ್ಲಿಯೆ ಆಸ್ಥೆ ಇದ್ದವನಂತೆ :

"ಆ ಮಗಳಿಗೆ ವಯಸ್ಸೆಷ್ಟು ?"

"ಸುಮಾರು ಇಪ್ಪತ್ತಾಗಿರಬಹುದು."

"ಆಕೆಯೂ ಅದೇ ವೃತ್ತಿಯಲ್ಲಿದ್ದಾಳೆಯೆ ?"

"ಇನ್ನೂ ಇಲ್ಲ ಎಂದು ಹೇಳಿದರು. ಆಕೆಯೇನೋ ಕಾಲೇಜು ಕಲಿಯುತ್ತಾಳಂತೆ !"

ಮಾಧವನಿಗೆ ಸಂದೇಹವೇ ಉಳಿಯಲಿಲ್ಲ. ಅಂತೆಯೇ ಕೇಳಿದ :

"ಅವರ ಜತೆಯಲ್ಲಿ ಇನ್ನಾರಾದರೂ ಬಂದಿದ್ದರೆ ?"

"ಯಾಕೆ ಬಹಳ ಕೇಳುತ್ತಿದ್ದೀಯಲ್ಲ ?" ಎಂದು ಶ್ರೀಧರ ನಗೆ ತೇಲಿಸಿದ.

"ಇಲ್ಲ. ನನಗೇನೋ ಇವರು ಯಾರಾದರೂ ಗೊತ್ತಿದ್ದವರಾಗಿರಬೇಕೆಂದು ಎನಿಸಿತು ಅದಕ್ಕೆಂದೆ."

"ಇದ್ದ ಒಬ್ಬ, ಮಹಾನುಭಾವ ! ಅವನನ್ನು ನಾವು ನಗೆಯಾಡಿದ್ದೇ ಆಡಿದ್ದು, ಆ ದಿನ. ಅವನೇನೊ ವಕೀಲನಂತೆ. ಎಂಥ ವಕೀಲನೊ...." ಎಂದು ನಕ್ಕ.

ಮಾಧವ ಹಾಸಿಗೆಯಿಂದ ಅರ್ಧಮರ್ಧ ಸಿಡಿದೆದ್ದ. ಆತನ ನಡತೆ ಶ್ರೀಧರನಿಗೆ ಮಾತ್ರ ಅರ್ಥವಾಗಲಿಲ್ಲ. ಆತನಿಗೆ ಅವರು ಗೊತ್ತಿದ್ದವರಾಗಿರಬೇಕೆಂದೇ ಹಾಗೆ ಎದ್ದು ಕುಳಿತಿರಬಹುದೆಂದು ತಿಳಿದು ಕೇಳಿದ :

"ಅವರು ನಿನಗೆ ಗೊತ್ತಿನವರೆ ?"

"ಹುಂ... ನೀನೇನೆಂದೆ ಆಗಲೇ ? ಆ ಮಗಳಿಗೂ ಇನ್‌ಫೆಕ್ಷನ್ ತಗಲಿದೆಯೆ?"

"ತಗಲಿದ್ದಲ್ಲ. ರಕ್ತಗತವಾಗಿ ಬಂದದ್ದು. ಅದಕ್ಕೆಂದೇ ಹೇಳಿದೆ."

"ತಾಯಿಯ ರಕ್ತದಿಂದ ಬಂದದ್ದೆ ?"

"ಮತ್ತೆಲ್ಲಿಂದ ಬರಬೇಕು ? ಸರಿಸಮಾನವಾಗಿ ಬಂದಿದೆ. ಆಕೆಯನ್ನು ಮುಟ್ಟಿದವ ಪಾಪಿ ! ವಿಷಕನ್ಯೆ ಎಂದರೆ ಆಕೆ ನೋಡು....!"

ಮಾಧವ ಅವಕ್ಕಾದ. ಹಾಸಿಗೆಯಲ್ಲಿ ನೈ ಚೆಲ್ಲಿದ. ಸರೋಜಿನಿಯು ಬಗೆಯಲ್ಲಿ ಕನಿಕರ ಸೂರ್ಯಾಡಿಯಾಯಿತು. ಆದರ ಆಕೆಯ ಬಗೆಯಲ್ಲಿ ಭೀತಿಯೂ ತಲೆದೋರತೊಡಗಿತು. ಸೊಗಸಾದ ಬಳ್ಳಿಯೊಂದು ಕೈಮುಟ್ಟಿ ಹೋದದ್ದು ಸಾಕ್ಷಾತ್ ಸಾವಿನಾಕೃತಿಯೇ ಆದ ಸರ್ಪದಂತೆ ಭಾಸವಾಗ ತೊಡಗಿತು. ಹತ್ತು ನಿಮಿಷಗಳಲ್ಲಿ ಶ್ರೀಧರ ಸುಖವಾಗಿ ನಿದ್ರಿಸುತ್ತಿದ್ದ. ಮಾಧವ ಮಾತ್ರ ಬೆಳ್ಳಬೆಳಗಿನವರೆಗೂ ಕಣ್ಣಿವೆ ಮುಚ್ಚಲಿಲ್ಲ!

ಸರೋಜಿನಿ ವಿಷಕನ್ಯೆ ಎಂಬ ಮಾತು ಮಾಧವನ ಹೃದಯವನ್ನು ಶೂಲದಂತೆ ಇರಿಯುತ್ತಿತ್ತು. ಹಾಗಾದರೆ ಆಕೆಗೆ ಉದ್ಧಾರ ಸಾಧ್ಯವೆ ಇಲ್ಲವೆ? ಎಂದು ಹೃದಯ ಮೊರೆಯಿಡುತ್ತಿತ್ತು. ಇನ್ನು ತಾನೇನು ಮಾಡಬಹುದು ಆಕೆಗಾಗಿ? ರಕ್ತದ ಶಾಪ! ಅದರೆದುರು ತನ್ನ ಸಹಾನುಭೂತಿ ಏನು ಮಾಡಬಲ್ಲದು? ಆಲದ ಮರದಡಿಯಲ್ಲಿ 'ಇಂದಿನಿಂದ ನೀನು ನನ್ನವಳು!' ಎಂದು ಹೇಳಿದ್ದ. ಇನ್ನುಮೇಲೆ ಸಾಧ್ಯವೆ ಅದು? ಎತ್ತ ಯೋಚಿಸಿದರೂ ಸರೋಜಿನಿಗೆ ತಾನು ಯಾವ ರೀತಿಯಿಂದಲೂ ಸಹಾಯಮಾಡಲಸಮರ್ಥ ನೆಂದೇ ನಿಷ್ಕರ್ಷೆ ಹೊರಡುತ್ತಿತ್ತು. ಶ್ರೀಧರ ತನಗೆ ಹೇಳಿದ ವಿಷಯ ಆಕೆಗೆ ತಿಳಿದಿದೆಯೊ ಇಲ್ಲವೊ? ತಿಳಿದಿದ್ದರೆ ಆಕೆಯ ಜೀವನ ಎಷ್ಟು ಬರಡು? ಪಾಪ ಜೀವನದ ಎದುರು ಹೋರಾಟ ನಡೆಯಿಸಿ ಅದರಿಂದ ದೂರವಾಗಿರಬೇಕೆಂದು ಬಯಸುತ್ತಿದ್ದ ಆಕೆಯ ವಿವೇಕ ಆಕೆಯ ರಕ್ತದ ವಿರುದ್ಧ ಏನು ಮಾಡ ಬಲ್ಲುದು? ಬದುಕಿನ ಹೊಸ್ತಿಲದ ಮೇಲೆ ನಿಂತು ಆಸೆಗಣ್ಣಿಂದ ಸುಖಕ್ಕಾಗಿ ಮುನ್ನೋಡುತ್ತಿದ್ದ ಕ್ಷಣದಲ್ಲಿಯೇ ಗತಕಾಲದ ಶಾಪ ಮೂರ್ತಿವುತ್ತಾಗಿ ಆಕೆಯೆದುರು ನಿಂತು ಅಣಕಿಸುತ್ತಿರುವುದರಲ್ಲಿ ಎಂಥ ವಿಪರ್ಯಾಸ? ಎಂದು ಹತ್ತಾರು ಬಗೆಯಲ್ಲಿ ಮರುಗಿದ. ಆದರೆ ಏನು ಮಾಡಿದರೂ ಆಕೆಯನ್ನು ಆಕೆಯ ಪಾಡಿಗೆ ಬಿಟ್ಟುಬಿಡುವುದು ಸುಲಭವಾಗಿ ಕಾಣಲಿಲ್ಲ. ತಾನು ಮೊದಲು ಬಗೆದ ರೀತಿಯಲ್ಲಿ ಆಕೆಯ ಉದ್ಧಾರ ಸಾಧ್ಯವಿರದಿದ್ದರೂ ಆಕೆಗೆ ಸಮಾಧಾನವನ್ನಾದರೂ ಹೇಳಲು ಆಗ ಮಾಧವನ ಹೃದಯ ಕಾತೊರೆಯು ತ್ತಿತ್ತು. ಆದರೆ ಆಕೆ ಎಲ್ಲಿ, ಆಕೆ ಏನಾದಳು, ತನ್ನ ಸುತ್ತಲಿನ ಪರಿಸ್ಥಿತಿಯ ವಿಕಟ ವಿಪರ್ಯಾಸವನ್ನು ತಿಳಿದು ಎಷ್ಟು ಎದೆಗುಂದಿರಬಹುದು—ಯಾವು ದನ್ನೂ ತಿಳಿಯಲಸಮರ್ಥನಾಗಿದ್ದ. ನಾಲ್ಕು ದಿವಸ ಹಿಂದೆಯೇ ರಂಗಸಾನಿ ಯನ್ನು ಆಸ್ಪತ್ರೆಯಿಂದ ಡಿಸ್‌ಚಾರ್ಜ್ ಮಾಡಿದ್ದರೆಂದಮೇಲೆ ಅವರೆಲ್ಲರೂ ಮರಳಿ ಊರಿಗೆ ಹೊರಟುಹೋದರೆ? ಹಾಗಾದರೆ ತಾನಾದರೂ ಊರಿಗೆ

ಹೋಗಿ ನೋಡಿಕೊಂಡು ಬಂದರೆ ? ಆದರೆ ಅವರು ಹೊರಟುಹೋಗಿರ ಬೇಕೆಂಬುದಕ್ಕೆ ಭರವಸೆ ಏನು ? ಅಲ್ಲದೆ ತಾನಾದರೂ ಇತ್ತ ತನ್ನ ಬದುಕಿಗೆ ಒಂದು ದಾರಿಯನ್ನು ಹುಡುಕಿಕೊಳ್ಳಬೇಕಾಗಿತ್ತು. ಅದಾದರೂ ಅಷ್ಟು ಸುಲಭವಾಗಿ ಕಾಣುತ್ತಿರಲಿಲ್ಲ. ಹೀಗಾಗಿ ಮಾಧವನ ಮನಸ್ಸು ನಿರಾಶೆಯ ಮಡುವಿನಲ್ಲಿ ಒದ್ದಾಡುತ್ತಿತ್ತು—ನಡುನೀರಲ್ಲಿ ಕೈಸೋತ ಈಜು ಬಾರದವ ನಂತೆ !

## 16

ಡಾಕ್ಟರರು ತಿಳಿಸಿದ ವೇಳೆಗೆ ಸರಿಯಾಗಿ ಗೋವಿಂದಗೌಡ ಆಸ್ಪತ್ರೆಗೆ ಬಂದಿದ್ದ. ಬರುವಾಗ ಆತನಿಗೆ ಒಂದೇ ಯೋಚನೆ—ಔಷಧ—ಉಪಚಾರಕ್ಕೆ ಎಂದು ರಂಗಸಾನಿಯನ್ನು ಆಸ್ಪತ್ರೆಯಲ್ಲಿಯೇ ಇಡಬೇಕೆಂದರೆ ಮುಂದೇನು ? ಎಷ್ಟು ದಿವಸ ? ವೆಚ್ಚದ ವಿಷಯ ಹೇಗೆ ? ಅಲ್ಲದೆ ಸರೋಜಿನಿ ಆ ದಿನ ಆಸ್ಪತ್ರೆಗೆ ಹೋದವಳು ಊಟ-ವಸತಿಗಳ ಬಗೆಯಲ್ಲಿ ಎಷ್ಟು ಅನಾನುಕೂಲ ಗಳಿದ್ದರೂ ತಿರುಗಿ ವಸತಿಗೃಹಕ್ಕೆ ಬಂದಿರಲಿಲ್ಲ. ಆ ಮಾತಿನಿಂದ ಗೌಡನಿಗೆ ಬೇಸರವೂ ಅನ್ನಿಸತೊಡಗಿತ್ತು. ಇನ್ನೇನಾದರೂ ಕಪಟವನ್ನು ಹೂಡಿ ಸರೋಜಿನಿಯನ್ನು ಮತ್ತೆ ವಸತಿಗೃಹದ ಕಡೆಗೆ ಬರುವಂತೆ ಮಾಡಿದರೆ ಮುಂದೆ ನಾಲ್ಕೆಂಟು ದಿನವಾದರೂ ಸುಖವಾಗಿ ಇರಬಹುದು ಎಂದಂದುಕೊಳ್ಳುತ್ತಿದ್ದ. ಈಗ ಸರೋಜಿನಿಯಿಲ್ಲದೆ ತಾನಿದನ್ನೆಲ್ಲ ಮಾಡುತ್ತಿದ್ದುದು ಯಾತಕ್ಕಾಗಿ ಎಂದು ಕೇಳಿಕೊಳ್ಳುವ ಬೇಸರದ ಮನಃಸ್ಥಿತಿಯಲ್ಲಿದ್ದ.

ಆದರೆ ಆಸ್ಪತ್ರೆಗೆ ಹೋದನಂತರ ಆತನ ವಿಚಾರಕ್ಕೆ ಬೇರೆ ಗತಿಯೇ ಸಿಕ್ಕಿತ್ತು. ಡಾಕ್ಟರರಿಗಾಗಿ ಅರ್ಧಗಂಟೆಯ ಮೇಲೆ ಕಾಯಬೇಕಾಗಿದ್ದಿತು. ಕೊನೆಗೊಮ್ಮೆ ಗೌಡನಿಗಾಗಿ ಕರೆ ಬಂದಿತು. ಎದುರಿನಲ್ಲಿ ಕುಳಿತ ಗೌಡನನ್ನು ಒಂದೆರಡು ಸಲ ಸೂಕ್ಷ್ಮವಾಗಿ ನೋಡಿ ಡಾಕ್ಟರರು ರಂಗಸಾನಿಗೆ ಸಂಬಂಧಪಟ್ಟ ಕಾಗದಗಳನ್ನು ತಿರುವಿಹಾಕಿದರು. ತಾನಾಗಿಯೇ ಕೇಳುವುದೇನೆಂದು ಗೌಡನೂ ಸುಮ್ಮನಿದ್ದ. ಕೊನೆಗೆ ಡಾಕ್ಟರರೆಂದರು :

"ನಿಮ್ಮ ರೋಗಿಯ ಸ್ಥಿತಿ ಅಷ್ಟೇನೂ ಸರಿಯಾಗಿಲ್ಲ...."

"ಬೇನೆ ಡೈಗ್ನೋಸ್ ಆಯಿತೆ ?"

"ಈ ಕೇಸಿನಲ್ಲಿ ಡೈಗ್ನೋಸ್ ಆಗತಕ್ಕದ್ದೇನೂ ಇರಲಿಲ್ಲ. ಬೇನೆ ಮೊದಲ ಪರೀಕ್ಷೆಯಲ್ಲಿಯೇ ಗೊತ್ತಾಗಿದ್ದಿತು. ಆದರೆ ಅದನ್ನು ಟ್ರೀಟ್ ಮಾಡುವುದು

ಇನ್ನು ಮೇಲೆ ಸಾಧ್ಯವೇ ಎಂಬುದೇ ನನಗೆ ನಿಷ್ಕರ್ಷೆ ಮಾಡಬೇಕಾಗಿದ್ದಿತು ."

"ಏನೆಂದಾಯಿತು ಕೊನೆಗೆ ?"

"ಅಗತ್ಯವಿಲ್ಲ ಎಂದು ತೀರ್ಮಾನಕ್ಕೆ ಬಂದಿದ್ದೇವೆ !"

"ಅಂದರೆ ಆಕೆಗೆ ಟ್ರೀಟ್‌ಮೆಂಟ್ ಅಗತ್ಯವಿಲ್ಲವೆ ?" ಎಂದ ಗೌಡ ಅಚ್ಚರಿಗೊಂಡು.

"ಅಗತ್ಯವಿಲ್ಲ ಎಂದರೆ ಹೀಗೆ. ಟ್ರೀಟ್‌ಮೆಂಟನಿಂದ ಯಾವ ತರಹದ ಉಪಯೋಗವೂ ಆಗುವ ಹಾಗೆ ಕಾಣುವುದಿಲ್ಲ...."

"ಅಂದರೆ....?"

"ಬೇನೆ ಉಪಚಾರದ ಅವಸ್ಥೆಯನ್ನು ಮೀರಿಹೋಗಿದೆ ..ಅವರ ಮೈಯಲ್ಲಿ ರಕ್ತವಿಲ್ಲ. ಇದ್ದ ರಕ್ತವೆಲ್ಲ ವಿಪರೀತ ಇನ್‌ಫೆಕ್ಷನ್ ಆಗಿಹೋಗಿವೆ....ಅಲ್ಲದೆ ಆ ಇನ್‌ಫೆಕ್ಷನ್ ವಿಪರೀತ ತೀವ್ರಸ್ವರೂಪದ್ದಿದೆ."

"ಹಾಗಾದರೆ ಮುಂದೆ....?" ಎಂದು ಗೌಡ ಅನುಮಾನಿಸಿದ.

"ಊರಿಗೆ ಕರೆದುಕೊಂಡುಹೋಗಿರಿ .."

"ಇಲ್ಲಿ ಇಟ್ಟುಕೊಳ್ಳಲಿಕ್ಕಾಗುವುದಿಲ್ಲವೆ ?"

"ಏನು ಪ್ರಯೋಜನ ? ಇಟ್ಟುಕೊಳ್ಳಬಹುದು. ಆದರೆ ಅವರನ್ನು ಬೇರೆಯಾಗಿಯೇ ಇಡಬೇಕಾದೀತು."

ಗೌಡ ಸುಮ್ಮನಾಗಿಯೇ ಇದ್ದ. ಡಾಕ್ಟರರೇ ಮುಂದುವರಿದರು—ತುಸು ನಿಷ್ಠುರವಾಗಿಯೆ,

"ಇಷ್ಟು ದಿವಸ ದುರ್ಲಕ್ಷ್ಯ ಮಾಡಿದನಂತರ ಇನ್ನೇನೂ ಸಾಧ್ಯವಿಲ್ಲ—ನಾನು ನಿರುಪಾಯನಾಗಿದ್ದೇನೆ. ಈ ಹೊತ್ತು ಮಧ್ಯಾಹ್ನವೇ ಇಲ್ಲಿಂದ ಡಿಸ್‌ಚಾರ್ಜ್ ಮಾಡಲಾಗುತ್ತದೆ...."

"ಆಯಿತು. ನೀವೇ ಹೇಳಿದಮೇಲೆ...." ಎಂದ ಗೌಡ, ಏನಾದರೊಂದು ಮಾತನಾಡಬೇಕೆಂದು. ಒಂದೆರಡು ನಿಮಿಷ ತಡೆದು ಡಾಕ್ಟರರು ಹೇಳಿದರು :

"ಈ ವಿಷಯದಲ್ಲಿ ನನಗೆ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ನೀವು ಹೇಳಬಹುದು ಎಂದರೆ ಹೇಳುತ್ತೇನೆ.".

"ಹೇಳಬಹುದಲ್ಲ. ಅದಕ್ಕೇನಂತೆ ?"

"ನೀವು ತಪ್ಪು ತಿಳಿದುಕೊಳ್ಳಬಾರದು—ಅದಕ್ಕೆ ಹೇಳಿದೆ ಆ ಮಾತನ್ನು. ನಿಮಗೆ ಇವರು ಏನೂ ಆಗಬಾರದು ಎಂದು ಹೇಳಿದಿರಲ್ಲವೆ, ನೀವು ಮೊನ್ನೆ?"

"ಹೌದು...."

"ಹಾಗಾದರೆ ಈ ಕೇಸಿನಲ್ಲಿ ಇಷ್ಟು ತೊಂದರೆ ತೆಗೆದುಕೊಂಡು ಇಲ್ಲಿಯ ವರೆಗೆ ನೀವು ಯಾಕೆ ಬಂದದ್ದು ?"

"ಏನೋ ಮೊದಲಿನಿಂದ...." ಎಂದು ಅರ್ಧಕ್ಕೆಯೇ ತಡೆದ ಗೌಡ.

ಡಾಕ್ಟರರ ಮಾತಿನ ರೀತಿ ಗೌಡನನ್ನು ಸಿಟ್ಟಿಗೆಬ್ಬಿಸುತ್ತಿತ್ತು. ಈ ವಿಷಯ ಆತನಿಗೇನು ಸಂಬಂಧ ಎಂದು. ಆದರೆ ಡಾಕ್ಟರರ ಗಂಭೀರ ನಿಷ್ಠುರವಾದ ಬಗೆಯನ್ನು ನೆನೆದು ಸುಮ್ಮನಿದ್ದ.

"ಇದು ನೋಡಿರಿ, ಮಿಸ್ಟರ್, ನನಗೆ ಈ ಮುಚ್ಚುಮರೆ ಬೇಕಾಗಿಲ್ಲ...."

"ಮುಚ್ಚುಮರೆ ಏನಿದರಲ್ಲಿ ?"

"ಏನು ಎಂಬುದು ನಿಮಗೆ ಗೊತ್ತು. ಇದರಲ್ಲಿಯ ನಿಮ್ಮ ಇಂಟರೆಸ್ಟ್ ಏನು ನನಗೆ ತಿಳಿಯಬೇಕಾಗಿದೆ...."

ಗೌಡನಿಗೆ ತಡೆಯದಾಯಿತು. ತನ್ನ-ಇವರ ಸಂಬಂಧವನ್ನು ಕುರಿತು ಕೇಳಲಿಕ್ಕೆ ಈತನಿಗೆ ಯಾವ ಅಧಿಕಾರ ಎಂದು ಕೇಳಬೇಕೆಂದಿದ್ದ. ಆದರೆ ಹಾಗೆ ನೇರವಾಗಿ ಕೇಳಲಾಗಲಿಲ್ಲ.

"ಮೊದಲಿನಿಂದಲೂ ನಮಗೆ ಏನೋ ಒಂದು ರೀತಿಯಿಂದ ವಿಶೇಷ ಪರಿಚಿತರು...."

"ಪರಿಚಯಕ್ಕಾಗಿ ಇಷ್ಟರಮಟ್ಟಿಗೆ ಯಾರೂ ಮಾಡುವುದಿಲ್ಲ !"

"ಅದನ್ನೆಲ್ಲ ತೆಗೆದುಕೊಂಡು ಏನು ಮಾಡುವುದಿದೆ ಈಗ ?"

"ನನಗೇನೂ ಮಾಡುವುದಿಲ್ಲ. ನೀವು ಸಿಟ್ಟಿಗೆದ್ದರೆ ನನಗೇನೂ ಮಾತಾಡ ತಕ್ಕದ್ದೂ ಇಲ್ಲ. ನಿಮ್ಮ ಸಲುವಾಗಿಯೇ ಎಂದು ಒಂದು ಮಾತು ಹೇಳ ಬೇಕೆಂದಿದ್ದೆ...."

"ಏನದು ಮಾತು ?" ಎಂದ ಗೌಡ ಸಿಡುಕಿನಲ್ಲಿಯೆ.

"ನೀವು ಈ ರೋಗಿಯ ಮಗಳಿಗಾಗಿ ಇದನ್ನೆಲ್ಲಾ ನಡಸಿದ್ದೀರಿ...."

"ಅದರ ಬಗ್ಗೆ ನೀವು ಮಾತನಾಡಬೇಕಿಲ್ಲ !"

"ಅಷಬೇಕಿಲ್ಲ, ಒಪ್ಪುತ್ತೇನೆ....ನೀವು ಸುಶಿಕ್ಷಿತರು. ತಿಳಿಯಿತೆ ?"

"ನೀವು ನನ್ನ ಅವಮಾನ ಮಾಡುತ್ತಿದ್ದೀರಿ, ಡಾಕ್ಟರೆ !"

"ನಿಮ್ಮ ಅಪಮಾನವನ್ನು ನಾನು ಮಾಡುತ್ತಿಲ್ಲ. ನೀನೇ ಮಾಡಿಕೊಂಡಿದ್ದೀರಿ...."

"ಅದು ನನಗೆ ಸಂಬಂಧಿಸಿದ ವಿಷಯ."

"ನಿಮಗೆ ಸಂಬಂಧಿಸಿದಾದ್ದರೂ ಎಲ್ಲರಿಗೂ ಸಂಬಂಧಿಸಿದ್ದಾಗಿದೆ. ಈ ಮಾತನ್ನು ನಾನು ಹೇಳುತ್ತಿರುವುದು ಆ ಮಗಳ ಪರೀಕ್ಷೆಮಾಡಿದ ಡಾಕ್ಟರ್ ಎಂದು ಹೇಳುತ್ತಿದ್ದೇನೆ; ಒಬ್ಬ ಸುಶಿಕ್ಷಿತ ಮನುಷ್ಯ ಎಂದೂ ಹೇಳುತ್ತಿದ್ದೇನೆ. ಇದು ಒಳ್ಳೆಯದಲ್ಲ, ಎಂದಿಷ್ಟೇ ಹೇಳುತ್ತೇನೆ...."

"ಅದು ಒಳ್ಳೆಯದೋ ಕೆಟ್ಟದೊ, ನನಗೆಲ್ಲ ತಿಳಿಯುತ್ತದೆ !"

"ನಿಮಗೆ ತಿಳಿಯುತ್ತಿದ್ದರೆ....ಆಯಿತು ! ನಿಮಗೆ ತಿಳಿಯುತ್ತದೆ ಎಂದ ಮೇಲೆ...."

ಎಂದು ವ್ಯಂಗವಾಗಿ ತಡೆದರು. ಆದರೆ ಅವರಿಗೆ ಹೇಳಬೇಕಾದುದನ್ನು ತಡೆಯಲಾಗದಾಗಿ ಮುಂದುವರಿದರು. ಅವರಲ್ಲಿಯ ಸಾಮಾಜಿಕ ಬುದ್ಧಿ ಜಾಗೃತವಾಗಿತ್ತು. ಅಂತೆಯೇ ಹೇಳಿದರು :

"ನಿಮಗೆ ತಿಳಿಯುತ್ತಿಲ್ಲ, ಅಂತೆಯೂ ಹೇಳಬೇಕಾಗಿದೆ. ಅದೂ ನಿಮ್ಮ ಸ್ವತಹದ ಹಿತದ ದೃಷ್ಟಿಯಿಂದ...."

"ನನ್ನ ಹಿತ ನನಗೆ ಗೊತ್ತಾಗುತ್ತದೆ...." ಎಂದು ಗೌಡ ಅರ್ಧನುರ್ಧ ಕುರ್ಚಿಯಿಂದ ಎದ್ದೇಬಿಟ್ಟ.

"ನೀವು ಹೋಗಬಹುದು. ನನಗೇನೂ ನಿಮ್ಮ ಕೂಡ ಹರಟೆ ಹೊಡೆದು ಹೊತ್ತು ಕಳೆಯಬೇಕಾಗಿಲ್ಲ ! ಆದರೂ ಒಂದು ನಿಮಿಷ ತಡೆಯಿರಿ ನಿಮ್ಮ ರೋಗಿಯ ಪರೀಕ್ಷೆಯಾದನಂತರ ಅವರ ಮಗಳ ರಕ್ತದ ಪರೀಕ್ಷೆಮಾಡಿದೆವು. ಇದು ನಿಮಗೆ ಗೊತ್ತಿರಲಿಕ್ಕೆ ಸಾಕು "

"ಹುಂ...."

"ಯಾತಕ್ಕಾಗಿ ಆ ಪರೀಕ್ಷೆ ಮಾಡಿದೆವು ಗೊತ್ತೆ ?"

"ನನಗೆ ಹೇಗೆ ಗೊತ್ತಾಗಬೇಕು ?"

"ಆ ಪರೀಕ್ಷೆಯಲ್ಲಿ ಕಂಡ ವಿಷಯವನ್ನೇ ತಿಳಿಸಬೇಕಾಗಿದೆ...."

"ಏನದು ವಿಷಯ ?"

"ಮುದುಕಿಗೆ ಯಾವ ಬೇನೆ ಇದೆ ಎಂಬುದು ನಿಮಗೆ ಕೆಲಮಟ್ಟಿಗಾದರೂ ಗೊತ್ತಿರಬೇಕಲ್ಲ ?"

"ಹುಂ...."

"ಅದು ಆಕೆಯ ಮಗಳಿಗೂ ಇದೆ ! ಅದಕ್ಕೆ ಹೇಳಿದೆ, ನಿಮ್ಮ ಹಿತದ ಸಲುವಾಗಿ ಎಂದು !"

ಗೌಡನಿಗೆ ಮಾತು ಬಾರದಾಯಿತು. ಆತನ ಸಿಡುಕು, ಉದ್ಧಾಮತನ

ಎಲ್ಲವೂ ಆ ಮಾತಿನ ಹೊಡೆತಕ್ಕೆ ಮಾಯವಾದವು. ಆದರೂ ತಡವರಿಸಿದ :

"ಅದು ಹೇಗೆ ಸಾಧ್ಯ, ಡಾಕ್ಟರರೆ ?"

"ಹೇಗೆ ಸಾಧ್ಯ ಎಂಬ ವಿಷಯವನ್ನು ಡಾಕ್ಟರರಿಗೆ ಬಿಟ್ಟುಬಿಡಿರಿ. ಪರೀಕ್ಷೆ ಮಾಡಿದ್ದೇವೆ. ಅದರ ಬಗ್ಗೆ ನಿಶ್ಚಿತವಾಗಿ ನಮಗೆ ನಿಷ್ಕರ್ಷೆಯಾಗಿದೆ. ಎಂದೇ ಈ ಮಾತುಗಳನ್ನು ಆಡುತ್ತಿದ್ದೇನೆ....ನಿಮಗೆ ಇನ್ನೂ ನಾಲ್ಕು ದಿವಸ ಸುರಕ್ಷಿತ ವಾಗಿ ಬದುಕಬೇಕಾಗಿದ್ದರೆ ನನ್ನ ಮಾತುಗಳನ್ನು ಕೇಳಬಹುದು. ಇಲ್ಲವಾದರೆ ನಿಮಗೆ ತಿಳಿದಂತೆ. ನಿಮಗೆ ಹೆಂಡತಿಮಕ್ಕಳು ಇದ್ದಾರಲ್ಲವೆ?" ಎಂದು ಬೇರೆ ಕಡೆಗೆ ತಿರುಗಿದರು. ಗೌಡನಿಗೆ ಕುತೂಹಲಕ್ಕಿಂತ ಹೆದರಿಕೆಯೇ ಹೆಚ್ಚಾಗಿ,

"ಆದರೆ....ಡಾಕ್ಟರ್...." ಎಂದೇನೋ ಕೇಳಬೇಕೆಂದ.

"ನಿಮಗೆ ಸಂದೇಹವಿದ್ದರೆ ಈ ಬ್ಲಡ್‌ಟೆಸ್ಟಿನ ಪರಿಣಾಮವನ್ನು ನೀವೆಯೇ ಓದಿಕೊಳ್ಳಬಹುದು...." ಎಂದು ಮೂರುಕಾಗದಗಳನ್ನು ಮುಂದೆಹಾಚಿದರು.

"ಇದಕ್ಕೆ ಉಪಾಯವಿಲ್ಲವೆ, ಡಾಕ್ಟರ್....?"

"ಅದು ಅನುವಂಶಿಕವಾಗಿ ರಕ್ತದಿಂದ ಬಂದದ್ದು....ದೂರವಿರುವುದೊಂದೇ ಮಾರ್ಗ."

"ಆದರೆ...." ಎಂದು ಗೌಡ ತಡವರಿಸಿದ. ಆತನ ಅರ್ಥ ಡಾಕ್ಟರರಿಗೆ ತಿಳಿದಿರಬೇಕು. ಆದರೆ ಇಂಥವರಿಗೆ ಯಾವ ಸಮಾಧಾನದ ಮಾತನ್ನೂ ಅವರು ಹೇಳಬಯಸುತ್ತಿದ್ದಂತಿರಲಿಲ್ಲ. ಆದರೂ ಕೊನೆಯದಾಗಿ,

"ಇದು ಒಬ್ಬರ ಪ್ರಶ್ನೆಯಲ್ಲ, ಇಡೀ ಸಮಾಜದ ಪ್ರಶ್ನೆ. ಎಂದೇ ಇಷ್ಟು ಮಾತನಾಡಿ ನೇರವಾಗಿ ನನಗೆ ಯಾವ ಸಂಬಂಧವಿರದಿದ್ದರೂ ಹೇಳಿದ್ದೇನೆ. ತಿಳಿದವರು ತಡೆಹಾಕದ ಹೊರತು ಇದು ನಿಲ್ಲತಕ್ಕದಲ್ಲ ಎಂದೇ ನಿಮ್ಮೆದುರಿಗೆ ಆಡಿದ್ದೇನೆ. ಆ ಹೆಣ್ಣುಮಗಳಿಗಾದರೂ ಈ ಮಾತನ್ನು ನೀವು ತಿಳಿಹೇಳ ಬೇಕು...." ಎಂದರು.

ಡಾಕ್ಟರರ ಕೋಣೆಯಿಂದ ಹೊರಬೀಳುತ್ತಿರುವಾಗ ಗೌಡನ ಮುಖ ಅರ್ಧ ಕ್ಕರ್ಧ ಇಳಿದುಹೋಗಿತ್ತು. ಈವರೆಗಿನ ಉತ್ಸಾಹದ ಬದಲು ಅವನ ಮುಖ ದಲ್ಲಿ ಯಾವುದೋ ಒಂದು ತೀವ್ರವಾದ ಹೆದರಿಕೆ ಸ್ಪಷ್ಟವಾಗಿ ಕಾಣುತ್ತಿತ್ತು. ಕಾಲೆಳೆಯುತ್ತಲೇ ರಂಗಸಾನಿ ಇದ್ದ ವಾರ್ಡಿನ ಕಡೆಗೆ ನಡೆದು ಬಂದು, ಆಕೆಯ ಕಾಟಿನ ಹತ್ತಿರ ಇದ್ದ ಕುರ್ಚಿಯಲ್ಲಿ ಯೋಚನಾಪರನಾಗಿ ಕುಸಿಬಿದ್ದ. ಆತನ ಸ್ಥಿತಿಯನ್ನು ನೋಡಿ ರಂಗಸಾನಿಗೂ ಆಶ್ಚರ್ಯವೆನಿಸಿತು. ಆತ ಡಾಕ್ಟರರ ಕಡೆಯಿಂದ ಬಂದದ್ದು ಆಕೆಗೆ ಗೊತ್ತಿದ್ದುದರಿಂದ ತನ್ನ ವಿಷಯ

ವಾಗಿಯೇ ಡಾಕ್ಟರರು ಏನಾದರೂ ಹೇಳಿದ್ದಕ್ಕಾಗಿ ಆತ ಚಿಂತೆಗೊಳಗಾಗಿರ ಬೇಕೆಂದು ಭಾವಿಸಿ, ಕೇಳಿದಳು :

"ಏನು ? ಏನೆಂದು ಹೇಳಿದರು, ಡಾಕ್ಟರರು ?"

"ಇಂದು ಮಧ್ಯಾಹ್ನ ನಾವಿಲ್ಲಿಂದ ಹೊರಡಬೇಕು !"

"ಅದೇಕೆ ?"

"ಇಲ್ಲಿಂದ ಡಿಸ್‌ಚಾರ್ಜ್ ಮಾಡುತ್ತಾರಂತೆ."

"ಅಂದರೆ ಇಲ್ಲಿ ಉಪಚಾರವಾಗುವುದಿಲ್ಲವೆ ?"

"ಉಪಚಾರ ಊರಲ್ಲಿಯೇ ಇನ್ನು....ಇಲ್ಲಿ ಇದ್ದರೂ ಸರಿ, ಇರದಿದ್ದರೂ ಸರಿ ಎಂದರು."

"ಔಷಧ ಹೇಳಿದ್ದಾರೆಯೆ ?"

"ಹುಂ....ಬರೆದುಕೊಡುತ್ತೇನೆಂದು ಹೇಳಿದರು...."

"ಅದಕ್ಕೆ ಇಷ್ಟೇಕೆ ಚಿಂತೆಮಾಡುತ್ತಿದ್ದೀರಿ? ಮತ್ತಿನ್ನೇನಾದರೂ ಹೇಳಿದರೆ?"

"ಮತ್ತಿನ್ನೇನು ಹೇಳುವುದು ? ಇಷ್ಟು ಹೇಳಿದರೆಂದಮೇಲೆ..."

"ಇಲ್ಲಿಯೇ ಇದ್ದರೆ ಅನುಕೂಲವಲ್ಲವೆ ?"

"ಅನುಕೂಲ ಯಾರಿಗೆ ?", ಗೌಡನ ದನಿ ನಿಷ್ಠುರವಾಗಿತ್ತು.

"ಅನುಕೂಲವೆಂದರೆ ಹೀಗೆ...ಅಂ..." ಎಂದು ರಂಗಸಾನಿ ತಡೆದಳು. ಅದೇಕೋ ಗೌಡನ ಮಾತು, ಮಾತಿನ ರೀತಿ ಆಕೆಗೆ ವಿಚಿತ್ರವೆನಿಸತೊಡಗಿದ್ದವು. ಆತನ ನಿಸ್ಸಂಕೋಚದ ವೃತ್ತಿ ಎಲ್ಲಿಯೋ ಮಾಯವಾಗಿತ್ತು. ಬಿಚ್ಚು ಮನಸ್ಸಿನಿಂದ ಆತ ಮಾತನಾಡುತ್ತಿರಲಿಲ್ಲವೆಂಬುದು ರಂಗಸಾನಿಗೂ ತಿಳಿಯದಿರಲಿಲ್ಲ. ಕಿಟಕಿಯೊಳಗಿನಿಂದ ಹೊರಗಡೆ ನೋಡುತ್ತ ನಿಂತಿದ್ದ ಸರೋಜಿನಿ ಮಾತುಗಳನ್ನು ಕೇಳುತ್ತಿದ್ದಳು. ಗೌಡ ಅಲ್ಲಿ ಇರುವವರೆಗೆ ಆಕೆ ಮುಖ ತಿರುಗಿಸುವುದು ಸಾಧ್ಯವೇ ಇರಲಿಲ್ಲ. ಆದರೆ ತಾಯಿಯ ಬೇನೆಯ ಬಗೆಯಲ್ಲಿ ನಿಜವಾದ ಕಲ್ಪನೆ ಗೌಡನ ಮಾತುಗಳಿಂದ ಆಕೆಗೆ ಹೊಳೆದಿತ್ತು. ಆದರೆ ವಸತಿಗೃಹದಲ್ಲಿಯ ರಾತ್ರಿಯ ನಂತರ ಆಕೆಗೆ ಯಾವುದೂ ಅಷ್ಟೇ ಎನಿಸುತ್ತಿತ್ತು. ಬದುಕಿನ ಆಸೆ ಕುಸಿದುಹೋದ ಆಕೆ ಅಂದಿನಿಂದ ಯಾವುದರ ಬಗೆಯಲ್ಲಿಯೂ ಆಕಾಂಕ್ಷೆಗಳನ್ನಿಟ್ಟುಕೊಂಡಿರಲಿಲ್ಲ. ಹೆದರಿಕೆಯನ್ನು ಉಳಿಸಿಕೊಂಡಿರಲಿಲ್ಲ. ಈ ಮಾತುಗಳಿಂದ ತಾಯಿಯ ಕತೆ ಮುಗಿದಂತೆಯೇ ಎಂಬರ್ಥವನ್ನು ಗ್ರಹಿಸಿ 'ಹಾಗಾದರೆ ಇನ್ನು ಮುಂದೇನು ?' ಎಂಬ ಯೋಚನೆಯಲ್ಲಿ ಸಿಲುಕಿದ್ದಳು. ಇನ್ನು ತಾಯಿ ಬಹುದಿವಸ ಬದುಕಲಾರಳೆಂಬ ಮನವರಿಕೆ ಆಕೆಗೆ ಊರು

ಬಿಡುವಾಗಲೇ ಆಗಿದ್ದರೂ ಆ ಸಂದರ್ಭ ಈಗ ತೀರ ಹತ್ತಿರ ಬಂದಂತೆನಿಸತೊಡಗಿತು. ಅಲ್ಲದೆ ಆಗ ಮಾಧವನ ಆಸೆಯಾದರೂ ಇತ್ತು. ಈಗ ಮಾಧವ ಎಲ್ಲಿಯೊ ? ಆತ ಯಾತಕ್ಕೆ ಬರಲಿಲ್ಲವೊ ?....

ಐದು ನಿಮಿಷ ಯಾರೂ ಮಾತನಾಡಲಿಲ್ಲ. ಕೊನೆಗೆ ಗೌಡನೆಂದ :

"ಊರಿಗೆ ನಾಳಿಗೇ ಹೊರಡತಕ್ಕದ್ದು....ಇಲ್ಲಿ ಇದ್ದಾದರೂ ಮಾಡುವುದೇನು ?"

"ಊರಿಗೆ ಎಂದರೆ....?"

"ನಿಮ್ಮೂರಿಗೇ ಹೋಗಬಹುದಲ್ಲ ?''

"ಹಾಗಾದರೆ ಅಲ್ಲಿ ಉಪಚಾರ ಆಗಬಹುದೆ ?"

"ಇನ್ನೆಲ್ಲಿಯೂ ಉಪಚಾರ ಆಗುವ ಹಾಗಿಲ್ಲ...."

ರಂಗಸಾನಿಯು ಸುಮ್ಮನಾದಳು. ತನಗೆ ಗುಣವಾಗಲಿಕ್ಕಿಲ್ಲವೆಂಬ ಸಂಶಯ ಆಕೆಗಿದ್ದರೂ ಈ ರೀತಿ ಗೌಡ ಖಂಡಿತವಾಗಿ ಮಾತನಾಡುತ್ತಿರುವುದನ್ನು ಕೇಳಿ, ಡಾಕ್ಟರರೇ ಹೇಳಿರಬೇಕೆಂದು ಇನ್ನೂ ನಿರಾಶಳಾದಳು. ದನಿ ಇನ್ನೂ ಕ್ಷೀಣವಾಯಿತು. ಒಂದೆರಡು ನಿಮಿಷಗಳಲ್ಲಿಯೇ ಆಕೆಯ ಕಣ್ಣೊಳಗಿಂದ ನೀರು ಹರಿಯತೊಡಗಿತು. ಗೌಡ ತನ್ನ ಹಣೆಯ ಮೇಲೆ ಕೈಯಾಡಿಸುತ್ತ ಇನ್ನೆಲ್ಲಿಯೋ ನೋಡುತ್ತಿದ್ದ. ಕೊನೆಗೆ ರಂಗಸಾನಿ ಅಂದಳು :

"ಇಷ್ಟೆಲ್ಲ ನೀವು ಮಾಡಿದ್ದು ಯಾವುದೂ ಉಪಯೋಗವಾಗಲಿಲ್ಲ...."

"ಹುಂ....ಎಲ್ಲವೂ ವ್ಯರ್ಥವಾಯಿತು...." ಎಂದ ಗೌಡ ವಿಮನಸ್ಕನಾಗಿ ಆದರೆ ಆತನ ಅರ್ಥ ರಂಗಸಾನಿಯ ಮಾತಿನ ಅರ್ಥದಿಂದ ಬೇರೆಯಾಗಿತ್ತು ! ಅರೆನಿಮಿಷ ತಡೆದು ಕೇಳಿದ :

"ಹಾಗಾದರೆ ಮುಂದೇನು ಮಾಡುವುದು ?"

"ಏನು ಮಾಡುವುದು.... ? ಬದುಕಬಹುದು ಎಂದು ನನಗೆ ಎಂದಿಗೂ ಅನಿಸಿಲ್ಲ. ಆದರೆ....ನಾನು ಏನು ಹೇಳಿ ಏನು ಪ್ರಯೋಜನ ? ಎಲ್ಲವೂ ನಿಮ್ಮನ್ನು ಕೂಡಿದೆ...."

"ನಾನೇನು ಮಾಡಬಹುದು ?"

"ಏನು ಮಾಡಿದರೂ ನೀವೇ. ನನ್ನದು ಹೇಗೂ ಆದೀತು. ಆದರೆ ಸರೋಜಿನಿ...."

ಸರೋಜಿನಿಗೆ ಕಣ್ಣೀರು ಧಾರೆಯಾಗಿ ಹರಿಯುತ್ತಿದ್ದಿತು. ಆದರೆ ಆಕೆ ಮುಖ ತಿರುವಲಿಲ್ಲ.

"ಅದು ಮಾತ್ರ ನನಗೆ ಬಗೆಹರಿಯದ ಮಾತು...." ಎಂದ ಗೌಡ ಒಮ್ಮೆಲೆ ಖಂಡಿತವಾಗಿ. ಡಾಕ್ಟರರ ಕೋಣೆಯಿಂದ ಹೊರಟಾಗಿನಿಂದ ಆತನನ್ನು ಆವರಿಸಿದ ಹೆದರಿಕೆ ಆ ಕ್ಷಣಕ್ಕೆ ಆತನನ್ನು ಹಾಗೆ ಮಾತನಾಡಿಸಿತೆಂದೇ ಹೇಳಬೇಕು. ಆದರೆ ರಂಗಸ್ವಾನಿಗೆ ಮಾತ್ರ ಆತನ ಮಾತಿನ ಅರ್ಥವಾಗಲಿಲ್ಲ. ಸರೋಜಿನಿಯ ವಿಪರೀತ ವೃತ್ತಿಯೇ ಅದಕ್ಕೆ ಕಾರಣವೆಂದು ಆಕೆ ತಿಳಿದಳು. ಅದಕ್ಕೆಂದೇ ತನ್ನ ದೇಹದ, ಮನಸ್ಸಿನ ಸ್ಥಿತಿಯನ್ನು ಮರೆತು ಹೇಳಿದಳು :

"ಈಗಲಂತೂ ಆಯಿತಲ್ಲ. ಹೇಗಾದರೂ ಆಕೆ ನಿಮ್ಮ ಕೊರಳಲ್ಲಿ...."

"ಅದೇ ನನಗೆ ಚಿಂತೆಯಾಗಿದೆ !"

"ಆಕೆ ಒಪ್ಪುವುದಿಲ್ಲ ಎಂದು ಹೀಗೆನ್ನುತ್ತಿರಾ ?"

"ಆಕೆ ಒಪ್ಪಿದರೂ ನನಗೆ ದೂರವಾಗಿರಬೇಕಾಗಿದೆ...."

ಸರೋಜನಿಗೆ ಆಶ್ಚರ್ಯವೆನಿಸಿತು ಒಂದರೆಕ್ಷಣ ಸಮಾಧಾನವೂ ಅನಿಸಿತು. ಆದರೆ ಅದು ಅರೆಕ್ಷಣ ಮಾತ್ರ. ಇನ್ನುಮುಂದೆ ಗೌಡ ತನ್ನ ಗೊಡವೆ ಬಿಟ್ಟರೆ ಏನು ?—ಎಂದೆನಿಸಿತು.

"ನೀವು ಹೀಗೆ ಸಿಟ್ಟಿಗೆದ್ದರೆ ಹೇಗೆ, ಗೌಡರೇ ?"

"ಸಿಟ್ಟಲ್ಲ, ಯಾವುದೂ ಅಲ್ಲ. ಈಗ ಅದಷ್ಟೆ ಸಾಕಾಗಿದೆ ನನಗೆ !"

"ಏನಾದದ್ದು ಈಗ? ನನ್ನ ಮುಂದೆ ಹೇಳಬಾರದೆ? ನಾನೆಲ್ಲವನ್ನೂ ಸರಿಪಡಿಸುತ್ತೇನೆ...."

"ನೀನೇನೂ ಮಾಡಲಾರೆ...."

"ಯಾಕೆ ? ಏನಾಯಿತು ?"

"ಆಗುವುದೇನು ? ನನಗೆಯೇ ಈಗ ದೂರವಿರಬೇಕಾಗಿದೆ ಎಂದು ಹೇಳಲಿಲ್ಲವೆ ?"

"ಹೀಗೆಂದರೆ ಹೇಗೆ ? ಹೀಗೆ ನಡುನೀರಿನಲ್ಲಿ ಕೈಬಿಟ್ಟರೆ...."

"ನಡುನೀರಿನಲ್ಲಿ ಕೈಹಿಡಿದರೆ ನಾನೇ ಮುಳುಗುತ್ತೇನೆ !"

"ಇದೆಂಥ ಮಾತು, ಗೌಡರೆ ? ನನ್ನ ಸ್ಥಿತಿ ಹೀಗಾದಾಗ ನೀವು ಹೀಗೆ ಮಾತನಾಡಿದರೆ ನಾನು ಏನು ಮಾಡಲಿ ?"

"ಯಾವ ಯೋಚನೆಯನ್ನು ಮಾಡುವ ಅಗತ್ಯವಿಲ್ಲ" ಎಂದು ನಡುವೆಯೇ ಸರೋಜಿನಿ ಹೇಳಬೇಕೆಂದುಕೊಂಡಳು. ಆದರೆ ಆಕೆಯ ಮನಃಸ್ಥಿತಿಯೇ ವಿಚಿತ್ರವಾಗಿತ್ತು. ಅವರಿಬ್ಬರೂ ತನ್ನ ವಿಷಯವಾಗಿಯೇ ಮಾತನಾಡುತ್ತಿದ್ದರೂ ಯಾರೋ ಎಲ್ಲಿಯೋ ಯಾರ ಬಗೆಯಲ್ಲಿಯೇ ಮಾತನಾಡುತ್ತಿದ್ದಂತೆ

ಆಕೆಗೆ ಭಾಸವಾಗುತ್ತಿತ್ತು. ಮಾಧವನ ಆಸೆ ಕಡಿದಾಗಿನಿಂದ ಪ್ರಸ್ತಾವರೇನು, ಏನಿದ್ದರೇನು ಎಂಬ ಮನೋವೃತ್ತಿ ಬೆಳೆದುನಿಂತಿತ್ತು. ಗೌಡನೆಂದ :

"ನಾನಾದರೂ ಏನು ಮಾಡಲಿ ? ನನಗಿನ್ನೂ ನಾಲ್ಕು ದಿನ ಬದುಕು ಬೇಕಾಗಿದೆ...."

"ಹೀಗೇಕೆ ಮಾತನಾಡುತ್ತಿದ್ದೀರಿ, ಗೌಡರೆ ?"

"ಎಲ್ಲವೂ ಸುಸೂತ್ರವಾಗಿದ್ದರೆ ನೀನು ಹೇಳಿದ ಹಾಗೆಯೆ ಮಾಡುತ್ತಿದ್ದೆ. ಆಕೆಯ ಸಲುವಾಗಿಯೇ ಅಲ್ಲವೆ ಇಲ್ಲಿಯವರೆಗೆ ಬಂದದ್ದು.... ಆದರೆ ಇನ್ನು ಮುಂದೆ...." ಎಂದು ತಡೆದ.

"ಈಗ ಆದದ್ದಾದರೂ ಏನು ?"

"ಆಗುವುದೇನು ? ನಾನಂತೂ ಹಾಳಾದೆ...."

"ನನಗಂತೂ ಏನೂ ತಿಳಿಯುವುದಿಲ್ಲ, ನಿಮ್ಮ ಮಾತು...."

"ನಿನ್ನ ಬೇನೆ ನಿನ್ನ ಮಗಳಿಗೂ ಇದೆ !"

ಸರೋಜಿನಿಗೆ ಯಾರೋ ಎದೆಯಲ್ಲಿ ಇರಿದಂತಾಯಿತು. ಕಣ್ಣು ಮುಂದಿನ ದೃಶ್ಯ ಮಸಕಾಯಿತು. ದೇಹದ ಭಾರವನ್ನು ಎತ್ತಿ ಹಿಡಿಯಲು ಕಾಲುಗಳು ಅಸಮರ್ಥವಾದಂತಾದವು....

"ಇದೇನು ಹುಚ್ಚು, ಗೌಡರೆ....?"

"ಹುಚ್ಚಲ್ಲ, ಯಾವುದೂ ಅಲ್ಲ. ಡಾಕ್ಟರರೇ ಹೇಳಿದ್ದಾರೆ !"

"ದುಡ್ಡು ಸೆಳೆಯುವುದಕ್ಕೆಂದು ಅವರೆಲ್ಲ ಹಾಗೆ ಹೇಳುವುದು...."

"ಆಕೆಯನ್ನು ಪರೀಕ್ಷೆ ಮಾಡಿಯೇ ಹೇಳಿದ್ದಾರೆ."

ಸರೋಜಿನಿಗೆ ಪ್ರಜ್ಞೆ ತಪ್ಪುವುದರಲ್ಲಿತ್ತು. "ಅಮ್ಮಾ!" ಎಂದು ಚೀಟ್ಟನೆ ಚೀರಿ, ಇದ್ದಕ್ಕಿದ್ದ ಹಾಗೆಯೇ ಕಿಟಕಿಯ ಹತ್ತಿರ ಕುಸಿದು, ನೆಲಕ್ಕೆ ಬಿದ್ದಳು. ಗೌಡನಿಗೆ ಏಳಬೇಕೆಂದು ಮನಸ್ಸಾಗಲಿಲ್ಲ. ಆದರೆ ಉಪಚಾರಕ್ಕೆಂದು ಏಳಲೇ ಬೇಕಾಯಿತು. ದೂರದಲ್ಲಿದ್ದ ದಾದಿಯು ಓಡುತ್ತ ಬಂದು ಸರೋಜಿನಿಯನ್ನು ಏಳಿಸಿ, ಮೋರೆಗೆ ನೀರು ಚಿಮುಕಿಸಿ ಹುಷಾರಾಗಿಸಿದಳು. ತನ್ನ ತಾಯಿಯ ಸ್ಥಿತಿಯನ್ನು ನೆನೆದು ಆಕೆ ಹೀಗಾಗಿರಬೇಕೆಂದು ಆಕೆಗೆ ಸಮಾಧಾನ ಹೇಳಿ ಹೋದಳು. ಸರೋಜಿನಿಯ ಕಣ್ಣೆದುರು ಸುತ್ತಲಿನ ಪ್ರಪಂಚ ಗಿರ್ರೆಂದು ಬುಗುರಿಯಂತೆ ತಿರುಗುತ್ತಿತ್ತು.

"ಕೊನೆಗೆ ಏನು ಮಾಡುವುದೆಂದಹಾಗಾಯಿತು ? ಇಲ್ಲಿಯೇ ಇರಲಿಕ್ಕೂ ಬರುತ್ತದೆ. ಇನ್ನರ್ಧಗಂಟೆಯಲ್ಲಿ ನಾನು ಅವರಿಗೆ ತಿಳಿಸಬೇಕು...." ಎಂದು

ಗೌಡ ಸುಳ್ಳು ಹೇಳಿದ—ರಂಗಸಾನಿಯನ್ನು ಯಾವುದಾದರೊಂದು ನಿರ್ಧಾರಕ್ಕೆ ತಲುಪಿಸಬೇಕೆಂದು. ಆದರೆ ಯಾವ ನಿರ್ಧಾರವನ್ನೂ ರಂಗಸಾನಿ ಮಾಡು ವಂತಿಲ್ಲ. ಗೌಡನ ಮಾತು, ಪ್ರವೃತ್ತಿ, ರೀತಿಗಳು ಆಕೆಯ ನಿರಾಶೆಯನ್ನು ಕ್ಷಣ ಕ್ಷಣಕ್ಕೂ ಇಮ್ಮಡಿಸುತ್ತಿದ್ದವು. ಗೌಡನ ಮಾತಿನಲ್ಲಿ ಆಕೆಗೆ ಎಷ್ಟು ಮಾತ್ರವೂ ವಿಶ್ವಾಸ ಹುಟ್ಟಲಿಲ್ಲ. ಆದರೆ ಯಾವ ಕಾರಣಕ್ಕಾಗಿಯೊ ಆತ ಕೈ ಬಿಡವು ದರಲ್ಲಿದ್ದ ಎಂಬುದರ ಬಗೆಯಲ್ಲಿ ಮಾತ್ರ ಆಕೆಗೆ ಸಂದೇಹವೇ ಉಳಿದಿರಲಿಲ್ಲ. ಹೀಗೆಂದು—ಬೇಡಿದಳು, ಅಂಗಲಾಚಿದಳು, ಚುಚ್ಚು ಮಾತನಾಡಿದಳು. ಆದರೆ ಯಾವುದಕ್ಕೂ ಗೌಡ ಗಮನ ಕೊಡಲಿಲ್ಲ. ಡಾಕ್ಟರರ ಮಾತುಗಳು ಆತನ ಮನಸ್ಸಿನ ಮೇಲೆ ಅಂಥ ಪರಿಣಾಮವನ್ನೇ ಮಾಡಿದ್ದುವು. ಅವನ ಹೃದಯದಲ್ಲಿ ಹೆದರಿಕೆ ಹೆಡೆ ತೆಗೆದು ನಿಂತಿತ್ತು.

"ಈ ಮಟ್ಟಿಗೆ ನನ್ನನ್ನು ನೀವು ಮೋಸಮಾಡಬಹುದೆಂದು ಅಂದುಕೊಂಡಿರ ಲಿಲ್ಲ" ಎಂದಳು ರಂಗಸಾನಿ ಕೊನೆಗೆ ತಡೆಯಲಾಗದೆ. ಆಕೆಯ ಅಸಹಾಯತೆ ಕಣ್ಣೀರಾಗಿ ಹರಿಯುತ್ತಿತ್ತು. ಸರೋಜಿನಿ ಕುಳಿತಲ್ಲಿಂದ ಎಲ್ಲವನ್ನೂ ನಿರ್ವಿಕಾರ ವಾಗಿ ನೋಡುತ್ತಿದ್ದಳು, ಕೇಳುತ್ತಿದ್ದಳು. ಗೌಡನೆಂದ :

"ಯಾವ ಮೋಸವನ್ನೂ ನಾನು ಮಾಡಿಲ್ಲ. ನಿಜವಾಗಿ ನಾನೇ ಮೋಸ ಹೋದಂತಾಗಿದೆ....ನಾನೇ ವಿಚಾರ ಮಾಡಬೇಕಿತ್ತು...."

"ಏನು ನಿಮ್ಮ ವಿಚಾರವೊ....ಹಾಳಾಗಿ ಹೋಗಲಿ ನನ್ನನ್ನು ಊರಿಗೆ ಮುಟ್ಟಿಸಿಬಿಡಿರಿ. ಏನಾದದ್ದು ಆಗುತ್ತದೆ. ನನ್ನ ದುರ್ದೈವಕ್ಕೆ ನೀವೇನು ಮಾಡೀರಿ....?"

ಕೊನೆಗೆ ಊರಿಗೆಯೆ ಹೋಗುವುದೆಂದು ಗೊತ್ತುಮಾಡಿ ಮಧ್ಯಾಹ್ನದ ನಾಲ್ಕು ಗಂಟೆಯ ಸುಮಾರಿಗೆ ರಂಗಸಾನಿಯನ್ನು ಆಸ್ಪತ್ರೆಯಿಂದ ವಸತಿ ಗೃಹದ ಕಡೆಗೆ ಸಾಗಿಸಲಾಯಿತು. ಮೊದಲೇ ಕ್ಷೀಣಳಾಗಿದ್ದ ರಂಗಸಾನಿ ಕಳೆದ ನಾಲ್ಕಾರು ಗಂಟೆಗಳಲ್ಲಿ ನಡೆದುದನ್ನು ನೆನೆದು ಇನ್ನೂ ಹತಾಶಳಾಗಿ ದ್ದಳು. ಬಂದದ್ದು ಬರಲೆಂದು ಹೆಚ್ಚುಕಡಿಮೆ ಕಣ್ಣು ಮುಚ್ಚಿಕೊಂಡೇ ಇರು ತ್ತಿದ್ದಳು. ಸರೋಜಿನಿಯನ್ನು ಮಾತನಾಡಿಸುವ ಧೈರ್ಯ ಇಬ್ಬರಿಗೂ ಉಳಿ ದಂತೆ ಕಾಣಲಿಲ್ಲ. ಅವರಿಬ್ಬರನ್ನು ಮಾತನಾಡಿಸಬೇಕೆಂಬ ಯೋಚನೆ ಕೂಡ ಸರೋಜಿನಿಗೆ ಹೊಳೆಯಲಿಲ್ಲ.

ಮರುದಿನ ಮುಂಜಾನೆ ಮೂವರ ಮುಂಬಯಿಯ ಯಾತ್ರೆ ಮುಗಿಯಿತು! ಊರುಬಿಟ್ಟು ಹೊರಡುವಾಗ ಮೂವರ ಮುಖದಲ್ಲಿಯೂ ಸೋಲು-ನಿರಾಶೆ-

ಎದೆಗುದಿ. ಸರೋಜಿನಿಗಾಗಿ ರಂಗಸಾನಿಯಲ್ಲಿ ಕಳವಳ, ಗೌಡನಿಗಾಗಿ ತಾತ್ಸಾರ-ದ್ವೇಷ ; ಗೌಡನಲ್ಲಿ ತನಗಾಗಿ ಹೆದರಿಕೆ. ರಂಗಸಾನಿ-ಸರೋಜಿನಿಯರ ಬಗ್ಗೆ ತಾತ್ಸಾರ ; ಸರೋಜಿನಿಯಲ್ಲಿ ಇಬ್ಬರ ಬಗೆಯಲ್ಲಿಯೂ ದ್ವೇಷ-ತಿರಸ್ಕಾರ, ಸ್ವತಹದ ಬಗೆಯಲ್ಲಿ ಎದೆ ಕೊರೆಯುವ ನಿರಾಶೆ ! ಇವರ ಭಾರವಾದ ಹೃದಯಗಳನ್ನು ಹೊತ್ತುಕೊಂಡು ರೈಲು ಯಾವುದರ ಪರಿವೆಯಿಲ್ಲದೆ ಸಾಗಿತ್ತು. ವೇಗವಾಗಿ ಹಿಂದಕ್ಕೆ ಸರಿಯುತ್ತಿದ್ದ ಸುತ್ತಲಿನ ದೃಶ್ಯ ಎಲ್ಲಿಯೋ ಒಂದು ಕನಸಿನಲ್ಲಿಯ ಚಿತ್ರದಂತೆ ಸರೋಜಿನಿಯ ಕಣ್ಣೆದುರಿನಿಂದ ಸರಿಯುತ್ತಿತ್ತು. ನಡುನಡುವೆ ಮಾಧವನ ಚಿತ್ರ ಕಣ್ಣೆದುರು ನಿಲ್ಲುತ್ತಿತ್ತು. ಆದರೆ ಇನ್ನು ಮಾಧವನನ್ನು ಕಂಡಾದರೂ ಏನು? ಆತನಿಂದ ಸಿಗಬಹುದಾದ ಯಾವ ಸಹಾಯ ಸಹಾನುಭೂತಿಯೂ ತನ್ನ ಬದುಕನ್ನು ಬೆಳಗಲಾರದು ಎಂಬ ಕಳವಳಕ್ಕೆ ಗುರಿಯಾಗಿದ್ದಳು. ಆತ ತನಗಿನ್ನು ಸಿಕ್ಕುವುದಾದರೂ ಎಂಥ ಮಾತೊ? ಸಿಕ್ಕರೂ ತಾನು ಅವನಿಂದ ದೂರವಾಗಿರಲಿಕ್ಕೆ ಬೇಕು....ಅಯ್ಯೋ ಎಂದು ನರಳಿತು ಸರೋಜಿನಿಯ ಹೃದಯ. ಆತನಿಂದ ಸಹಾಯ ಪಡೆಯುವುದೆಂದರೆ, ಆತನಿಗೆ ತನ್ನ ಸಮೀಪಕ್ಕೆ ಬರಗೊಡುವುದೆಂದರೆ, ತನ್ನ ಮೇಲಿನ ಶಾಪದ ವಿಷಪರಿಣಾಮವನ್ನು ಅವನ ಮೇಲೆಯೂ ಹೇರಿದಂತೆಯೇ ! ಆ ದುಃಖಕ್ಕೆ ಆತನನ್ನು ಗುರಿಮಾಡಲು ತನಗೆ ಯಾವ ಅಧಿಕಾರ ? ತನಗೆ ದುಃಖ ಬಿಡಲಿಲ್ಲ. ಆತನಾದರೂ ಸುಖಿಯಾಗಿರಲಿ....ಎಲ್ಲಿಯಾದರೂ ಇರಲಿ ....ಎಂದು ಯೋಚಿಸುತ್ತಿದ್ದ ಹಾಗೆ ಸರೋಜಿನಿ—ಮಾಧವನ ಆಸೆಯನ್ನು ಸಂಪೂರ್ಣವಾಗಿ ಬಿಟ್ಟುಕೊಡುವಂತಾದಳು. ಆತನಿಂದ ದೂರವಾಗಿರುವುದೇ ತನ್ನ ಕರ್ತವ್ಯವೆಂದು ಬಗೆದಳು ; ಇದುವರೆಗೂ ಆತ ತೋರಿದ ಸಹಾನುಭೂತಿಗಾಗಿ ತನ್ನಿಂದ ಸಾಧ್ಯವಿದ್ದ ಪುರಸ್ಕಾರವೆಂದರೆ ಆತನಿಂದ ದೂರವಿರುವುದೊಂದೇ ಎಂದುಕೊಂಡಳು ! ಆದರೆ ಎಷ್ಟು ನಿರ್ಧಾರ ಮಾಡಿದರೂ ಒಮ್ಮೆಯಾದರೂ ಮಾಧವ ನೋಡಲು ಸಿಕ್ಕರೆ ತನ್ನ ಹೃದಯವನ್ನು ಒಡೆದು ಚೂರುಚೂರಾಗಿಸಿದ ತನ್ನ ಬದುಕನ್ನು ಮುರಿದು ಮೂರಾಬಟ್ಟೆ ಮಾಡಿದ ದುಃಖವನ್ನು ತೋಡಿಕೊಳ್ಳಲಾದರೂ ಆದೀತು ಎಂಬ ಆಸೆಯನ್ನು ಮಾತ್ರ ಆಕೆಯಿಂದ ತೊರೆಯುವುದಾಗಲಿಲ್ಲ. ಪ್ರವಾಸ ಸಾಗಿಯೇ ಇತ್ತು. ಮಧ್ಯಾಹ್ನದ ಉರಿಬಿಸಿಲಿನಂತೆ ದುಃಖ ಪ್ರಜ್ವಲಿಸಿತು. ಎದೆಯಲ್ಲಿ ರೊಚ್ಚು ಉರಿಯಿತು. ಸಾಯಂಕಾಲದ ಸುಳಿಗಾಳಿಯಂತೆ ಹೃದಯದ ಹಾರೈಕೆ ಎಲ್ಲೆಲ್ಲಿಯೂ ಅಲೆದಾಡಿ ನಿರಾಶೆಯ ಮಬ್ಬುಗತ್ತಲ ಗವಿಯನ್ನು ಸೇರಿತು. ರಾತ್ರಿಯ ನೀರವತೆ

ಯಂತೆ ಹೃದಯ ನಿರ್ವಿಕಾರವಾಗಿ ಮಿಡಿಯಿತು, ಬೆಳಗಿನಜಾವ ಎಂದಿಗಾದರೂ ಬರಬಹುದೆ ಈ ಬದುಕಿಗೆ ಎಂದು. ರೈಲಿನ ಗಾಲಿಗಳು ತಿರುಗುತ್ತಲೇ ಇದ್ದವು....ಸರೋಜಿನಿಯ ವಿಚಾರಚಕ್ರಗಳಂತೆ!

ಧಾರವಾಡದ ನಿಲ್ದಾಣದಲ್ಲಿ ಗೌಡ ಇಳಿದುಬಿಟ್ಟ. ಇಳಿಯುವ ಮುಂದೆ ರಂಗಸಾನಿಯ ಕೈಯಲ್ಲಿ ನೂರೈವತ್ತು ರೂಪಾಯಿ ಕೊಟ್ಟು ಹಿಂದೆ ಸರಿದಿದ್ದ— ಯಾವ ಮಾತನ್ನೂ ಆಡದೆ. ಆತನನ್ನು ತಡೆಯುವ ಸಾಮರ್ಥ್ಯವಿಲ್ಲದೆ, ಆತನಿಗೆ ಯಾವ ಮಾತನ್ನೂ ಆಡುವ ಶಕ್ತಿಯಿಲ್ಲದೆ ರಂಗಸಾನಿ ಸುಮ್ಮನಿದ್ದಳು. ತನ್ನ ಬದುಕಿನ, ತನ್ನ ವೃತ್ತಿಯ ಅಸಹಾಯತೆ ಮಾತ್ರ ಆ ಕ್ಷಣಕ್ಕೆ ಆಕೆಯ ಹೃದಯವನ್ನು ಗಾಸಿ ಮಾಡಿರಬೇಕು! ಸಮಯಸಾಧಕರ ಅನ್ಯಾಯದ ಅರಿವು ಆಗ ಬಂದಿರಬೇಕು. ಆ ಅರಿವು, ಆ ಅಸಹಾಯತೆ ಏನನ್ನೂ ಮಾಡು ವಂತಿರಲಿಲ್ಲ. ಸಾಯಂಕಾಲದ ಸುಮಾರಿಗೆ ಸಾವು ಬೇಡವಾದ ತಾಯಿ, ಬದುಕು ಬೇಡವಾದ ಮಗಳು—ಗದುಗಿನಲ್ಲಿಯ ತಮ್ಮ ಹಳೆಯ ಮನೆಯನ್ನು ಸೇರಿದರು! ಮುಳುಗುತ್ತಿದ್ದ ಸೂರ್ಯ ದೊಡ್ಡದಾಗಿ ಮಾಯದ ಗಾಯದಂತೆ ಗಗನಾಂತ್ಯದಲ್ಲಿ ಉರಿಯುತ್ತಿದ್ದ! ದಣಿದ ದೇಹ, ಕಂಗಾಲಾದ ಮನಸ್ಸು ಗಳಿಗೆ ವಿಶ್ರಾಂತಿ ಬೇಕಾಗಿತ್ತು. ಆ ರಾತ್ರಿ ಅವರು ಮನೆಯಲ್ಲಿ ದೀಪವನ್ನೂ ಉರಿಯಿಸಲಿಲ್ಲ!"

## 17

ಮಾಧವ ಮುಂಬಯಿಗೆ ಬಂದು ತಿಂಗಳಾಗುತ್ತ ಬಂದರೂ ಕೆಲಸ ಸಿಕ್ಕುವ ಲಕ್ಷಣ ಕಾಣಲಿಲ್ಲ. ಎಷ್ಟಾದರೂ ಶ್ರೀಧರ ತನಗೆ ಗೆಳೆಯ. ಆದರೂ ಎಷ್ಟು ದಿನ ಇರುವುದು ಅವನಲ್ಲಿ? ಎಂಬ ದಾಕ್ಷಿಣ್ಯವೂ ಕಾಡುತ್ತಿತ್ತು. ತನ್ನ ಗೆಳೆಯ ಸೂಚಿಸಿದ ಮಾರ್ಗವನ್ನು ಅನುಸರಿಸಿದರೆ ಕೆಲಸ ಸಿಕ್ಕಬಹುದೆಂಬ ಭರವಸೆಯಿದ್ದಿತು. ಹೋಗಿಯಾದರೂ ನೋಡೋಣವೆಂದು ದೇಶಪಾಂಡೆ ಯವರ ಮನೆಗೆ ಎಂಟು ದಿವಸಗಳ ಹಿಂದೆ ಹೋಗಿಬಂದಿದ್ದ. ಶ್ರೀಧರನ ಮಾತು ಪೂರ್ತಿಯಾಗಿ ನಿಜವಿತ್ತು. ಅವರು ತನಗಾಗಿ ಏನನ್ನೂ ಮಾಡಲು ಸಿದ್ಧರಿದ್ದರು. ತಂದೆಯ ಬಗೆಯಲ್ಲಿ ಸಾವಿರಾರು ಗೌರವದ ಮಾತುಗಳನ್ನು ಹೇಳಿ ಮಾಧವನಿಗೆ ಬೇಸರವನ್ನುಂಟುಮಾಡಿದ್ದರು. ಕೆಲಸಕ್ಕೆ ಯಾವಾಗ ಬೇಕಾದಾಗ ಬಂದರೂ ತಮ್ಮ ಬ್ಯಾಂಕಿನಲ್ಲಿ ಕೊಡಿಸುತ್ತೇನೆ ಎಂದು ಹೇಳಿ ದ್ದರು. ಆದರೆ ಅಂದಿನ ಮಟ್ಟಿಗೆ ಏನೋ ನೆಪ ಹೂಡಿಕೊಂಡು ಬಂದವ,

ಶ್ರೀಧರ ಎಷ್ಟು ಪರಿಯಿಂದ ಪುನಃಪೊಲಿಸಲೆತ್ನಿಸಿದರೂ ಮತ್ತೊಮ್ಮೆ ಅವರ ಕಡೆಗೆ ಹೋಗಿರಲಿಲ್ಲ. ದಿನದಿನಕ್ಕೆ ಮನಸ್ಸು ಬೇಸರಪಡತೊಡಗಿತ್ತು. ಒಂದು ದಿನ ಸಾಯಂಕಾಲ ಶ್ರೀಧರನಿಗೆ ಹೇಳಿದ :

"ನಾನಿಲ್ಲಿ ಸುಮ್ಮನೆ ಯಾತಕ್ಕಾಗಿ ಇರಬೇಕು, ಶ್ರೀಧರಾ? ಊರಿಗೆ ತಿರುಗಿ ಹೋಗಬೇಕೆಂದು ಮಾಡಿದ್ದೇನೆ...."

"ಹೀಗೆ ಹೊರಟುಹೋಗುವುದಾದರೆ ಬಂದಿದ್ದೆ ಯಾತಕ್ಕೆ ?"

"ಕೆಲಸಕ್ಕಾಗಿ ಬಂದೆ. ಬಂದದ್ದೇ ಒಂದು ಕೆಲಸವಾಯಿತು!" ಎಂದು ಮಾಧವ ನಕ್ಕ.

"ಕೈಗೆ ಬಂದ ಕೆಲಸವನ್ನು ಬಿಟ್ಟು, ಸಿಗಲಾರದ ಕೆಲಸಕ್ಕಾಗಿ ಗೋಳಾಡುತ್ತಿದ್ದೀ ನೀನು....ನಾನು ಎಷ್ಟು ಹೇಳಿದರೂ ಕೇಳುವುದಿಲ್ಲ."

"ಅದಕ್ಕೆಯೆ ಸುಮ್ಮನೆ ಹೊರಟುಬಿಡುತ್ತೇನೆ. ನಿನ್ನಲ್ಲಿಯಾದರೂ ಹೀಗೆಯೆ ಎಷ್ಟು ದಿನಸ ಇರುವುದು ?"

ಶ್ರೀಧರನಿಗೆ ಗೆಳೆಯನ ಮಾತು ಒಪ್ಪಿಗೆಯಾಗಲಿಲ್ಲ.

"ಅಂತೂ ಉಪಚಾರದ ಮಾತು ಆಡಲಿಕ್ಕೆ ಕಲಿತುಕೊಂಡಿದ್ದೀಯ.... ಆಂ....? ಹುಂ....ಈಗ ಒಂದು ತಿಂಗಳು ಇದ್ದದ್ದಕ್ಕೆ ಎಷ್ಟು ಚಾರ್ಜು ಕೊಡಬೇಕೆಂದುಕೊಂಡಿದ್ದೀ....?" ಎಂದು ನಸುನಕ್ಕ.

"ಅಲ್ಲ ಶ್ರೀಧರಾ....ಎಲ್ಲಿಯಾದರೂ ಒಂದು ವ್ಯವಸ್ಥೆ ಮಾಡಿಕೊಂಡರೆ ಸರಿ....ಹೀಗೆಯೇ ಇರುವುದಾದರೂ ಎಷ್ಟು ದಿವಸ? ಅದಕ್ಕಾಗಿ ಅಂದೆ...."

"ನಾನೆಂದಿಗೋ ನಿನಗೆ ಹೇಳಿದ್ದೇನೆ.... ಈ ನಿನ್ನ ಹಟ ಬಗೆಹರಿಯದ ಹಟ....ಸುಮ್ಮನೆ ತಲೆ ಕೆಡಿಸಿಕೊಳ್ಳುತ್ತಿದ್ದೀಯ....ಇನ್ನೇನೂ ಇಲ್ಲ....ನನ್ನ ಮಾತು ಕೇಳುವ ಹಾಗಿದ್ದರೆ ದೇಶಪಾಂಡೆಯವರ ಹತ್ತಿರ ಹೋಗಿ ಇನ್ನೊಮ್ಮೆ ಅವರನ್ನು ಭೆಟ್ಟಿಯಾಗು; ಇನ್ನೆಲ್ಲಿಯೂ ಸಿಗದಂಥ ಕೆಲಸವೂ ನಿನಗೆ ಸಿಕ್ಕೀತು. ಸುಮ್ಮನೆ ಈ ಅವಕಾಶ ಕಳೆದುಕೊಳ್ಳಬೇಡ...."

ಇಡೀ ರಾತ್ರಿ ಮಾಧವ ಯೋಚನೆಗೀಡಾದ. ಮನಸ್ಸು ಒಪ್ಪಲಿಲ್ಲ....ನಡುನಡುವೆ ಮನಸ್ಸು ಸರೋಜಿನಿಯನ್ನು ನೆನೆಯುತ್ತಿತ್ತು. ಏನಾದರೂ ಆಗಲಿ, ಆಕೆಯನ್ನು ಒಮ್ಮೆ ಕಾಣಬೇಕು ಎಂಬ ಹಂಬಲ ದಿನದಿನಕ್ಕೆ ಬಲಿಯುತ್ತಿತ್ತು. ಆ ಆಸೆ ಬಲಿಯುತ್ತಿದ್ದಂತೆ ಊರಿಗೆ ಹೋಗಬೇಕೆಂಬ ಇಚ್ಛೆಯೂ ಹಿರಿದಾಗುತ್ತಿತ್ತು. ಒಂದೆಡೆ ಕೆಲಸ ಸಿಕ್ಕದಿದ್ದುದಕ್ಕಾಗಿ ಬೇಸರ, ಇನ್ನೊಂದೆಡೆ ಸರೋಜಿನಿಯನ್ನು ಕಾಣಬೇಕೆಂಬ ಬಯಕೆ ಇವೆರಡರ ನಡುವೆ ಮನಸ್ಸು

ತೂಗಾಡುತ್ತಿರುವಾಗಲೇ ಹಗಲು-ರಾತ್ರಿಗಳು ಸರಿಯುತ್ತಿದ್ದವು. ಹಗಲು ಅಲೆದಾಟ, ರಾತ್ರಿ ಯೋಚನೆ—ಈ ರೀತಿ ನಿಯತವಾದ ಕಾರ್ಯಕ್ರಮದಲ್ಲಿ ಮಾಧವನ ಹೃದಯದಲ್ಲಿ ಬೇಸರ ಬೇರೂರತೊಡಗಿತ್ತು. ಊರಿಗೆ ಹೋಗಿಬಿಡೋಣ ಎಂಬ ಬಯಕೆ ಬಲಿಯುತ್ತಿತ್ತು.

ಒಂದು ದಿನ ಮಧ್ಯಾಹ್ನ ಇದ್ದಕ್ಕಿದ್ದ ಹಾಗೆಯೇ ಭೀಮಣ್ಣನಿಂದ ತಂತಿ ಬಂದಿತು. 'ಅಗತ್ಯವಾದ ಕೆಲಸವಿದೆ. ನೀನಿಲ್ಲಿರಬೇಕಾಗಿದೆ. ಕೂಡಲೆ ಹೊರಟು ಬಾ' ಎಂದು. ನಾಲ್ಕಾರು ದಿವಸ ಹಿಂದೆಯೇ ಭೀಮಣ್ಣನಿಂದ ಕಾಗದ ಬಂದಿತ್ತು. ಆದರೆ ಅದರಲ್ಲಿ ಯಾವ ಅಗತ್ಯದ ಸಮಾಚಾರವೂ ಇರಲಿಲ್ಲ. ಅಂಥ ಯಾವ ಸಂದರ್ಭವೂ ಆತನ ಯೋಚನೆಗೆ ಹೊಳೆಯಲಿಲ್ಲ.

ತಂತಿಯನ್ನು ಕಳಿಸುವುದು ಭೀಮಣ್ಣನಿಗೆ ಅನಿವಾರ್ಯವಾಗಿತ್ತು. ಮೂರು ದಿನ ಮೊದಲು ಮಾಧವನಕಕ್ಕ ರಾಮರಾಯರುದೇವನೂರಿಗೆಬಂದು ರಾದ್ಧಾಂತ ಮಾಡಿದ್ದರು. ಕೊಪ್ಪದ ರೈತ ಕರಿಸಿದ್ದಪ್ಪನಿಂದ ಬರಬೇಕಾದ ಹಣವನ್ನು ವಸೂಲು ಮಾಡಿಕೊಳ್ಳಲೆಂದು ಬರುತ್ತೇನೆಂದು ಹೇಳಿದ ಪ್ರಕಾರ ತಾವು ಬಂದದ್ದೆಂದು ಹೇಳಿದ್ದರೂ ಅವರ ಯೋಚನೆ ಬೇರೆಯಾಗಿಯೇ ಇದ್ದಿತೆಂದು ಕಾಣುತ್ತಿತ್ತು. ಮಾಧವ ತಮಗೆ ಒಂದು ಮಾತನ್ನೂ ಹೇಳದೆ ಹೊರಟು ಬಂದದ್ದು, ಆದರ ನಂತರ ಪರೀಕ್ಷೆಗಾಗಿ ಊರಿಗೆ ಬಂದಿದ್ದರೂ ತಮ್ಮಲ್ಲಿಗೆ ಬಾರದೆ ಇದ್ದುದ್ದಂತೂ ಆಯಿತು, ತಮಗೆ ಭೆಟ್ಟಿ ಕೂಡ ಆಗದೆ ಇದ್ದುದು ಅವರನ್ನು ಪೂರ್ತಿ ಕೆರಳಿಸಿತ್ತು. ಅವರಿಗೆ ಬೇಕಾದ ಸಂದರ್ಭವನ್ನು ಒದಗಿಸಿತ್ತು. ಇದೆಲ್ಲ ಭೀಮಣ್ಣನ ಕೈವಾಡವೆಂದು ಗ್ರಹಿಸಿಕೊಂಡೇ ಕಾದು ಕೆಂಡವಾಗಿ ಬಂದಿದ್ದರು. ಬರುವಾಗ ಆಸ್ತಿಪಾಸ್ತಿಗಳ ಕಾಗದಪತ್ರಗಳೊಂದಿಗೆ ಬಂದ ಹಾಗೂ ಇತ್ತು. ಬಂದ ದಿವಸವೇ ಮಾಧವನ ಬಗೆಯಲ್ಲಿ ಮಾತು ನಡೆದಿತ್ತು. ತಮ್ಮ ಅಸಮಾಧಾನವನ್ನು ತೋರಗೊಡಬಾರದೆಂದು ತಮಗೆ ಎಲ್ಲ ವಿಷಯ ತಿಳಿದಿದ್ದರೂ ಕೇಳಿದ್ದರು :

"ಮಾಧವ ಪರೀಕ್ಷೆಗೆ ಕೂಡಲಿಲ್ಲವೆ ?" ಎಂದು.

"ಹೋಗಿದ್ದನಲ್ಲ ? ನಿಮ್ಮಲ್ಲಿಗೆ ಬರಲಿಲ್ಲವೆ....?" ಎಂದಿದ್ದ ಭೀಮಣ್ಣ ಬೇಕೆಂತಲೆ.

"ಆತ ಯಾತಕ್ಕೆ ಬಂದಾನು ? ಅವನಿಗೆ ಈಗ ಬುದ್ಧಿ ಬೆಳೆದಿದೆ !"

ಭೀಮಣ್ಣ ಸುಮ್ಮನಾಗಿದ್ದ—ಮಾತು ಬೆಳೆಯಿಸಬಾರದೆಂದು. ರಾಮರಾಯರು ಕೇಳಿದ್ದರು :

"ಎಲ್ಲಿದ್ದಾನೆ ಈಗ? ಎಲ್ಲಿಯೂ ಕಾಣುವುದಿಲ್ಲವಲ್ಲ ?"

"ಪರೀಕ್ಷೆ ಮುಗಿಸಿಕೊಂಡು ಮುಂಬಯಿಗೆ ಹೋಗಿದ್ದಾನೆ...."

"ಮುಂಬಯಿಗೆ ಯಾತಕ್ಕೆ ?"

"ಏನೋ ! ಎಲ್ಲಿಯಾದರೂ ಕೆಲಸ ಹಿಡಿಯುತ್ತೇನೆ ಎನ್ನುತ್ತಿದ್ದ.... ಹೋದನಂತರ ಒಂದೆರಡು ಕಾಗದ ಬಂದಿದ್ದವು....ಆದರೆ ಯಾವ ಸಮಾಚಾರ ವನ್ನೂ ತಿಳಿಸಿಲ್ಲ. ಇಂದು ನಾಳೆ ಇಷ್ಟರಲ್ಲಿಯೇ ವಿವರವಾಗಿ ಕಾಗದ ಬರೆಯು ತ್ತೇನೆಂದಿದ್ದ. ಕಾಗದ ಬಂದಮೇಲೆ ಏನೆಂಬುದು ತಿಳಿಯಬೇಕು."

"ಹುಂ...." ಎಂದು ರಾಯರು ಸುಮ್ಮನಾದರು. ಆದರೆ ಭೀಮಣ್ಣನ ಉತ್ತರ ತನಗೆ ಸಮಾಧಾನವಾಗಲಿಲ್ಲವೆಂಬುದೂ 'ನಿಮಗೆ ಹೇಳುವ ಮನ ಸ್ಸಿರದಿದ್ದರೆ ಬಿಡಿ, ನನಗಾದರೂ ಏನು ಮಾಡುವುದಿದೆ ?' ಎಂಬ ಭಾವವೂ ಆ ಒಂದು ಹುಂಕಾರದಲ್ಲಿ ಸ್ಪಷ್ಟವಾಗುತ್ತಿದ್ದವು.

"ನಾಳೆ ಬೆಳಿಗ್ಗೆ ಕೊಪ್ಪದ ಹೊಲದವರೆಗೆ ಹೋಗಿಬರಬೇಕು....ನಿಮಗೆ ಬರಲಿಕ್ಕೆ ಆದೀತಲ್ಲವೆ ?"

"ಹುಂ....ಆದರೆ ಈಗೇನಿದೆ ಹೊಲದಲ್ಲಿ?"

"ಹೋದ ವರ್ಷವೂ ಆತ ಪೂರ್ತಿ ರೂಪಾಯಿ ಕೊಡಲಿಲ್ಲ. ಈ ವರ್ಷದ ಹಣವೂ ಬರಬೇಕಾಗಿದೆ."

"ಆತ ಹಣ ಕೊಟ್ಟಿದ್ದಾನೆ...."

"ಹಣ ಕೊಟ್ಟಿದ್ದಾನೆಯೆ ? ಯಾರಿಗೆ ? ಯಾವಾಗ ?" ರಾಯರ ದನಿ ಯಲ್ಲಿಯ ಸಿಡುಕು ಅವರ ಮನಸ್ಸಿನಲ್ಲಿಯ ಅರ್ಥವನ್ನು ಅವರ ಮಾತಿಗಿಂತಲೂ ಸ್ಪಷ್ಟವಾಗಿ ತಿಳಿಸಿತ್ತು.

"ಮೊನ್ನೆ ಮಾಧವ ಪರೀಕ್ಷೆಗೆ ಹೋಗುವಾಗ ಕೊಟ್ಟ...."

"ಎಷ್ಟು ಕೊಟ್ಟ ?"

"ಮುನ್ನೂರೈವತ್ತು ಆತನಿಂದ ಬರಬೇಕಾದದ್ದು ಅಷ್ಟೇ ಎಂದು ಹೇಳಿದ...."

"ಯಾರು ಹೇಳಿದ್ದರು ಅದನ್ನು ನಿಮಗೆ ವಸೂಲು ಮಾಡಿಕೊಳ್ಳಲಿಕ್ಕೆ ?" ರಾಯರಿಗೆ ಸಹನೆ ಉಳಿದಿರಲಿಲ್ಲ. ಭೀಮಣ್ಣನಿಗೆ ಈ ಸಂದರ್ಭ ಅನಿರೀಕ್ಷಿತ ವಾಗಿರಲಿಲ್ಲವೆಂದೇ ಶಾಂತವಾಗಿ ಉತ್ತರ ಹೇಳಿದರು :

"ಮಾಧವನಿಗೆ ಬೇಕಾಗಿತ್ತು ಹಣ, ಊರಿಗೆ ಹೊರಡುವ ಮುಂದೆ, ನನ್ನ ಹತ್ತಿರವೂ ಇರಲಿಲ್ಲ. ಅದಕ್ಕೆ ನಾನೇ ವಸೂಲಿ ಮಾಡಿಕೊಟ್ಟೆ...."

"ಇದೆಲ್ಲ ಕಾರುಭಾರು ನನಗೇನೂ ಒಪ್ಪಿಗೆಯಿಲ್ಲ ನೋಡಿರಿ, ಭೀಮಣ್ಣನವರೆ...."

"ನನಗೇನೂ ಬೇಕಾಗಿರಲಿಲ್ಲ ನಿಮ್ಮ ಕಾರುಭಾರ. ಮಾಧವನಿಗೆ ಬೇಕಾಗಿತ್ತು ಹಣ, ಅದಕ್ಕೆಂದು ತಂದುಕೊಟ್ಟೆ...."

"ಹುಂ....ಇಂದು ಮಾಧವನಿಗೆ ಬೇಕಾಯಿತು....ನಾಳೆಗೆ ಇನ್ನಾರಿಗೋ ಬೇಕಾಗುತ್ತದೆ. ಆ ಹಣ ನನಗೆ ಬರಬೇಕಾದದ್ದು."

ರಾಮರಾಯರ ಮಾತಿನ ರೀತಿ ಕ್ಷಣಕ್ಷಣಕ್ಕೂ ಭೀಮಣ್ಣನವರನ್ನು ಕೆರಳಿಸುತ್ತಿತ್ತು. ಆದರೂ ಅವರ ಸಿಡುಕಿನ ರೀತಿಯನ್ನು ಸಹಿಸಿಕೊಂಡೇ ಹೇಳಿದ :

"ನಿಮಗೆ ಬರಬೇಕಾಗಿದ್ದರೆ ಆತನನ್ನೇ ಕೇಳಿಕೊಳ್ಳಬಹುದು."

"ಹುಂ....ನೀವು ವಸೂಲು ಮಾಡಿ ಬೇಕಾದವರಿಗೆ ಕೊಡುತ್ತ ಇರಿ, ನಾನು ಅವರನ್ನು ಕೇಳುತ್ತ ಹೋಗುತ್ತೇನೆ....ಇದೇ ನನಗೆ ಕೆಲಸ."

"ಬೇಕಾದವರಿಗೆ ಕೊಟ್ಟಿಲ್ಲ ; ಮಾಧವನಿಗೆ ಕೊಟ್ಟಿದ್ದೇನೆ." ಭೀಮಣ್ಣನ ಮಾತಿನ ಬಗೆ ನಿಷ್ಠುರವಾಗಿತ್ತು.

"ನನ್ನನ್ನು ಕೇಳಲಾರದೆ ಯಾಕೆ ಕೊಟ್ಟಿರಿ ಆತನಿಗೆ ಹಣವನ್ನು ?"

"ಆತನಿಗೆ ಬೇಕಾಗಿದ್ದಿತು. ಅದಕ್ಕಾಗಿ ಆತ ನಿಮ್ಮ ತನಕ ಬರಬೇಕಾಗಿದ್ದಿತೆ !"

"ಹೌದು. ಯಾತಕ್ಕೆ ಬರಬೇಕು? ದೊಡ್ಡವನಾಗಿದ್ದಾನೆ !"

"ದೊಡ್ಡವನೋ ಸಣ್ಣವನೊ ! ನಿಮಗೆ ತಿಳಿಯಬೇಕು ಅದು...." ಎಂದ ಭೀಮಣ್ಣ ಬೇಸರದಿಂದ.

"ನನಗೆಲ್ಲ ತಿಳಿದೇ ಇದೆ. ಹೊಸದೇನೂ ಇಲ್ಲ ಇದರಲ್ಲಿ. ಇದನ್ನೆಲ್ಲ ಆತನ ತಲೆಯಲ್ಲಿ ಹೋಗಿಸಿದವರು ನೀವೇ...."

"ಇದು ನೋಡಿರಿ, ರಾಮರಾಯರೆ. ನನಗೇನೂ ನಿಮ್ಮ ಕೂಡ ಜಗಳ ಹೂಡಬೇಕಾಗಿಲ್ಲ. ನೀವೇನೋ, ಆತನೇನೊ. ಇದರಲ್ಲಿ ನನ್ನದೇನು ಸಂಬಂಧ? ನಿಮಗೆ ತಿಳಿದ ಹಾಗೆ ನಿಮ್ಮ ವ್ಯವಹಾರ ಆತನ ಕೂಡ ಬಗೆಹರಿಯಿಸಿಕೊಳ್ಳಬಹುದು."

"ನನಗೂ ಸಾಕಾಗಿಹೋಗಿದೆ. ಎಂದಿಲ್ಲೊಂದು ದಿನ ಕೆಟ್ಟ ಶಬ್ದ ನನ್ನ ಪಾಲಿಗೆ ಕಟ್ಟಿಟ್ಟದ್ದೇ....ನಿಮಗೆಯೇ ನನ್ನ ಸಂಬಂಧ ಬೇಡವಾಗಿದ್ದರೆ.... ನಾನೇನು ಮಾಡಬಲ್ಲೆ ?"

"ನಾನಾಗಲೇ ಹೇಳಲಿಲ್ಲವೆ, ನೀವೇನು ಬೇಕಾದುದನ್ನು ಮಾಡಬಹುದು.

ನನಗೇನು ಮಾಡುವುದಿದೆ?"

"ಮಾಡಬೇಕಾದವನ್ನು ಎಲ್ಲ ನೀವು ಗೈದು ; ಅಂತೆಯೇ ಈ ಎಲ್ಲ ಆಟ ಹೂಡಿದ್ದೀರಿ...."

"ಏನದು ಆಟ ನಾನು ಹೂಡಿದ್ದು? ಅವನಿಗೆ ಊರಿಗೆ ಹೊರಟಾಗ ನಾಲ್ಕು ದುಡ್ಡು ಬೇಕಾದರೆ, ಆತ ವಸೂಲು ಮಾಡಿಕೊಂಡರೆ, ನಾನೇನು ಮಾಡಿದ ಹಾಗಾಯಿತು? ಅಲ್ಲದೆ ಅವನದಾದರೂ ಏನು ತಪ್ಪು ?"

"ಹೋ ! ತಪ್ಪೇನೂ ಅಲ್ಲ. ತನ್ನಷ್ಟಕ್ಕೆ ತಾನಿರಬೇಕಾಗಿದ್ದರೆ ಯಾವ ತಪ್ಪೂ ಅಲ್ಲ ! ಅಲ್ಲದೆ ಆತ ಮಾಡಿದ ಯಾವ ತಪ್ಪೂ ನಿಮಗೆ ತಪ್ಪಾಗಿ ಕಾಣುವುದಿಲ್ಲ. ಈಗ ಆತನಿಗೆ ಇಷ್ಟು ದುಡ್ಡು ಯಾತಕ್ಕೆ ಬೇಕಾಗಿತ್ತು ?"

"ಅಂದರೆ ನಾನು ಅವರಲ್ಲಿ ಉಳಿಸಿಕೊಂಡಿದ್ದೇನೆ ಎಂದೇ ನಿಮ್ಮ ಅಭಿಪ್ರಾಯ ?"

"ನೀವೇನು ಮಾಡಿದ್ದೀರಿ ನನಗೇನು ಗೊತ್ತು ? ಅಲ್ಲದೆ ಯಾವ ರೀತಿ ದುಡ್ಡು ಹಾಳುಮಾಡುತ್ತಾನೆ ಎಂಬುದು ನಿಮಗೆ ತಿಳಿದಿದ್ದರೆ...."

"ಆತ ಯಾವ ರೀತಿಯಿಂದಲೂ ದುಡ್ಡು ಹಾಳುಮಾಡುವುದಿಲ್ಲ ಎನ್ನುವುದು ನನಗೆ ಪೂರ್ತಿ ಗೊತ್ತಿದೆ."

"ಅಷ್ಟು ವಿಶ್ವಾಸ ನಿಮಗಿದ್ದರೆ ಸಾಕಲ್ಲ. ನೀವೇ ಹೀಗೆ ಕಣ್ಣು ಮುಚ್ಚಿಕೊಂಡು ಆತನಿಗೆ ಉತ್ತೇಜನ ಕೊಡುತ್ತಿದ್ದೀರೆಂದಮೇಲೆ...."

"ನಾನು ಯಾವ ಉತ್ತೇಜನವನ್ನೂ ಕೊಟ್ಟಿಲ್ಲ. ಸುಮ್ಮನೆ ಏನಾದರೊಂದು ಮಕ್ಕಳ ವಿಷಯವಾಗಿ ಆಡಿದರೆ ಆಯಿತೆ?" ಎಂದ ಭೀಮಣ್ಣ.

"ಯಾವ ಮಾತನ್ನೂ ನಾನು ಸುಮ್ಮನೆ ಆಡುವುದಿಲ್ಲ, ಭೀಮಣ್ಣನವರೇ. ಆತ ಇಲ್ಲಿಗೆ ಹೊರಟು ಬರುವಾಗಿನ ಸಮಾಚಾರ ಹೇಳಿರಬಹುದಲ್ಲ ನಿಮ್ಮ ಮುಂದೆ? ಆ ದಿನ ರಾತ್ರಿ ನಾನು ಆತನಿಗೆ ಸಿಟ್ಟು ಮಾಡಿದ್ದು ನಿಜ. ಆದರೆ ಆತನ ನಡತೆ ಸರಿ ಎಂದು ನೀವಾದರೂ ಹೇಳಬಲ್ಲಿರೇನು ?"

"ಎಲ್ಲ ಕೇಳಿದ್ದೇನೆ. ಆದರೆ ನನಗೆ ಯಾವುದರಲ್ಲಿಯೂ ವಿಶ್ವಾಸವಿಲ್ಲ. ಸುಮ್ಮನೆ ಹಿರಿಯರಾಗಿದ್ದವರು ಹುಡುಗರ ಬಗೆಯಲ್ಲಿ ಈ ರೀತಿ ನಡೆದುಕೊಳ್ಳಬಾರದು...."

"ಹೌದು. ಮತ್ತೆ ನನ್ನದೇ ತಪ್ಪಲ್ಲವೆ? ಆತ ಬೇಕಾದ ಹಾಗೆ ನನ್ನಿಂದ ದುಡ್ಡು ಒಯ್ದು ಬೇಕಾದ ಹೆಣ್ಣಿಗೆ ಕೊಟ್ಟರೂ ಸರಿ. ನಾನು ಯಾವ ಮಾತನ್ನೂ ಆಡಬಾರದು—ಅಲ್ಲವೆ?"

ಭೀಮಣ್ಣನಿಗೆ ತಡೆಯಲಾಗಲಿಲ್ಲ. ಮಾಧವನಿಂದ ಅತ ಹೊರಟುಬರುವಾಗಿನ ಸಂದರ್ಭವನ್ನು ತಿಳಿದವನಾದ್ದರಿಂದ ಹೇಳಿದ :

"ನಿಮಗೆ ಮಾಧವ ಮನೆಯಲ್ಲಿ ಬೇಡವಾಗಿದ್ದರೆ ಹಾಗೆ ಸ್ಪಷ್ಟವಾಗಿ ಹೇಳಿಬಿಡಬಹುದಿತ್ತು. ಸುಮ್ಮನೆ ಆತನ ಮೇಲೊಂದು ಅಪವಾದನೆಯನ್ನು ಹೊರಿಸುವ ಅಗತ್ಯವಿರಲಿಲ್ಲ !"

"ಪೂರ್ತಿ ತಿಳಿದುಕೊಳ್ಳದ ಹೊರತು ನಾನು ಯಾವ ಮಾತನ್ನೂ ಆಡುವುದಿಲ್ಲ—ಆಡಿಲ್ಲ."

"ಯಾರೋ ಕೆಲಸವಿಲ್ಲದವರು ಬಂದು ಹೇಳಿದರು. ನಿಮಗೆ ಪೂರ್ತಿ ತಿಳಿದ ಹಾಗಾಯಿತು !" ಎಂದ ಭೀಮಣ್ಣ ವ್ಯಂಗ್ಯವಾಗಿ. ಆದರೆ ರಾಮರಾಯರಿಗೆ ಅದು ಹಿಡಿಸಲಿಲ್ಲ. ಅಂತೆಯೇ ಹೇಳಿದರು :

"ಸುಮ್ಮಸುಮ್ಮನೆ ಯಾರ ವಿಷಯವಾಗಿಯೂ ಯಾರೂ ಹೇಳುವುದಿಲ್ಲ. ಅಲ್ಲದೆ, ಈ ವಿಷಯದಲ್ಲಿಯಂತೂ ಬೇಕಾದಷ್ಟಾಗಿ ನಿಮ್ಮ ಮನವರಿಕೆ ಮಾಡಿ ಕೊಡಬಲ್ಲೆ....ಆದರೆ ನನಗೇನು ಮಾಡುವುದಿದೆ ?"

"ಯಾವ ವಿಷಯದಲ್ಲಿ...?"

"ಮಾಧವ ಹೆಣ್ಣು ಹುಡಿಗೆಯ ಬೆನ್ನ ಹಿಂದೆ ತಿರುಗಾಡುತ್ತಿದ್ದ ಎಂಬ ವಿಷಯದಲ್ಲಿ."

"ನೀವು ಕಣ್ಣಾರೆ ನೋಡಿದ್ದೀರಾ ?"

"ನಾನು ಯಾತಕ್ಕೆ ನೋಡಬೇಕು ? ನೀನೇ ನೋಡಿಕೊಳ್ಳಬಹುದು, ಬೇಕಾಗಿದ್ದರೆ" ಎಂದು ತಮ್ಮ ಕಾಗದಪತ್ರದೊಳಗಿನಿಂದ ಒಂದು ಲಕ್ಕೋಟೆಯನ್ನು ತೆಗೆದು ಭೀಮಣ್ಣನ ಕೈಗಿತ್ತರು. ಭೀಮಣ್ಣ ಎರಡುಮೂರು ಬಾರಿ ಪತ್ರವನ್ನು ಓದಿದ. ಪತ್ರದ ಕೊನೆಯಲ್ಲಿ 'ನಿನ್ನನ್ನು 'ಕಾಣಲು ಆತುರಳಾದ—ಸರೋಜಿನಿ' ಎಂದು ರುಜು ಇತ್ತು. ಮಾಧವನ ಪರೀಕ್ಷೆಯ ಸುಮಾರಿಗೆ ತಾನು ಧಾರವಾಡಕ್ಕೆ ಬರುವುದಾಗಿಯೂ ಬಂದಾಗ ಕೊನೆಯ ನಿರ್ಣಯವನ್ನು ಮಾಡಬೇಕಾಗಬಹುದಾಗಿಯೂ, ಇನ್ನೂ ಏನೇನೋ ಬರೆಯಲಾಗಿತ್ತು. ಪತ್ರವನ್ನೋದಿ ಭೀಮಣ್ಣ ಒಂದೆರಡು ನಿಮಿಷ ತೆಪ್ಪಗಾದ. ಆದರೆ ಈ ಸರೋಜಿನಿ ಯಾರು ಎಂಬುದೇ ಅರ್ಥವಾಗದೆ, ಯಾರಾದರೂ ಕಾಲೇಜಿನ ಪರಿಚಿತರು ಇದ್ದಿರಬಹುದು ಎಂದುಕೊಂಡ. ಮಾಧವನ ಬಗ್ಗೆಯಲ್ಲಿ ಒಂದು ಅರೆಕ್ಷಣ ಸಿಟ್ಟೂ ಮಿಂಚಿಹೋಯಿತು. ಆದರೆ ಆಗ ಯಾರಿದ್ದರೂ ಅದರಿಂದ ರಾಮರಾಯರು ಹೊರಡಿಸಬೇಕೆಂದಿದ್ದ ಅರ್ಥವೇನೂ ಹೊರಡಬೇಕಾಗಿರಲಿಲ್ಲ.

ಎಂದುಕೊಂಡ. ಭೀಮಣ್ಣ ಸುಮ್ಮನಾದುದನ್ನು ನೋಡಿ, ರಾಮರಾಯರು ಗೆಲುವಿನ ದನಿಯಲ್ಲಿ ಮೊದಲಿಸಿದರು :

"ಆಯಿತೆ—ಈಗಲಾದರೂ ಸಮಾಧಾನ ?"

"ಏನಿದೆ ಈ ಪತ್ರದಲ್ಲಿ ಅಂಥದು ?"

"ಇನ್ನೇನಿರಬೇಕು ?"

"ಇರಬಹುದು—ಯಾರಾದರೂ ಕಾಲೇಜಿನಲ್ಲಿರುವವರು ! ಅಂಥವರಲ್ಲಿ ನಾವು ಅಷ್ಟು ಮನಸ್ಸು ಹಾಕದಿರುವುದೆ ಒಳ್ಳೆಯದು....ಎಷ್ಟಾದರೂ ಬೆಳೆದ ಹುಡುಗರು...."

"ಇರಬಹುದು. ನಿಮಗೇನೋ ಇದೆಲ್ಲ ಸರಿಯಾಗಿ ಕಾಣುತ್ತಿರಬಹುದು. ನನಗಂತೂ ಸರ್ವಥಾ ಒಪ್ಪಿಗೆಯಿಲ್ಲ....ಈ ರೀತಿ ನಡೆದುಕೊಳ್ಳುವುದಾದರೆ ಆತ ನನ್ನ ಹತ್ತಿರ ಇರುವುದೂ ಬೇಕಾಗಿಲ್ಲ...."

"ಅದಂತೂ ಸ್ಪಷ್ಟವಾಗಿಯೇ ಇದೆ, ಹೇಗಿದ್ದರೂ ಆಯಿತ...." ಎಂದ ಭೀಮಣ್ಣ ತಡೆಯದೆ.

"ಅಂದರೆ ಆತನನ್ನು ಬೇಕೆಂತಲೆ ನಾನು ಮನೆಯಿಂದ ಹೊರಗೆ ದೂಡಿದೆ ಎಂದೇನು ನಿಮ್ಮ ಅಭಿಪ್ರಾಯ ?"

"ಅದೆಲ್ಲಾ ನಿಮಗೆ ಗೊತ್ತು. ನಾನೇನು ಹೇಳಬಲ್ಲೆ ?"

"ಇಷ್ಟೆಲ್ಲ ಹೇಳುತ್ತೀರಿ. ಅದೂ ಒಂದು ಮಾತು ಆಡಿಬಿಡಿರಿ ಮತ್ತೆ...."

"ನನಗೇನೂ ಸುಮ್ಮನೆ ಮಾತನಾಡುವ ಮನಸ್ಸಿಲ್ಲ, ರಾಯರೆ."

"ಮನಸ್ಸಿಲ್ಲದೆಯೆ ಇಷ್ಟು ಮಾತು ಆಡಿದಿರಲ್ಲವೇ ?"

"ಮನಸ್ಸಿದ್ದಲ್ಲ ನಾನು ಆಡಿದ್ದು. ತಡೆಯಲಾಗದ್ದಕ್ಕೆ ಆಡಿದ್ದೇನೆ....ಆ ತಬ್ಬಲಿ ಮಗನನ್ನು ನೀವು ನೋಡಿಕೊಳ್ಳುತ್ತಿರುವ ರೀತಿಯ ಅನ್ಯಾಯಕ್ಕಾಗಿ ಆಡಿದ್ದೇನೆ."

"ಏನನ್ಯಾಯ ಮಾಡಿದ್ದೇನೆ ಅದನ್ನಾದರೂ ಹೇಳಬಾರದೆ ?"

"ಇಷ್ಟು ದುಡ್ಡು ಕೊಟ್ಟೆ ಕೊಟ್ಟೆ ಎಂದು ಡಂಗುರ ಸಾರುವವರು ಆತನಿಗೆ ಎಷ್ಟು ಕೊಟ್ಟಿದ್ದೀರಿ, ಹೇಗೆ ಕೊಟ್ಟಿದ್ದೀರಿ ಎಂಬುದು ಇನ್ನಾರಿಗೂ ಗೊತ್ತಿರದಿದ್ದರೂ ನನಗೆ ಗೊತ್ತಿದೆ. ಪರೀಕ್ಷೆಗೆಂದು ದುಡ್ಡು ಬೇಡಿದರೆ ಮೂರು ದಿವಸ ಗೋಳಿಡಿಸಿ ಕೊನೆಗೆ ಐವತ್ತು ರೂಪಾಯಿ ಮೋರೆಯ ಮೇಲೆ ಎಸೆದು, 'ಹಾಳಾಗಿ ಹೋಗು !' ಎಂದಿರಿ....ಸಾಕಲ್ಲವೆ ? ಪರೀಕ್ಷೆಗೆ ಹಣ ಕಟ್ಟಬೇಕು ಎಂದಾಗಲೇ ಇಷ್ಟಾಯಿತೆಂದಮೇಲೆ ಉಳಿದದ್ದಕ್ಕೆ ಆತನಿಗೆ ಎಷ್ಟು ಸಿಕ್ಕಿರಬೇಕು

ಎಂಬುದು ಸ್ಪಷ್ಟವಾಗಿಯೇ ಇದೆ…"

ಇದು ನೋಡಿರಿ ಭೀಮಣ್ಣನವರೆ, ಇದು ಹೀಗಾದರೆ ಬಗೆಹರಿಯುವ್ರದಿಲ್ಲ. ನಿಮ್ಮ ಮನಸ್ಸಿನಲ್ಲಿದ್ದು ದಾದರೂ ಏನು ? ಅವನ್ನಾದರೂ ಹೇಳಿರಿ."

"ಹೇಳಲಿಕ್ಕೆ ನಾನು ಯಾರು ? ಬೇಕಾದರೆ ಇಂದಿಗೇ ಮಾಧವನಿಗೊಂದು ತಂತಿ ಕಳಿಸುತ್ತೇನೆ. ಆತ ಬಂದಮೇಲೆ, ನೀವು ಹೇಗೆ ಬೇಕಾದ ಹಾಗೆ ಮಾಡಬಹುದು."

ಬಂದಮೇಲಾದರೂ ಆತ ಹೇಳುವುದೇನು ? ಎಲ್ಲವೂ ಆತನ ಕಿವಿ ಊದಿಯೇ ಇಟ್ಟಿದ್ದೀರಿ, ಅಂದಮೇಲೆ? ಆಗಲಿ, ನನಗಾದರೂ ಯಾತಕ್ಕೆ ಈ ಒಣ ಜವಾಬುದಾರಿ ? ಇಂದಲ್ಲ ನಾಳೆ ಇದು ಬರತಕ್ಕ ಪ್ರಸಂಗವೇ ! ಹೇಗಾದರೂ ಬಂದಿದ್ದೇನೆ. ಮುಗಿಸಿಯೇಬಿಡಿರಿ…." ಎಂದು ಮಾತು ಮುಗಿಸಿದ್ದರು. ಭೀಮಣ್ಣನಿಗೂ ಬೇಕಾದ ಸಂದರ್ಭ ದೊರೆತಂತಾಗಿತ್ತು. ಕೂಡಲೇ ಮಾಧವನಿಗೆ 'ಹೊರಟು ಬಾ' ಎಂದು ತಂತಿಯನ್ನು ಕಳಿಸಿದ್ದ.

ಈ ಯಾವ ಸಮಾಚಾರ ತಿಳಿಯದ ಮಾಧವ ನೇರವಾಗಿ ಬಂದು ಕಕ್ಕನ ಬಾಯಿಗೆ ಬೀಳಬಾರದೆಂದು ಭೀಮಣ್ಣ ಎರಡು ದಿನವೂ ಬೆಳಿಗ್ಗೆ ರೈಲಿನ ವೇಳೆಗೆ ನಿಲ್ದಾಣಕ್ಕೆ ಹೋಗಿದ್ದ. ತಂತಿ ಮುಟ್ಟಿದ ಮೂರನೆಯ ದಿನ ಮಾಧವ ಸುಲದಹಳ್ಳಿಯ ನಿಲ್ದಾಣದಲ್ಲಿಳಿದಾಗ ಮುಂಜಾನೆ ಒಂಬತ್ತೂವರೆಯಾಗಿತ್ತು. ಎರಡುದಿವಸ ಎಷ್ಟು ಯೋಚಿಸಿದರೂ ಭೀಮಣ್ಣ ಕರೆಯಿಸಿದ್ದೇಕೆ ಎಂಬ ಪ್ರಶ್ನೆ ಬಗೆಹರಿದಿರಲಿಲ್ಲ. ಸರೋಜಿನಿಯ ಮೂಲಕ ಮೊದಲೆ ವಿಮನಸ್ಕನಾಗಿದ್ದ ಆತನ ಮುಗುಡವನ್ನು ಈ ತಂತಿ ಇನ್ನೂ ಹೆಚ್ಚಾಗಿ ಮಾಡಿತ್ತು. ಆದ್ದರಿಂದ ರೈಲಿನಿಂದ ಇಳಿದ ಕೂಡಲೆ ನಿಲ್ದಾಣದಲ್ಲಿ ಭೀಮಣ್ಣನನ್ನು ಕಂಡು ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು. ಇಳಿದ ಕೂಡಲೆ ಕೇಳಿದ :

"ಏನು ಭೀಮಣ್ಣ, ಏನು ಸಮಾಚಾರ ?"

"ಎಲ್ಲ ಹೇಳುತ್ತೇನೆ. ನಡೆ…."

"ಏನು ವಿಶೇಷವಿಲ್ಲವಷ್ಟೆ ? ನನಗೆ ತುಂಬಾ ಗಾಬರಿಯಾಗಿಬಿಟ್ಟಿತ್ತು."

"ವಿಶೇಷವೇನು ? ನಿಮ್ಮ ಕಕ್ಕ ಬಂದುಬಿಟ್ಟಿದ್ದಾನೆ. ಪ್ರತಿನಿತ್ಯ ರಸಕಸಿ, ರಾದ್ಧಾಂತ…."

"ಏನೆಂದು ?"

ಮಾಧವ ಜತೆಯಲ್ಲಿ ಯಾವ ಸಾಮಾನನ್ನೂ ತಂದಿರಲಿಲ್ಲವಾದ್ದರಿಂದ

ಇಬ್ಬರೂ ನೇರವಾಗಿ ಹೊರಟರು. ಭೀಮಣ್ಣ ಹೇಳಿದ:

"ಆತನಿಗೇನು ವಿಶೇಷ ಕಾರಣ ಬೇಕಾಗುವುದಿಲ್ಲ. ಕರಿಸಿದ್ದಪ್ಪನ ಕಡೆಯಿಂದ ವಸೂಲಿಗಾಗಿ ಬಂದಿದ್ದ...."

"ಆದರೆ ಆ ದಿವಸ ಆತ ನಮಗೆ ರೂಪಾಯಿ ಕೊಟ್ಟುಬಿಡಲಿಲ್ಲವೆ ?"

"ಹೌದು. ಅದಕ್ಕೆಯೇ ಮೊದಲು ಬಂದದ್ದು ತಕರಾರು. ತನಗೆ ತಿಳಿಸದೆ ರೂಪಾಯಿ ಹೇಗೆ ವಸೂಲಿ ಮಾಡಿದಿರಿ ಎಂದು ಸಿಕ್ಕಾಪಟ್ಟೆ ಒದರಾಡಿದ.... ಒಂದು ಎಳೆ ಸಿಕ್ಕರೆ ಸಾಕಲ್ಲ ; ಹಿಂದುಮುಂದೆ ಯಾವ ಸಂಬಂಧವೂ ಇಲ್ಲದೆ ಎಲ್ಲರ ಮೇಲೆಯೂ ಹರಿಹಾಯ್ದ."

"ನಾನು ಊರಿಗೆ ಪರೀಕ್ಷೆಗೆಂದು ಹೋದದ್ದು ಗೊತ್ತಾಗಿದೆಯೆ ?" ಆಗದೆ ಏನು ? ಹೋಗಲಾರದ್ದಕ್ಕೆ ನೀನು, ನಿಷ್ಕಾರಣವಾಗಿ ನಾನು, ಉದ್ಧಾರವಾದ ಹಾಗಾಯಿತು ಅವನ ಬಾಯಿಂದ."

"ನಿನಗೇಕೆ ಈ ಪುರಸ್ಕಾರ....?"

"ನಾವೆಲ್ಲ ಸೇರಿ ನಿನ್ನನ್ನು ಪುಸಲಾಯಿಸಿ ಆತನನ್ನು ಹಾಳುಮಾಡುತ್ತಿದ್ದೇವೆ ಎನ್ನುತ್ತಿದ್ದಾನೆ. ಕೊನೆಗೆ ನನಗೂ ತಡೆಯದಾಗಿ, ಯಾರು ಯಾರನ್ನು ಹಾಳುಮಾಡುತ್ತಿದ್ದಾರೆ ಹೇಳಿಕೆಕೊಟ್ಟೆ."

ಮಾಧವ ಯೋಚನೆಯಲ್ಲಿ ಮಗ್ನನಾಗಿದ್ದ. ಇಬ್ಬರೂ ಸಮನಾಗಿ ಹೆಜ್ಜೆ ಹಾಕುತ್ತಿದ್ದರು. ಮಾಧವನೆಂದ :

"ಈಗ ಏನು ಮಾಡಬೇಕೆನ್ನುತ್ತಾನೆ ?"

"ಎಲ್ಲ ಬಗೆಹರಿಸಿಕೊಂಡು ಬೇರೆಯಾಗಬೇಕೆನ್ನುತ್ತಾನೆ. ಬಾಯಿಂದ ಮೊದಲು ಹಾಗೇನೂ ಹೇಳಲಿಲ್ಲ. ನನ್ನಿಂದಲೇ ಆ ಮಾತು ಆಡಿಸಬೇಕು ಎಂದು ಆತನ ಹಟ. ಆದರೆ ಎಲ್ಲ ಕಾಗದಪತ್ರ ತೆಗೆದುಕೊಂಡೇ ಬಂದಿದ್ದಾನೆ. ಈಗ ಎರಡು ದಿವಸವಂತೂ ತನ್ನ ಲೆಕ್ಕಪತ್ರಗಳಲ್ಲಿಯೇ ಇದ್ದಿದಾನೆ."

"ಹಾಗಾದರೆ ಏನು ಮಾಡುವುದು ಭೀಮಣ್ಣಾ ?"

"ಮಾಡುವುದೇನು ? ಆಗುವುದು ಆಗಿಹೋಗಲಿ. ಸುಮ್ಮನೆ ಯಾಕೆ ಈ ಒಳಗಿನಿಂದ ತಿಕ್ಕಾಟ ?"

"ಅಮ್ಮ ಏನೆನ್ನುತ್ತಾಳೆ ?"

"ಆಕೆ ಏನೆನ್ನುವುದು ? ನೀನು ಬಂದಮೇಲೆ ನಾವಿಬ್ಬರೂ ಮಾತನಾಡಿಕೊಳ್ಳಬೇಕು ಅಂದಳು. ಮನೆಗೆ ಬಂದಮೇಲೆ ಮಾತನಾಡಲೂ ಆಗಲಿಕ್ಕಿಲ್ಲ ಎಂದು ಇಲ್ಲಿಗೇ ಬಂದುಬಿಟ್ಟೆ."

"ನಾನೆಂದಿಗೋ ಹೇಳಿದ್ದೇನೆ, ಭೀಮಣ್ಣಾ. ನನಗೇಕೋ ಮನಸ್ಸು ಒಪ್ಪುವುದಿಲ್ಲ. ನನಗೆ ಎಳ್ಳಷ್ಟೂ ಮನಸ್ಸಾಗುವುದಿಲ್ಲ. ಅಮ್ಮ ಹೇಳಿದರೆ ಯೋಚಿಸಬೇಕು."

"ಹಾಗಾದರೆ ನೀನು ಒಂದು ಮಾಡಬಹುದು. ನೀನುಯಾವುದಕ್ಕೂ ಅಡ್ಡವಾದರೂ ಬರಬೇಡ...."

"ನನ್ನನ್ನು ಆತ ನೇರವಾಗಿ ಮಾತನಾಡಿಸಿಬಿಟ್ಟರೆ? ಮಾತನಾಡಿಸಿಯೆ ಬಿಡುವ. ಅದರಲ್ಲಿ ಸಂದೇಹವೇ ಇಲ್ಲ. ನಾನೇನು ಮಾಡಬೇಕು?"

"ನೀನೇನೂ ಹೇಳಬೇಡ. 'ಹಿರಿಯರಿದ್ದಾರೆ. ಅವರು ಹೇಳಿದ ಹಾಗೆ ಮಾಡಿರಿ' ಎಂದು ನಿನ್ನ ತಾಯಿಯ ಮೇಲೆ ಭಾರ ಹಾಕಿಬಿಡು ಮುಂದೆ ನಾನೆಲ್ಲವನ್ನೂ ನೋಡಿಕೊಳ್ಳುತ್ತೇನೆ."

"ಇಬ್ಬರೂ ಹೆಜ್ಜೆ ಹಾಕುತ್ತಲೇ ಇದ್ದರು. ಮಾಧವನಿಗೆ ತುಂಬ ಯೋಚನೆ —ಮನೆ ಮುಟ್ಟಿದಮೇಲೆ ಕಕ್ಕ ಯಾವ ರೀತಿ ಮತ್ತೆ ಒದರಾಡುವನೊ ಎಂದು. ಆದರೆ ಆತನ ಮನೆಯಿಂದ ಹೊರಟು ಬಂದಾಗಿನಿಂದ ಮೊದಲಿನಷ್ಟು ಹೆದರಿಕೆಯೂ ಉಳಿದಿರಲಿಲ್ಲ. ಆತನ ಯಾವ ಹಂಗೂ ಇಲ್ಲದಮೇಲೆ ಆತನ ಹೆದರಿಕೆಯಾದರೂ ಯಾಕೆ ಎನ್ನುತ್ತಲೇ ಮನೆ ಸೇರಿದ. ತಾವಿಬ್ಬರೂ ಕೂಡಿಯೇ ಬಂದದ್ದು ರಾಮರಾಯರಿಗೆ ತಿಳಿಯದಿರಲೆಂದು ಮನೆ ಇನ್ನೂ ದೂರವಿರುವಾಗಲೇ ಭೀಮಣ್ಣ ಬೇರೆ ದಾರಿ ಹಿಡಿದಿದ್ದ.

ಮಾಧವ ಮನೆಗೆ ಬಂದಾಗ ರಾಮರಾಯರು ಎದುರಿಗಿನ ಪಡಸಾಲೆಯಲ್ಲಿಯೇ ಕುಳಿತಿದ್ದರೂ ಮಾಧವನನ್ನು ನೋಡಿಯೂ ನೋಡದಹಾಗೆ ಮಾತನಾಡಿಸಲಿಲ್ಲ. ಅದಕ್ಕಾಗಿಯೇ ಮಾಧವನಾದರೂ ತಾನಾಗಿಯೇ ಬಂದು ಭೆಟ್ಟಿಯಾಗಲಿಲ್ಲ. ಮಧ್ಯಾಹ್ನದ ಊಟದ ವೇಳೆಯಲ್ಲಿಯೂ ಇನ್ನೂ ಬಿಗುವಿನಲ್ಲಿಯೇ ಇದ್ದರು. ಅವರ ಬಿಗುಮಾನದ ಪರಿಣಾಮವಾಗಿ ಅವರು ಊರಿಗೆ ಬಂದಾಗಿನಿಂದ ಒಟ್ಟಿನಲ್ಲಿ ಮನೆಯ ವಾತಾವರಣವೇ ಹೆಪ್ಪುಗಟ್ಟಿದಂತಾಗಿತ್ತು. ಭೀಮಣ್ಣನ ಸಣ್ಣ ಮಕ್ಕಳನ್ನು ಕೂಡ ರಾಯರು ಮುಂದಕ್ಕೆ ಕರೆದು ಮಾತನಾಡಿಸುತ್ತಿದ್ದಿಲ್ಲ. ಊಟ ಮುಗಿದು ಪಡಸಾಲೆಗೆ ಹೋದಮೇಲೆ ರಾಮರಾಯರು ತಾವಾಗಿಯೇ ಮಾಧವನನ್ನು ಕರೆದರು.

"ಏನು ?"—ಎಂದು ಮಾಧವ ಮುಂದೆ ಹೋಗಿ ನಿಂತ

"ನಿನ್ನನ್ನು ಇಲ್ಲಿಗೆ ಯಾತಕ್ಕಾಗಿ ಕರೆಯಿಸಿದೆ ಎಂಬುದು ನಿನಗೆ ತಿಳಿದಿರಬೇಕಲ್ಲ....?"

"ಹುಂ....ಏನು....? ಅಂ...." ಎಂದು ಮಾಧವ ತಡವರಿಸಿದ.

"ಇದು ನೋಡು, ಮಾಧವಾ....ಇದುವರೆಗೆ ಹೇಗೋ ನಡೆಯಿತು. ನೀನೂ ದೊಡ್ಡವನಾದೆ....ಇನ್ನು ಮುಂದೆ ನಿನ್ನ ಜವಾಬುದಾರಿ ನೀನೇ ನೋಡಿಕೊಂಡರೆ ಒಳ್ಳೆಯದು....ಸುಮ್ಮನೆ ಒಳಗೊಳಗಿನಿಂದಲೆ ತಿಕ್ಕಾಟ ಇರುವುದು ಯಾರಿಗೂ ಸುಖವಲ್ಲ...."

"ಅಲ್ಲ ಈಗ ಸುಮ್ಮನೆ...."

"ಸುಮ್ಮನೆ ಅಲ್ಲ, ಏನೂ ಅಲ್ಲ....ಅದೆಲ್ಲ ಉಪಚಾರ—ನೀನು ಬರುವ ಮೊದಲು ಭೀಮಣ್ಣನವರ ಕೂಡ ಬೇಕಾದಷ್ಟು ಮಾತನಾಡಿಯಾಗಿದೆ. ಮಾತಾಡಿ ಯಾವ ಪ್ರಯೋಜನವೂ ಇಲ್ಲ. ಅದಕ್ಕೆ ನೀನೇನೆನ್ನುತ್ತೀ ನನಗೆ ತಿಳಿಯಬೇಕಾಗಿದೆ...."

"ನಾನೇನೆನ್ನುವುದು ? ನನಗೆ ಇದರಲ್ಲಿ ತಿಳಿಯಬೇಕಾದದ್ದೂ ಅಷ್ಟರಲ್ಲಿಯೇ ಇದೆ. ನನಗಿಂತ ಹಿರಿಯರಿದ್ದಾರೆ. ಅಮ್ಮ ಇದ್ದಾಳೆ—ಭೀಮಣ್ಣನವರಿದ್ದಾರೆ. ಅವರು ಹೇಳಿದ ಹಾಗೆ ಆಗಲಿ" ಎಂದು ಪಾಠ ಒಪ್ಪಿಸಿದ. ರಾಮರಾಯರಿಗೆ ಈ ಉತ್ತರ ಅನಿರೀಕ್ಷಿತವಾಗಿರಲಿಲ್ಲ. ಅಂತೆಯೇ ಅಂದರು :

ಇಷ್ಟು ಹೇಳಿ ನೀನು ಪಾರಾಗುವವ ಎನ್ನುವುದು ನನಗೆ ಮೊದಲೇ ಗೊತ್ತಿತ್ತು...."

"ಪಾರಾಗುವಂಥ ಪ್ರಸಂಗ ಏನು ಇಲ್ಲಿ ಈಗ ? ಹಿರಿಯರು ಮಾತಾಡುವ ವಿಷಯ ಇದು, ಎಂದೆ."

"ಅದೇ, ಅದೇ. ನನಗೆಲ್ಲ ತಿಳಿಯುತ್ತದಪ್ಪಾ...."

ಮಾಧವ ಮಾತನಾಡಲಾರದೆ ಹೊರಡಲನುವಾದ. ಆದರೆ ರಾಯರು ತಡೆದು ಹೇಳಿದರು :

"ಇದು ನೋಡು. ಈ ಪಟ್ಟೆಯಲ್ಲಿ ಎಲ್ಲ ಲೆಕ್ಕ ಇದೆ."

"ನನಗೇನೂ ತಿಳಿಯುವುದಿಲ್ಲ. ನೀವೇನು ಬೇಕಾದ್ದನ್ನು ಮಾಡಿಬಿಡಿರಿ...."

"ಹಾಗೆಂದರೆ ನಡೆಯಲಾರದು, ಮಾಧವಾ. ನನಗೆ ಈ ಒಣ ಜಬಾಬುದಾರಿ ಬೇಕಾಗಿಲ್ಲ. ಇಷ್ಟು ದಿವಸ ನಡೆಸಿಕೊಂಡು ಹೋದದ್ದೇ ಸಾಕಾಗಿದೆ.... ಎಲ್ಲವನ್ನೂ ಒಮ್ಮೆ ಬಗೆಹರಿಯಿಸಿಕೊಂಡೇ ಹೋಗಬೇಕಾಗಿದೆ ನನಗೆ...."

"ನಾನು ಯಾವ ಮಾತನ್ನೂ ಆಡುವುದಿಲ್ಲ. ನೀವೇನು ಹೇಳಬೇಕಾದುದನ್ನು ಭೀಮಣ್ಣನಿಗೇ ಹೇಳಿರಿ...."

ಆಚೆಯ ಕೋಣೆಯಿಂದ ಈ ಸಂವಾದವನ್ನೆಲ್ಲ ಕೇಳುತ್ತಿದ್ದ ಭೀಮಣ್ಣ

ಬಂದೇ ಬಿಟ್ಟ. ಆತ ಬರುವುದು ಮಾಧವನಿಗೂ ಬೇಕಾಗಿತ್ತು. ರಾಯರು ಭೀಮಣ್ಣನನ್ನುದ್ದೇಶಿಸಿ ಹೇಳಿದರು :

"ಈತನಂತೂ ಯಾವುದೂ ತನಗೆ ಸಂಬಂಧವಿಲ್ಲದ ಹಾಗೆ ಮಾತನಾಡು ತ್ತಿದ್ದಾನೆ...." ಎಂದು ಒಂದು ನಿಮಿಷ ತಡೆದು ಕೊನೆಗೆ,

"ನೀವೇ ನೋಡಿಕೊಳ್ಳಿರಿ, ಈ ಲೆಕ್ಕಪತ್ರ...." ಎಂದು ಕಾಗದದ ಪುಡಿಕೆ ಯೊಂದನ್ನು ಭೀಮಣ್ಣನ ಮುಂದೆ ಸರಿಸಿದರು. ಹತ್ತಿರದ ಕಂಬಕ್ಕೆ ಆತು ಕೊಂಡು ಕುಳಿತು ಭೀಮಣ್ಣ ಒಂದೊಂದಾಗಿ ಕಾಗದಗಳನ್ನು ಬಿಡಿಸಿ ಓದಿ ಕೊಂಡ. ಓದಿ ಬದಿಗಿರಿಸಿದ ಕಾಗದಗಳನ್ನು ಮಾಧವನೂ ಪರಿಶೀಲಿಸುತ್ತಿದ್ದ. ಕೊನೆಗೆ ಭೀಮಣ್ಣನೆಂದ—ಅಸಮಾಧಾನದ ದನಿಯಲ್ಲಿ :

"ಇದೇನು ಬಗೆಹರಿಯುವುದಿಲ್ಲ, ರಾಯರೆ....ನಾವು ಒಬ್ಬಿಬ್ಬ ಪಂಚರನ್ನು ಕರೆಯಲೇಬೇಕಾಗುವ ಹಾಗೆ ಕಾಣುತ್ತದೆ...."

"ಹುಂ....ಅದೊಂದು ಅವಮಾನ ಇನ್ನು ಉಳಿದಿದೆ. ಅದನ್ನು ಅಷ್ಟು ಮಾಡಿಸಿಬಿಡಿರಿ."

"ನಮ್ಮಿಷ್ಟಕ್ಕೆ ಬಗೆಹರಿಯದಿದ್ದರೆ, ಏನು ಮಾಡುವುದು ಹಾಗಾದರೆ ? ನಿಷ್ಕರ್ಷೆಯೋ ಆಗಬೇಕೆಂದಮೇಲೆ ಅವಮಾನ ಎಂದು ತಿಳಿಯಬೇಕಾದರೂ ಯಾಕೆ ?"

"ಈಗ ಏನು ಬಂದದ್ದು ಅಂಥ ವಿಷಯ ?"

"ನನಗೆ ತಿಳಿದ ಮಟ್ಟಿಗೆ ಸೇರಬೇಕಾದ ಆಸ್ತಿ ಎಲ್ಲ ಇದರಲ್ಲಿ ಬಂದಿಲ್ಲ.... ರಾಮಾಪುರದ ಮೂರು ಹೊಲ ಇದರಲ್ಲಿ ಕಾಣಿಸಿಲ್ಲ....ಅಲ್ಲದೆ ಧಾರವಾಡದ ಇನ್ನೊಂದು ಮನೆ....ಮತ್ತು...."

"ರಾಮಾಪುರದ ಹೊಲಗಳದ್ದೇನು ಸಂಬಂಧ ಇದರಲ್ಲಿ ?"

"ಆ ಹೊಲಗಳ ಸಂಬಂಧ ಇರದಿದ್ದರೆ ಯಾವುದರ ಸಂಬಂಧವೂ ಇಲ್ಲ ಎಂದಹಾಗಾಯಿತು."

"ಆ ಮೂರು ಹೊಲ ನಾನು ಕೊಂಡಿದ್ದೇನೆ. ಅದರಂತೆಯೇ ಧಾರವಾಡ ದಲ್ಲಿಯ ಮನೆ...."

"ಹಾಗಾದರೆ ನಗದು ಹಣ ಲೆಕ್ಕ ಬದಲಾಗಬೇಕು...."

"ಎಲ್ಲಿಯ ನಗದು ಹಣ ? ಏನು ಲೆಕ್ಕ ? ನಿಮಗೇನು ಹುಚ್ಚು ಹಿಡಿದಿ ದೆಯೆ, ಭೀಮಣ್ಣನವರೆ ?"

"ನಾನು ಅದಕ್ಕೆಯೆ ಹೇಳಿದೆ, ಪಂಚರು ಬೇಕು ಎಂದು !"

"ಯಾವ ಹಣ, ಅದನ್ನಾದರೂ ಹೇಳಿರಿ...."

"ನಾನು ಯಾವುದನ್ನೂ ಹೇಳಬೇಕಾಗಿಲ್ಲ. ನಿಮಗೆ ತಿಳಿದ ವಿಷಯು ಅದು. ಆ ಕಾಲಕ್ಕೆ ನಾನು ಅಲ್ಲಿದ್ದೆ. ಆ ಹಣದ ಏರ್ಪಾಡುಮಾಡಿದವ ನಾನೇ.... ನನ್ನ ಮುಂದೆ ಬೇರೆ ಲೆಕ್ಕ ನಡೆಯುವ ಹಾಗಿಲ್ಲ...."

ಮಾಧವನಿಗೆ ತೀರ ಬೇಸರವೆನಿಸತೊಡಗಿತ್ತು. ಒಂದೆರಡು ಸಲ ಅಲ್ಲಿಂದ ಎದ್ದೂ ಹೊರಟೂ ಇದ್ದ. ಆದರೆ ಕಕ್ಕ ಭೀಮಣ್ಣ ಇಬ್ಬರೂ ಎರಡು ಮೂರು ಸಾರೆ ಒತ್ತಾಯಪಡಿಸಿ ಅಲ್ಲಿಯೇ ಉಳಿಸಿಕೊಂಡಿದರ್ರು. ಭೀಮಣ್ಣ ಖಂಡಿತ ವಾಗಿ ಹೇಳಿದ :

"ಒಂದಲ್ಲ, ಎರಡಲ್ಲ' ಮೂವತ್ತು ಸಾವಿರ ರೂಪಾಯಿ ನಗದು ನಾನೇ ಎಣಿಸಿದ್ದೇನೆ. ಅಂದು ಅಲ್ಲಿಂದ್ದ ಆ ಹಣ ಸಾಗಿಸಬೇಕಾದ್ದರಿಂದ ಕೋಮಟಿ ಕೃಷ್ಣಪ್ಪನ ಹತ್ತಿರಕೊಟ್ಟು, ಅದರ ಬದಲು ಬಂಗಾರದ ಸಾಮಾನು ತಂದಿಟ್ಟವ ನಾನೇ....ಆ ವ್ಯವಹಾರದ ಬಗೆ ಕೃಷ್ಣಪ್ಪ ನಿಮ್ಮ ಹೆಸರಿಗೆ ಕೊಟ್ಟ ರಶೀದಿ ನನ್ನ ಹತ್ತಿರ ಇದೆ....ಆ ಹೊಲ, ಆ ಮನೆ ನೀವು ಕೊಂಡಿರಬೇಕು. ಆದರೆ ಹಣ ಮಾತ್ರ ಅದೇ."

ಭೀಮಣ್ಣ ರಶೀದಿಯ ಮಾತು ಹೇಳಿದಾಗ ಮಾತ್ರ ರಾಮರಾಯರು ಅವಾಕ್ಕಾದರು. ಒಪ್ಪದೆ ವಿಧಿ ಉಳಿಯಲಿಲ್ಲ. ತಡೆಯಲಾಗದೆ ಕೊನೆಗೆ ಸಂತಾಪದಿಂದ ಹೇಳಿದರು :

"ನೀವು ನನ್ನನ್ನು ಸಂಪೂರ್ಣ ಮುಳುಗಿಸಬೇಕೆಂದೇ ಹಟ ತೊಟ್ಟದ್ದೀರಿ, ಎಂದವೇಲೆ...."

"ಯಾರು ಯಾರನ್ನೂ ಮುಳಗಿಸಬೇಕಾಗಿಲ್ಲ. ಇದ್ದ ಲೆಕ್ಕವನ್ನು ಸರಿ ಯಾಗಿ ತೋರಿಸಿದರೆ ಯಾರೂ ತಕರಾರು ಮಾಡುವುದಿಲ್ಲ. ಹಾಗೆ ನೋಡಿದರೆ ಆ ಎಲ್ಲ ಹಣ ಸ್ವಾರ್ಜಿತ. ಪಾಲಿಗೆ ಹಚ್ಚಲೂ ಬರುವುದಿಲ್ಲ...."

"ನೀವು ಅನ್ನುವುದಾದರೂ ಏನು? ಎಲ್ಲವನ್ನೂ ಕಸಿದುಕೊಂಡು ನನ್ನನ್ನು ಬೀದಿಗೆ ತಳ್ಳಬೇಕೆಂದು ಮಾಡಿದ್ದೀರಾ ?"

"ನಮಗೇನೂ ಅಷ್ಟು ದೊಡ್ಡ ಮನಸ್ಸಿಲ್ಲ ! ಎಂದು ಭೀಮಣ್ಣ ಚುಚ್ಚು ಮಾತನಾಡಿದ. ಎಲ್ಲ ಕಾಗದಪಗಳನ್ನು ತಿರುಗಿ ಕೊಡುತ್ತ ಹೇಳಿದ : ನೀವೇ ಇನ್ನೊಮ್ಮೆ ಎಲ್ಲವನ್ನೂ ನೋಡಿಕೊಂಡು ಹೇಳಿರಿ....ನಮಗೇನೂ ತಕರಾರು ಮಾಡಬೇಕಿಲ್ಲ. ನಾಳೆ ಬೆಳಿಗ್ಗೆ ಒಬ್ಬಿಬ್ಬರಿಗೆ ಬರಹೇಳುತ್ತೇನೆ. ನಿಮಗೆ ಬೇಕಾ ದವರಿಗೆ ನೀವು ಹೇಳಿರಿ. ನಾಲ್ಕು ಜನರೆದುರಿಗಾದರೆಯೇ ಈ ಎಲ್ಲ ಮಾತು

ಸರಿಯಾಗಿ ಆಗತಕ್ಕವು...." ಎಂದು ಭೀಮಣ್ಣ ಅಲ್ಲಿಂದ ಹೊರಟೇಬಿಟ್ಟ.

ಮರುದಿನ ಮುಂಜಾನೆ ಪಾಲುಗಾರಿಕೆಯ ಕಾರ್ಯಕ್ರಮ ಕ್ರಮಬದ್ಧವಾಗಿಯೇ ನಡೆಯಿತು. ರಾಮರಾಯನ ಪರವಾಗಿ ಸಂಗಪ್ಪಗೌಡ,ಮಾಧವನ ಪರವಾಗಿ ಶಾನುಭೋಗ ಶಂಕ್ರಪ್ಪ ವಕಾಲತ್ತು ವಹಿಸಿದ್ದರು. ಮಧ್ಯಾಹ್ನದ ಸುಮಾರಿಗೆ ಎಲ್ಲ ತೊಡಕುಗಳೂ ಬಗೆಹರಿದು ಒಂದು ವಿಷಯ ಮಾತ್ರ ಉಳಿದಿದ್ದಿತು.

"ವಿಠ್ಠಪ್ಪನ ತೋಟದ್ದೊಂದು ಮುಗಿದರೆ ಕೆಲಸವಾದಹಾಗಾಯಿತು...." ಎಂದರು ರಾಯರು. ಆದರೆ ಆ ವಿಷಯದಲ್ಲಿ ಭೀಮಣ್ಣನಿಗೆ ಸಂದೇಹವೇ ಇರಲಿಲ್ಲ.

"ಅದರದೇನು ಮುಗಿಯುವುದು ? ಎಂದೋ ಕೈಬಿಟ್ಟುಹೋಗಿದೆ. ಅದು ನಮಗೆ ತಿರುಗಿ ಬರುತ್ತದೆಯೆ ?"

"ಕೈಬಿಟ್ಟೇನು ಹೋಗುತ್ತದೆ?ಅದನ್ನು ಕೊಟ್ಟದ್ದು ಜೀವನಾವಧಿ ಎಂದು."

"ಹೌದು. ಅದು ಎಂದಿಗೋ ಬರತಕ್ಕುದನ್ನು ನಮಗೆ ಬಿಟ್ಟು ಅದಕ್ಕೆ ಬದಲಾಗಿ ಏಳು ಸಾವಿರ ರೂಪಾಯಿ ನಿಮ್ಮ ಕಡೆಗೆ ತೆಗೆದುಕೊಂಡಿದ್ದೀರಿ."

"ಅದು ಎಂದು ಬಂದರೂ ಪಾಲೀಗೆನೂ ಸಂಬಂಧವಿಲ್ಲ"ಎಂದು ಶಂಕ್ರಪ್ಪನ ವಾದ.

"ಇಷ್ಟೆಲ್ಲಾ ಹಚ್ಚಿದಮ್ಯಾಲ ಅದನ್ನ ಹ್ಯಾಂಗ ಬಿಡಲಾಕ ಬರತೈತರಿ ?" ಎಂದ ಸಂಗಪ್ಪಗೌಡ.

"ಇದು ನೋಡಿರಿ, ಗೌಡರೆ" ಎಂದು ಭೀಮಣ್ಣ ಮುಂದೆ ಬಂದು ಹೇಳಿದ: ಆ ತೋಟ ನಾನೇ ಕೊಡಿಸಿದ್ದೆ. ಇದು ನಿಮಗೂ ಗೊತ್ತು. ಅದು ಸಂಪೂರ್ಣ ಸ್ವಾರ್ಜಿತ....ಆದರೆ ಏನಿದ್ದರೂ ಪ್ರಯೋಜನವಿಲ್ಲವಲ್ಲ ? ಅದು ನಮ್ಮ ಕೈಗೆ ಬಂದಾಗ ನಿಜ. ಯಾರಿಗೆಕೊಟ್ಟದ್ದೋ, ಎಂದಿಗೆ ಬರುವುದೊ?" ಎಂದ ಭೀಮಣ್ಣ.

"ಅದನ್ನೆಲ್ಲ ನೋಡಿಕೊಂಡೇ ಹೀಗೆ ಲೆಕ್ಕ ಹಾಕಲಾಗಿದೆ, ಭೀಮಣ್ಣನವರೆ. ಆ ತೋಟದ ಸಲುವಾಗಿಯೇ ಈಗ ಎಂಟು ದಿವಸಗಳ ಹಿಂದೆ ಕೋಮಟಿ ಕೃಷ್ಣಪ್ಪ ಬಂದಿದ್ದ."

"ಕೃಷ್ಣಪ್ಪನದೇನು ಸಂಬಂಧ ಇದರಲ್ಲಿ ?"

"ಆತನೇನೋ ಆ ಹೆಣ್ಣು ಮಗಳಿಗೆ ದುಡ್ಡು ಕೊಟ್ಟಿರಬೇಕು ಎಂದು ಕಾಣುತ್ತದೆ. ಅಥವಾ ಸಾಧ್ಯವಾದರೆ ಅದನ್ನು ತಾನೇ ಎತ್ತಿಹಾಕಬೇಕು ಎಂದು

ಪಣಿವಕೆ ಇದ್ದರೂ ಇದ್ದಿರಬಹುದು...."

"ಆತ ಹೇಳಿದ್ದಾದರೂ ಏನು ?"

"ಆತ ಬಂದದ್ದು ಮಧ್ಯಸ್ಥಿಕೆಯ ಸೋಗುಹಾಕಿಕೊಂಡು. ಇದ್ದ ಪರಿಸ್ಥಿತಿ ಏನಿದೆ ಯಾರು ಬಲ್ಲರು? ಆ ಹೆಣ್ಣುಮಗಳೇನೋ ತೀರ ಸಾಯುವುದರಲ್ಲಿದ್ದಾಳಂತೆ. ಆಕೆಗೆ ಒಬ್ಬಳೇ ಮಗಳು. ಇನ್ನಾರೂ ಇಲ್ಲ. ಬೇರೆ ಗತಿಯಿಲ್ಲ. ಅದಕ್ಕೆ ಆ ತೋಟ ಮಗಳ ಹೆಸರಿಗೆ ಬಿಟ್ಟುಕೊಟ್ಟರೆ ಒಳ್ಳೆಯದು ಎಂದು ಹೇಳಲು ಬಂದಿದ್ದ. ಆದರೆ ಆತನ ಕಾರಸ್ಥಾನ ಏನಿದ್ದಿತು ನನಗೇನೂ ತಿಳಿಯಲಿಲ್ಲ." ಭೀಮಣ್ಣನ ಜತೆಯಲ್ಲಿ ತಿರುಗಾಡಹೋದಾಗ ನೋಡಿದ ತೋಟದ ವಿಷಯ ಅದು ಎಂಬುದು ಗೊತ್ತಿದ್ದ ಕಾರಣ ರಾಮರಾಯರ ಮಾತನ್ನು ಕೇಳಿದ ಹಾಗೆ ಮಾಧವನ ಕುತೂಹಲ ಬೆಳೆಯುತ್ತಿತ್ತು. ಭೀಮಣ್ಣ ಕೇಳಿದ :

" ಆ ಹೆಣ್ಣು ಮಗಳು ಸಾಯುವುದರಲ್ಲಿದ್ದಾಳೆಯೆಂದು ಹೇಳಿದನೆ ?"

"ಹುಂ....ಅದಕ್ಕೇ ಆ ತೋಟ ಬೇಗನೆ ಬಿಟ್ಟುಬರುತ್ತದೆ ಎಂದೆ."

"ಯಾರು ಆಕೆ ? ಎಲ್ಲಿರುತ್ತಾಳೆ ?"

"ಗದುಗಿನಲ್ಲಿ !"

"ಗದುಗಿನ ಆ ರಂಗಸಾನಿರೀ....ಗೊತ್ತಿಲ್ಲೇನು ನಿಮಗ?" ಎಂದು ಸಂಗಪ್ಪಗೌಡ ತನಗೂ ಗೊತ್ತಿದೆ ಎಂಬುದನ್ನು ತಿಳಿಸುವವನಂತೆ ಹೇಳಿದ. ರಂಗಸಾನಿಯ ಹೆಸರು ಕೇಳಿದ ಕೂಡಲೆ ಮಾಧವ ಸಿಡಿದುಬಿದ್ದ ! ಆ ತೋಟ.... ರಂಗಸಾನಿ ತನ್ನ ತಂದೆ ಕೊಟ್ಟದ್ದು ! ವಿಚಾರ ಚಕ್ರಕ್ಕೆ ವಿಶ್ರಾಂತಿಯೇ ಇಲ್ಲದಾಯಿತು. ತನ್ನ ಸುತ್ತಲೂ ನಡೆದುದೇನೆಂಬುದರ ಅರಿವೇ ಉಳಿಯಲಿಲ್ಲ ಮಾಧವನಿಗೆ. ತಟ್ಟನೆ ಅಲ್ಲಿಂದ ಎದ್ದು ಹೊರಗಡೆ ತತ್ತರಿಸಿದ. ಮುಂಜಾವಿನಿಂದ ಮಾಧವನ ಮನಃಸ್ಥಿತಿಯನ್ನು ಬಲ್ಲ ಭೀಮಣ್ಣನೂ ಎದ್ದುಹೋಗಿ. "ಎಲ್ಲ ಮುಗಿಯಿತಲ್ಲ. ಇಷ್ಟಕ್ಕಾಗಿ ಯಾಕೆ ಹೊರಟುಹೋಗುತ್ತೀ?" ಎಂದು ಮತ್ತೆ ಮಾಧವನನ್ನು ತನ್ನ ಹತ್ತಿರ ಕುಳ್ಳಿರಿಸಿಕೊಂಡ. ಆದರೆ ಮಾಧವನ ಲಕ್ಷ್ಯ ಎಲ್ಲಿಯೋ ಅಲೆದಾಡುತ್ತಿತ್ತು—ದಾರಿ ತಪ್ಪಿದ ದನದಂತೆ ! ಆತನ ಕಣ್ಣೆದುರು ಒಂದೇ ಒಂದು ಚಿತ್ರ ನಿಚ್ಚಳವಾಗಿ ನಿಲ್ಲುತ್ತಿತ್ತು : ತನ್ನ ತಂದೆ ರಂಗಸಾನಿ—ಸರೋಜಿನಿ ! ಥೂಃ ! ಗಟ್ಟಿಯಾಗಿ ತಲೆಯನ್ನು ಹಿಡಿದುಕೊಂಡ. ಹುಃ ! ಎಂದು ಎರಡು ಮೂರು ಬಾರಿ ತಲೆಯಲ್ಲಾಡಿಸಿದ, ಕಣ್ಣು ಮುಚ್ಚಿದ. ಕಣ್ಣು ಮುಂದಿನ ಚಿತ್ರ ಸರಿಯಲಿಲ್ಲ ! ತನ್ನ ತಂದೆ—ರಂಗಸಾನಿ—ಸರೋಜಿನಿ !

"ಏನಾದರೂ ಆ ತೋಟವನ್ನು ಬಿಡುವಹಾಗಿಲ್ಲ" ಎಂದು ಭೀಮಣ್ಣ ಹಟ ಹಿಡಿದ.

"ಹಾಗಾದರೆ ನಗದು ರೂಪಾಯಿಯಲ್ಲಿ ಕಡಿಮೆ ಮಾಡಿರಿ—" ಎಂದು ರಾಮರಾಯ.

"ಅದೇನೂ ಇಲ್ಲ. ಆ ತೋಟಕ್ಕೆ ನಿಮಗೆ ಸಂಬಂಧವೇ ಇಲ್ಲ."

"ಹೌದು. ನನಗೆ ಯಾವುದೂ ಸಂಬಂಧವಿಲ್ಲ !"

"ಹೀಂಗ ಮಾತು ಮಾತಿಗೆ ಹಟಾ ಹಿಡಿದರೆ ಹ್ಯಾಂಗರಿ, ಭೀಮಣ್ಣನವರ ?" ಎಂದು ಸಂಗಪ್ಪ.

"ಇದರೊಳಗೆ ಇಬ್ಬರೂ ಸೋಲಬೇಕಾಗುತ್ತದೆ...."ಎಂದು ಶಂಕ್ರಪ್ಪನ ಬುದ್ಧಿವಾದ. ಅರ್ಧ ಗಂಟೆಯ ತಿಕ್ಕಾಟದ ನಂತರ ತೋಟ ಮಾಧವನ ಪಾಲಿಗೆ ಉಳಿಯತಕ್ಕದೆಂದೂ ಅದರ ಬದಲಾಗಿ ರಾಮರಾಯ ತನಗೆಂದುಕೊಂಡ ನಗದು ಹಣದಲ್ಲಿ ಮುಕ್ಕಾಲುವಾಸಿ ಮಾಧವನಿಗೆ ಬರಬೇಕೆಂದೂ ನಿರ್ಣಯವಾಗಿ ಪಾಲುಗಾರಿಕೆ ಮುಗಿಯಿತು. ಕೊನೆಯವರೆಗೂ ಭೀಮಣ್ಣ ಗಟ್ಟಿಮುಟ್ಟಾಗಿ ಮಾಧವನಿಗೆ ಸಲ್ಲಬೇಕಾಗಿದ್ದುದರ ಸಂರಕ್ಷಣೆಯನ್ನು ಮಾಡಿದ್ದ. ತಮ್ಮ ಆಟ ಎಷ್ಟೂ ನಡೆಯಲಿಲ್ಲವೆಂದು ರಾಮರಾಯರು ಸಂತಾಪದಿಂದ ಉರಿದುಬೀಳುತ್ತಿದ್ದರು.

ಮಧ್ಯಾಹ್ನದ ಊಟದ ವೇಳೆಯಲ್ಲಿ ಯಾರೂ ಒಂದು ಮಾತನ್ನೂ ಆಡುವ ಮನಃಸ್ಥಿತಿಯಲ್ಲಿರಲಿಲ್ಲ. ಮಾಧವನಂತೂ ಯಾರು ಮಾತನಾಡಿಸಿದರೂ ಉತ್ತರ ಕೊಡಲಾಗದಷ್ಟು ವಿಮನಸ್ಕನಾಗಿದ್ದ. ಊಟವಾದ ಕೂಡಲೆ ಹಾಸಿಗೆ ಬಿಡಿಸಿ ಮುಸುಕು ಹಾಕಿ ಮಲಗಿಕೊಂಡುಬಿಟ್ಟ. ಇಡೀ ಮುಂಜಾವಿನಲ್ಲಿ ನಡೆದ ತಿಕ್ಕಾಟ, ಮಾತಿನ ಮಸೆತ, ಮನಸ್ತಾಪ ಇವೇ ಅದಕ್ಕೆ ಕಾರಣವೆಂದು ಯಾರೂ ಆತನ ಗೊಡವೆಗೆ ಹೋಗಲಿಲ್ಲ. ಆದರೆ ಮಾಧವನನ್ನು ಕಾಡುತ್ತಿದ್ದ ಯೋಚನೆ ಅವನ ಹೊರತು ಯಾರಿಗೂ ತಿಳಿಯುವಂತಿರಲಿಲ್ಲ. ಆತನ ಕಣ್ಣೆದುರಿಗೆ ಒಂದೇ ಒಂದು ಚಿತ್ರ ! ತನ್ನ ತಂದೆ—ರಂಗಸಾನಿ—ಸರೋಜಿನಿ ಸಾಲುಸಾಲುಗಿ ನಿಂತಂತೆ ! ತನಗೆ ಸರೋಜಿನಿಯ ಪರಿಚಯವಾದಾಗಿನಿಂದ ನಡೆದುದೆಲ್ಲವನ್ನೂ ನೆನೆದು ನಿಟ್ಟುಸಿರು ಹಾಕಿದ. ಎಷ್ಟು ಸಮೀಪವಾಗಿದ್ದವಳು ! ಎಷ್ಟು ದೂರವಾದಳು—ಎಷ್ಟು ದೂರವಾಗಿದ್ದವಳು ಎಷ್ಟು ಸಮೀಪವಾದಳು ! ಸರೋಜಿನಿ ! ಪಾಪ ! ಆಕೆಯ ಬಗೆಯಲ್ಲಿಯ ಕನಿಕರ ಮಾಧವನಲ್ಲಿ ಕಣ್ಣೀರಾಗಿ ಹರಿಯಿತು. ತಾವು ಆಲದ ಮರದ ಬುಡದಲ್ಲಿ

ಕುಳಿತ ಸನ್ನಿವೇಶ ಕಣ್ಣೆದುರು ನಿಂತಾಗ ತಡೆಯಲಾಗದ ಸಂಕಟವಾಯಿತು. ಥೂಃ ! ಎಂಥ ನಾಚಿಕೆಗೇಡು ? ಸರೋಜಿನಿ ಯಾರು? ನೂರು ಬಾರಿ ಮಾಧವ ತನ್ನನ್ನು ತಾನೇ ಹಳಿದುಕೊಂಡ. ತನ್ನ ತಂದೆಯ ಗತಕಾಲದ ಇತಿಹಾಸ ತನ್ನ ಮೇಲೆ ಇಷ್ಟು ನಿರ್ದಯವಾಗಿ ಸೇಡು ತೀರಿಸಿಕೊಳ್ಳುವಂತಾಯಿತಲ್ಲಾ ಎಂದು ಬೆರಗುಪಟ್ಟ— ಹೆದರಿದ! ದೂರ ಓಡಿದಷ್ಟು ಬೆನ್ನಟ್ಟಿಬಂದು ನಾನು ಅಳಿದಿಲ್ಲ' ಉಳಿದಿದ್ದೇನೆ—ಉಳಿಯುತ್ತೇನೆ " ಎಂದು ಮೂದಲಿಸಿ ಮೂರ್ತಿಮತ್ತಾಗಿ ಮುಂದೆಯೇ ನಿಂತಂತಾಯಿತು, ಮುಂಬಯಿಯಲ್ಲಿ ಶ್ರೀಧರ ಹೇಳಿದ ಒಂದು ಮಾತು ಮಾಧವನ ಹೃದಯವನ್ನು ಇರಿಯಿತು : "ನಿನ್ನ ಆಚಾರ, ನಿನ್ನ ವಿಚಾರ, ನಿನ್ನ ಭಾವನೆ, ಸಂಸ್ಕಾರ ಎಲ್ಲವೂ ಹಿಂದಿನಿಂದ ಬಂದುವು" ಎಂದಿದ್ದ. ತಿಳಿದಾಗಲಿ, ತಿಳಿಯದಾಗಲಿ ತಾನು ಸರೋಜಿನಿಯನ್ನು ಪ್ರೀತಿಸಿದ್ದು ತನ್ನ ತಂದೆಯ ಗತಕಾಲದ ಪುನರಾವೃತ್ತಿ ನಡೆದಂತಾಗಿರಲಿಲ್ಲವೆ? ಸರೋಜಿನಿಯನ್ನು ಉದ್ಧಾರಮಾಡಲೆಂದು ತಾನು ಆಕೆಯ ಸಮೀಪಕ್ಕೆ ಹೋಗಿದ್ದ. ಯಾರು ಬಲ್ಲರು ? ತನ್ನ ತಂದೆ ರಂಗಸಾನಿ ಕೂಡಿದ್ದು ಯಾವ ದೃಷ್ಟಿಯಿಂದ ?ಯಾರು ಹೇಳಬೇಕು ?

ಯಾವ ಬಣ್ಣದ ಮಾತಿನಿಂದ ಹೇಳಿದರೂ ತನ್ನ ತಂದೆಯಂತೆ ತಾನಾದರೂ ಒಬ್ಬ ವೇಶ್ಯೆಯಿಂದ ಆಕರ್ಷಿತನಾಗಿದ್ದನೆಂಬ ಅರಿವು ಮಾಧವನ ಹೃದಯವನ್ನು ಗಾಸಿಮಾಡಿತು. ರಕ್ತದ ಗುಣವೆ ? ಸಂಸ್ಕಾರದ ಬಲವೆ ? ಯಾರು ಹೇಳಬೇಕು ? ಕೊನೆಗೂ ಶ್ರೀಧರನ ಮಾತೇ ನಿಜ ಎಂದು ಒಪ್ಪುವಂತಾಯಿತು ! ಎಷ್ಟು ಬೇಡವೆಂದರೂ ತಂದೆಯ ಆಸ್ತಿ ಮುಂಜಾವಿನಲ್ಲಿ ತಾಯಿಗಾಗಿಯಾದರೂ ತನ್ನ ಪಾಲಿಗೆ ಬಂದಿತ್ತು. ರಕ್ತದ ಆಸ್ತಿಯನ್ನೆ ಅನಿವಾರ್ಯವಾಗಿ ಪಡೆದಾಗ ದುಡ್ಡಿನದೇನು ದೊಡ್ಡ ಮಾತು ? ಎಂದು ಸಮಾಧಾನ ತಂದುಕೊಳ್ಳಲೆತ್ನಿಸಿದ. ಆದರೆ ಬುದ್ಧಿ ಒಪ್ಪಿದರೂ ಎಂದ ಸಮರ್ಥನೆಯನ್ನು ಹೇಳಿದರೂ ಹೃದಯ ಒಪ್ಪಲಿಲ್ಲ. "ಈ ಪಾಪದ ಕಲಂಕ ಬೇಡ, ಬೇಡ !" ಎಂದು ಆರ್ತಸ್ವರದಿಂದ ಹೇಳಿಕೊಳ್ಳುತ್ತಿತ್ತು.

ನಾಲ್ಕಾರು ದಿವಸದಲ್ಲಿ ಬಂದು ಕಾಗದಪತ್ರಗಳನ್ನು ರಿಜಿಸ್ಟರ್ ಮಾಡಿಕೊಂಡು ಹೋಗಬೇಕೆಂದು ಹೇಳಿ ಸಾಯಂಕಾಲದ ರೈಲಿನಿಂದ ರಾಮರಾಯರು ಯಾವ ಆಗ್ರಹಕ್ಕೂ ಮಣಿಯದೆ ಊರಿಗೆ ಹೊರಟುಹೋದರು.

ಪಾಲುಗಾರಿಕೆಯ ಪ್ರಕರಣದಲ್ಲಿ ಇಷ್ಟರವರೆಗೆ ಮುಂದುವರಿದ ಭೀಮಣ್ಣ ಎಲ್ಲವನ್ನೂ ಒಮ್ಮೆ ಮುಗಿಯಿಸಬೇಕೆಂದು ನಾಲ್ಕಾರು ದಿವಸಗಳ ನಂತರ

ಮಾಧವನನ್ನು ಒತ್ತಾಯಪಡಿಸಿ ಧಾರವಾಡಕ್ಕೆ ಕರೆದುಕೊಂಡು ಹೊರಟ. ಬೇಡವಾದುದೆಲ್ಲವೂ ತನಗೆ ಬಂದಿತೆಂದು ಎಷ್ಟು ಪರಿಯಿಂದ ಯೋಚಿಸಿದರೂ ಭೀಮಣ್ಣ ಮತ್ತು ರಾಧಕ್ಕನ ಮಾತಿಗೆ ಮಾಧವ ಮಣಿಯಬೇಕಾಗಿತ್ತು. ಮನಸ್ಸು ಒಂದೇ ಸವನೆ ಸರೋಜಿನಿಯನ್ನು ನೆನೆಯುತ್ತಿತ್ತು : ತಾನೇನು ಮಾಡಿದಹಾಗಾಯಿತು? ಎಂದು. ಮಾಧವನ ವಿಮನಸ್ಕತೆಯನ್ನು ಗುರುತಿಸಿದ ಭೀಮಣ್ಣ ಎಷ್ಟೋ ಪರಿಯಿಂದ ಸಮಾಧಾನ ಹೇಳುತ್ತಿದ್ದ. ರೈಲಿನಲ್ಲಿ ಹೋಗುತ್ತಿದ್ದಾಗ ಮಾಧವ ಹೇಳಿದ :

"ಇಷ್ಟುವುಟ್ಟಿಗೆ ನಿನ್ನ ಮಾತು ಕೇಳಿದ್ದೇನೆ. ನನಗೆ ಎಷ್ಟು ಮನಸ್ಸಿರದಿದ್ದರೂ ನೀನು ಹೇಳಿದ ಹಾಗೆ ನಡೆದಿದ್ದೇನೆ. ನನ್ನ ಒಂದು ಮಾತನ್ನು ಮಾತ್ರ ನೀನು ನಡೆಸಿಕೊಡಬೇಕು, ಭೀಮಣ್ಣಾ...." ಎಂದು.

"ಅಂಥ ಯಾವ ಮಾತಪ್ಪಾ ಅದು ?"

"ಆ ಮಾತು ಹೇಳಲು ನನಗೆ ತುಂಬ ಸಂಕೋಚ. ನೀನೇನೆನ್ನುತ್ತಿಯೊ ಎಂದು."

"ಯಾವ ಮಾತು, ಅದನ್ನಾದರೂ ಹೇಳಬಾರದೆ ?"

"ಆ ವಿಠ್ಠಪ್ಪನ ತೋಟದ ವಿಚಾರ...."

"ತೋಟದ ವಿಚಾರ ಏನು ?"

"ಆ ತೋಟವನ್ನು ನಾವು ಬಿಟ್ಟುಕೊಡಬೇಕು !"

"ಯಾರಿಗೆ, ರಾಮರಾಯನಿಗೆಯೆ ?"

"ಆ ಮಾತಂತೂ ಮುಗಿದೇಹೋಗಿದೆಯಲ್ಲ. ರಾಮರಾಯನಿಗಲ್ಲ ನಾನು ಹೇಳುವುದು...."

"ಹಾಗಾದರೆ ಯಾರಿಗೆ ?"

"ರಂಗಸಾನಿಯ ಮಗಳಿಗೆ !"

"ನಿನಗೇನು ಹುಚ್ಚು, ಮಾಧವಾ ?"

"ನಾನು ನಿನಗೆ ಮೊದಲಿಗೇ ಹೇಳಿಕೊಂಡಿಲ್ಲವೆ, ಈ ಒಂದು ಮಾತು ನಡೆಸಿಕೊಡಬೇಕು ಎಂದು ?"

ಒಂದೆರಡು ನಿಮಿಷ ಯೋಚಿಸಿ ಭೀಮಣ್ಣನೆಂದ :

"ಆದರೆ ನನಗೇನೂ ಅರ್ಥವಾಗುವುದಿಲ್ಲಪ್ಪಾ. ಎಂಥ ದೊಡ್ಡ ತೋಟ ! ಈಗಿನ ದಿನಮಾನಕ್ಕೆ ಎಷ್ಟು ಬೇಕಾದಷ್ಟು ಉತ್ಪನ್ನ...."

"ಅದನ್ನು ಒಪ್ಪುತ್ತೇನೆ, ಭೀಮಣ್ಣಾ. ಹೇಗಾದರೂ ಅದು ಈಗ ನಮ್ಮ

ಕೈಯಲ್ಲಿಲ್ಲ."

"ನಮ್ಮ ಕಡೆಗಿಲ್ಲ ಎಂದು ಕೊನೆಯವರೆಗೂ ಬಿಟ್ಟುಬಿಡುವುದೆ ?"

"ಕೊನೆಯವರೆಗಲ್ಲ. ಆ ಮಗಳ ಜೀವಮಾನದ ಮಟ್ಟಿಗೆ !"

"ಎಷ್ಟಾದರೂ ನಿಮ್ಮಪ್ಪನ ಮಗ ನೀನು !" ಎಂದ ಭೀಮಣ್ಣ ಮಾಧವನ ಮಾತಿಗೆ ಒಪ್ಪಲಾಗದೆ. ಮಾಧವ ಸುಮ್ಮನಾದ. ಭೀಮಣ್ಣನ ಆ ಒಂದು ಮಾತಿನಿಂದ ಮೋರೆಯ ಮೇಲೆ ಹೊಡೆದಂತಾಗಿತ್ತು. ಕಣ್ಣಲ್ಲಿ ನೀರೂರಿತು. ಕಂಠ ತುಂಬಿ ಬಂದಿತು. ಗದ್ಗದಿತನಾಗಿ ಹೇಳಿದ :

"ಕೆಟ್ಟ ಮಾತನಾಡಿದೆ ಭೀಮಣ್ಣಾ, ಎಂಥ ಕೆಟ್ಟ ಮಾತನಾಡಿದೆ !"

"ನಿನಗೆ ಕೆಟ್ಟ ಮಾತನಾಡಬೇಕು ಎಂದು ಆಡಲಿಲ್ಲ, ಮಾಧೂ....ಆದರೆ ಸುಮ್ಮಸುಮ್ಮನೆ ಬರಬೇಕಾದ ಇಷ್ಟು ಆಸ್ತಿಯನ್ನು ಕಳೆದುಕೊಳ್ಳುವುದೆಂದರೆ —ನನಗೆ ತಡೆಯಲಾಗದ್ದಕ್ಕೆ ಹಾಗೆಂದೆ...."

"ಅಷ್ಟು ಮಹತ್ವವೆ ದುಡ್ಡಿಗೆ ?"

"ಅದು ನಿನಗೆ ಈಗಲೇ ತಿಳಿಯುವುದಿಲ್ಲ. ಇನ್ನು ನಾಲ್ಕು ಮಳೆಗಾಲ ಕಳೆಯಬೇಕು."

"ಕೊನೆಯವರೆಗೂ ತಿಳಿಯದಿದ್ದರೂ ಸರಿ. ಆ ಗತಿಗೇಡಿಯಾದ ಹುಡುಗಿಗೆ ಆ ತೋಟ ಒಂದು ಆಧಾರವಾದರೆ ಪಾಪದ ಆಸ್ತಿಯಿಂದ ಒಂದು ಪುಣ್ಯದ ಕೆಲಸ ಮಾಡಿದಂತಾದೀತು !"

"ಪ್ರಪಂಚದ ದುಃಖಕ್ಕೆ ನೀನು ನಿವಾರಣೆ ಮಾಡಬಯಸುತ್ತಿದ್ದೀಯ ! ಅವರವರ ಪಾಡು ಅವರವರಿಗೆ !"

"ಉಳಿದವರ ಮಾತು ನಾನು ಹೇಳುತ್ತಿಲ್ಲ. ಆದರೆ ಈ ಒಂದು ವಿಷಯ ನಮ್ಮ ಹೊಣೆಯಾಗಿದೆ. ಅದನ್ನು ನಾವು ನಿರ್ವಹಿಸಲೇಬೇಕು."

"ನಮ್ಮ ಹೊಣೆಯೆ ?"

"ಅಲ್ಲವೆ ಮತ್ತೆ ? ನಮ್ಮದೇ ಹೊಣೆ. ನನ್ನ ತಂದೆಯ ಪಾಪಕ್ಕಾಗಿ ಆಕೆ ನನಗೆ ಇಂದು ತಂಗಿ !" ಭೀಮಣ್ಣನಿಗೆ ಮಾತಿಲ್ಲದಾಯಿತು. ಅಂಥ ಒಳ್ಳೆಯ ಆಸ್ತಿಯನ್ನು ಬಿಟ್ಟುಕೊಡಲು ಎಷ್ಟು ಒಪ್ಪಲಾಗದಿದ್ದರೂ ಮಾಧವನ ಮಾತೂ ನಿಜ ಎಂದೆನಿಸಿತು. ಯೋಚಿಸಿ ಯೋಚಿಸಿ, ಕೊನೆಗೆ ಹೇಳಿದ :

"ಒಂದು ದೃಷ್ಟಿಯಿಂದ ನಿನ್ನ ಮಾತು ಸರಿ. ನೋಡು, ನಿನಗೆ ಸರಿಕಂಡ ಹಾಗೆ ಮಾಡು...." ಈ ಮಾತನ್ನೆತ್ತಿದಾಗಿನಿಂದ ನಾಲ್ಕಾರು ದಿನದಿಂದಲೂ ಕೇಳಬೇಕೆಂದುಕೊಂಡಿದ್ದ ಪ್ರಶ್ನೆಯೊಂದು ಭೀಮಣ್ಣನ ಮನಸ್ಸಿನೆದುರು

ನಿಂತಿತು. ಕೇಳಲು ಇದೇ ಸಮಯವೆಂದು ಅಂದ :

"ನೀನು ಬಂದಾಗಿನಿಂದಲೂ ಒಂದು ಮಾತನ್ನು ಕೇಳಬೇಕೆಂದಿದ್ದೇನೆ. ಇದ್ದುದನ್ನು ನಿಜವಾಗಿ ನನ್ನ ಮುಂದೆ ಹೇಳಬೇಕು ?"

"ನಿನ್ನ ಮುಂದೆ ನನಗೆ ಯಾವ ಮುಚ್ಚುಮರೆ ಇಲ್ಲ, ಭೀಮಣ್ಣ...."

"ನೀನು ಕಕ್ಕನ ಮನೆಯಿಂದ ಬರುವಾಗ ಅವರು ನಿನಗೆ ಸಿಟ್ಟು ಮಾಡಿದ ರಲ್ಲವೇ ? ಏನದು ವಿಷಯ ?"

"ಕಕ್ಕ ಹೇಳಿದ್ದು ನಿಜ. ಆದರೆ ಆತ ಹೇಳಿದ ಅರ್ಥದಲ್ಲಿ ಮಾತ್ರ ಅಲ್ಲ !"

"ಇಲ್ಲಿ ಬಂದಾಗ ಒಂದು ಪತ್ರವನ್ನು ನನ್ನ ಮೋರೆಗೆ ಹಿಡಿದ ರಾಮರಾಯ."

"ಎಂಥ ಪತ್ರ ?"

"ಯಾವುದೊ ಒಂದು ಹುಡುಗಿಯ ಪತ್ರ. ನಿನ್ನ ಪರೀಕ್ಷೆಯ ವೇಳೆಗೆ ನಿನ್ನನ್ನು ಕಾಣಲೇಬೇಕಾಗಿದೆ. ಕೊನೆಯ ನಿರ್ಣಯ ಮಾಡಬೇಕಾಗಿದೆ ಎಂದು ಮುಂತಾಗಿ ಬರೆದಿತ್ತು."

"ಸರೋಜಿನಿ ಎಂದು ರುಜು ಇತ್ತೇ ?"

"ಹೌದು...."

"ಹಾಗಾದರೆ ಸರಿಯೊಯಿತಲ್ಲ!"

"ಯಾರು ಈ ಸರೋಜಿನಿ ಎಂದರೆ ?"

"ರಂಗಸಾನಿಯ ಮಗಳು !"

"ಆಕೆಯ ಹೆಸರು ಸರೋಜಿನಿಯೆ ?"

"ಹೌದು...."

"ಹಾಗಾದರೆ ಆಕೆಯ ಪರಿಚಯ ನಿನಗೆ ಮೊದಲಿನಿಂದ ಇದೆಯೆ ?"

"ಹೌದು. ಆದರೆ ಕಕ್ಕ ಹೇಳಿದ ಅರ್ಥದಲ್ಲಿ ಅಲ್ಲ ಎಂದು ಹೇಳಿದೆನಲ್ಲ...."

ಭೀಮಣ್ಣನಿಗೆ ದಿಗಿಲಾಯಿತು. ಆಶ್ಚರ್ಯವೆನಿಸಿತು. ಮಾಧವನ ಬಗೆ ಯಲ್ಲಿ ಕೊಂಚ ಸಿಟ್ಟೂ ಬಂದಿತು. ಅದನ್ನು ತಿಳಿದೆಯೆ ಮಾಧವ ಮುಂದು ವರಿದ :

"ಆ ದಿನ ನಿನಗೆ ಕಾಲೇಜಿನಲ್ಲಿಯ ಕಾರ್ಯಕ್ರಮ ನೋಡಲು ಬಾ ಎಂದು ಹೇಳಿದ್ದೆ. ಅಂದಿನ ನೃತ್ಯ ಆಕೆಯದೇ ! ಏನೋ ಒಂದು ರೀತಿಯ ಪರಿಚಯ ಬೆಳೆಯಿತು. ಈ ಯಾವ ಸಂಬಂಧಗಳೂ ನನಗೆ ಗೊತ್ತಿರಲಿಲ್ಲ—ಮೊನ್ನೆಯ ವರೆಗೆ ! ತನ್ನ ತಾಯಿಯ ಹೇಯವೃತ್ತಿ ಆಕೆಗೆ ಬೇಡವಾಗಿದೆ. ಆ ಮಾತಿ ಗಾಗಿ ನಾನು ಸಾಧ್ಯವಾದ ಸಹಾಯ ಮಾಡುತ್ತೇನೆ ಎಂದಿದ್ದೇನೆ. ನನ್ನಲ್ಲಿ

ಆಕೆಗೆ ತುಂಬಾ ವಿಶ್ವಾಸ....ಆ ವಿಶ್ವಾಸಕ್ಕಾಗಿಯೆ ನನಗೆ ಹಾಗೆ ಕಾಗದ ಬರೆದಿದ್ದಳು. ಆಕೆಗೆ ಬಹಳ ಕಷ್ಟವಾಗಿತ್ತು ಆಗ...."

ಭಿಮಣ್ಣನ ಸಿಟ್ಟೋ, ಇಳಿದು, ಕುತೂಹಲ ಬೆಳೆಯುತೊಡಗಿತ್ತು.

"ಆ ಪತ್ರ ರಾಮರಾಯನ ಕೈಗೆ ಹೇಗೆ ಸಿಕ್ಕಿತು ?" ಎಂದು ಕೇಳಿದ.

ನಾನು ಆಕೆಗೆ ಭೆಟ್ಟಿಯಾದಾಗ ಅಲ್ಲಿಯ ವಿಳಾಸ ಕೊಟ್ಟಿದ್ದೆ. ಆದರೆ ಪರೀಕ್ಷೆಯ ಮುಂದೆ ನಾನೇ ಅನಿರೀಕ್ಷಿತವಾಗಿ ದೇವನೂರಿಗೆ ಬಂದುಬಿಟ್ಟೆ."

ಮುಂದಿನ ಎಲ್ಲ ಕತೆಯನ್ನೂ ಸಾದ್ಯಂತವಾಗಿ ಮಾಧವ ವಿವರಿಸಿದ. ಮಾಧವ–ಸರೋಜಿನಿಯರಿಬ್ಬರಿಗಾಗಿಯೂ ಭೀಮಣ್ಣ ಕನಿಕರಪಟ್ಟ. "ತೋಟ ವನ್ನು ಅಗತ್ಯವಾಗಿ ಬಿಟ್ಟುಕೊಡು—" ಎಂದು ಹೇಳಿದ ! ರೈಲು ನಡೆದೇ ಇತ್ತು—ಜನನ—ಮರಣಗಳ ಪರಿವೆಯಿಲ್ಲದೆ ಅವ್ಯಾಹತವಾಗಿ ನಡೆಯುವ ಪ್ರಪಂಚದ ಜೀವನದಂತೆ !

## 18

ಧಾರವಾಡದಲ್ಲಿಯ ಕಾಗದಪತ್ರಗಳ ಕಾರ್ಯಕ್ರಮವನ್ನು ಮುಗಿಸಿದನಂತರ ಮಾಧವ ತಾನು ಗದುಗಿನವರೆಗೆ ಹೋಗಿಬರುತ್ತೇನೆಂದ. ಭೀಮಣ್ಣ ಬೇಡ ವೆನ್ನಲಿಲ್ಲ. .ನಾಲ್ಕಾರು ದಿವಸದ ಮಾತುಕತೆಗಳಲ್ಲಿ, ಈ ವಿಷಯದಲ್ಲಿ ಮಾಧವನ ತಿಳಿಯಾದ ಅಂತಃಕರಣವನ್ನು ಗುರುತಿಸಿದ ಭೀಮಣ್ಣ ತಾನಾಗಿಯೇ ಆ ಸೂಚನೆ ಮಾಡಬೇಕೆಂದಿದ್ದ. ಸರೋಜಿನಿಯ ವಿಳಾಸವನ್ನು ಗೊತ್ತುಹಿಡಿಯು ವುದೊಂದು ಕಷ್ಟವೇ ಆಯಿತು. ಕೊನೆಗೆ ಕೋಮಟಿ ಕೃಷ್ಣಪ್ಪನ ಮುಖಾಂತರ ಮನೆ ಸಿಕ್ಕಬಹುದೆಂದು, ಸಾಯಂಕಾಲವೇ ತಿರುಗಿ ಬರುತ್ತೇನೆಂದು ಭೀಮಣ್ಣ ನಿಗೆ ಕಾಯಹೇಳಿ, ಮಾಧವ ಹೊರಟ, ತೋಟದ ವಿಷಯದಲ್ಲಿ ಭೀಮಣ್ಣನ ಉದಾರವಾದ ಧೋರಣೆಯಿಂದ ಸಮಾಧಾನ ಹೊಂದಿದ ಮಾಧವನ ಮನಸ್ಸು ಒಂದಿಲ್ಲೊಂದು ರೀತಿಯಲ್ಲಾದರೂ ತಾನು ಸರೋಜಿನಿಗೆ ಉಪಯೋಗ ವಾದಂತಾಯಿತು ಎಂದುಕೊಳ್ಳುತ್ತಿತ್ತು. ಆದರೆ ಮುಂಬಯಿಯಲ್ಲಿ ಆಕೆಯನ್ನು ತಾನು ಕಾಣಲಾಗದ್ದಕ್ಕಾಗಿ ಅಷ್ಟರಲ್ಲಿ ಯಾವ ಸ್ಥಿತ್ಯಂತರಗಳಾಗಿದ್ದುವೊ ಯಾರು ಬಲ್ಲರು ಎಂದು ಕಳವಳಪಡುತ್ತಲೂ ಇದ್ದ. ಇನ್ನೇನು ಎರಡು ಮೂರು ಗಂಟೆಗಳಲ್ಲಿಯೇ ಸರೋಜಿನಿಯನ್ನು ಕಾಣುವೆನೆಂದು, ಕುತೂಹಲ ವನ್ನು ಹಿಡಿತದಲ್ಲಿಟ್ಟುಕೊಳ್ಳುತ್ತಿದ್ದರೂ ಆಕೆಯ ಬದುಕಿನ ಕಷ್ಟವನ್ನು ನೆನೆದಾಗ "ಎಲ್ಲಿಂದ ಎಲ್ಲಿಗೆ ಬಂದಹಾಗಾಯಿತು ?" ಎಂದು ಬದುಕಿನ ತೊಡಕುಗಳ ಬಗೆ

ಯಲ್ಲಿ ಬೆರಗುಪಡುವಂತಾಗುತ್ತಿದ್ದ. ಆದರೆ ಯೋಚನೆಯನ್ನೂ ಮೀರಿಸಿ ಸರೋಜಿನಿಯನ್ನು ಹೇಗೆ ಕಾಣುವುದು, ಆಕೆ ಹೇಗಿದ್ದಾಳೆ, ಆಕೆ ಏನೆನ್ನ ಬಹುದೊ ಎಂಬ ಹಲವಾರು ಯೋಚನೆಗಳು ದಿಗಲುಗೊಳಿಸುತ್ತಿದ್ದುವು. ಸರೋಜಿನಿಯ ಬಾಡಿದ ಮುಖ ಹೊರತು ಯಾವ ಚಿತ್ರವೂ ಆತನ ಕಣ್ಣೆದುರು ನಿಲ್ಲುತ್ತಿರಲಿಲ್ಲ. ತಾನು ಎದುರಿಸಬೇಕಾದ ಸನ್ನಿವೇಶ ಅಷ್ಟೇನೂ ಸುಲಭದ್ದಲ್ಲ ವೆಂದು ಹೆದರಿಗೆ ಆಗಾಗ ತಲೆದೋರುತ್ತಿತ್ತು. ಸರೋಜಿನಿಯ ತಾಯಿ ಆಗಲೇ ತೀರಿಹೋಗಿ ಸರೋಜಿನಿಯನ್ನು ತಾನು ಕಾಣದೆಹೋದರೆ ? ಅಂತೂ ಯಾವ ಪ್ರಶ್ನೆಗೂ ನಿಶ್ಚಿತವಾದ ಉತ್ತರವನ್ನು ತಿಳಿಯಲಾಗದೆ ಗದುಗಿನ ನಿಲ್ದಾಣದಲ್ಲಿ ಇಳಿದ.

ದೊಡ್ಡ ಬಾಗಿಲಿನ ಒಂದು ಹಳೆಯ ಮನೆ. ಅದನ್ನು ನೋಡಿದರೆ ಮಾಧವ ನಂತೆ ಯಾರಿಗೂ ಅನಿಸಬಹುದಿತ್ತು: "ಯಾವ ಕಾಲದ ಮನೆಯೊ ! ಯಾರು ಕಟ್ಟಿಸಿದರೊ!" ಎಂದು. ಆ ಮನೆಯ ಮೆಟ್ಟಲುಗಳನ್ನು ಏರುತ್ತಿರು ವಾಗ ಮಾಧವನಿಗೆ ತಂದೆಯ ನೆನಪಾಯಿತು. ಮಧ್ಯಾಹ್ನದ ಎರಡು ಗಂಟೆಯ ಬಿಸಿಲು ಚುರುಕಾಗಿ ಉರಿಯುತ್ತಿತ್ತು. ಸುತ್ತಲೆಲ್ಲವೂ ನಿಶ್ಯಬ್ದತೆ ತಾನೇ ತಾನಾಗಿ ನಿಂತಿತ್ತು. ಮಾಧವನ ಎದೆ ಬಡಿದುಕೊಳ್ಳುತ್ತಿತ್ತು. ಕಳಚಿದ ಬೇಡಿಯಂತೆ ಬಾಗಿಲಿಗೆ ತೂಗುಬಿದ್ದ ಚಿಲಕವನ್ನು ಎತ್ತಿಕೊಂಡು ಗಟ್ಟಿಯಾಗಿ ಎರಡು ಮೂರು ಬಾರಿ ಬಾಗಿಲದ ಮೇಲೆ ಸದ್ದುಮಾಡಿದ. ಎದೆ ಬಡಿದು ಕೊಳ್ಳುತ್ತಲೇ ಇತ್ತು. ಒಂದು ನಿಯತವಾದ ಕ್ರಮದಲ್ಲಿ ವಿಚಾರ ಮಾಡುವ ಶಕ್ತಿಯೇ ಮಾಧವನ ಮನಸ್ಸಿಗೆ ಆಗ ಉಳಿದಂತಿರಲಿಲ್ಲ. ಗಡಚಿಕ್ಕಿದ ಕಿವಿಗಳಲ್ಲಿ ಶಬ್ದ ಅರ್ಥವಾಗದೆ ಮುಮುಕುವಂತೆ ಬದಿರವಾದ ಹೃದಯದಲ್ಲಿ ಭಾವನೆಗಳು ದುಮುಕುತ್ತಿದ್ದವು....ಅಟ್ಟದ ಮೇಲಿನಿಂದ ಯಾರೋ ಇಳಿದು ಬರುತ್ತಿರು ವಂತೆ ಸದ್ದು ಕೇಳಿಬರುತ್ತಿತ್ತು. ಬಾಗಿಲು ತೆರೆಯಿತು. ತೆರೆದ ಬಾಗಿಲಿನಾಚೆ ನಿಂತ ಸರೋಜಿನಿ ! ನಿಂತಲ್ಲಿಯೇ ನಿಂತಳು. ಆಕೆ ತಾನು ಕಾಣುತ್ತಿರುವು ದೇನು ಎಂದು ಅಚ್ಚರಿಗೊಂಡು ಗೊಂಬೆಯಂತೆ ನಿಂತಿದ್ದಳು. ಮಾಧವ ಹೊಸ್ತಿಲ ದಾಟ ಒಳಗಡೆ ಕಾಲಿಳೆಯುತ್ತ ಹೋದ.

"ಮಾಧವಾ....!" ಎಂದು ಸರೋಜಿನಿ ತೆಕ್ಕೆಬಿದ್ದಳು.

"ಸರೋಜಿನಿ....ಸರೋಜಾ....ಸರೋಜಾ...." ಎಂದು ಮಾಧವ ಸಮಾ ಧಾನಪಡಿಸಲೆತ್ನಿಸಿದ.

ಬಾಯಿಗೆ ಮಾತೇ ಬರಲಿಲ್ಲ. ಸರೋಜಿನಿ ಧಾರಾಕಾರವಾಗಿ ಕಣ್ಣೀರು

ಸುರಿಸುತ್ತಿದ್ದಳು. "ಅಯ್ಯೋ" ಎಂದು ಗೋಳಿಡುತ್ತಿದ್ದಳು.

"ಅಯ್ಯೋ....ಕಡೆಗೂ ಹಾಳಾದೆ ಮಾಧವಾ,ನಾನು....ಅಯ್ಯೋ" ಎಂದು.

"ಸುಮ್ಮನಾಗು ಸರೋಜಾ, ಸುಮ್ಮನಾಗು ಮೊದಲು, ನೋಡುವ...." ಎಂದು ಬೆನ್ನಮೇಲೆ ಕೈಯಾಡಿಸಿ ನಿಧಾನವಾಗಿ ದೂರ ಸರಿಸಿದ. ಅಲ್ಲಿಯೇ ಗೋಡೆಯ ಹತ್ತಿರ ಸರೋಜಿನಿ ನೆಲಕ್ಕೆ ಕುಸಿದಳು ಎದುರಿನಲ್ಲಿಯೇ ಮಾಧವ ಹತ್ತಿರದಲ್ಲಿ ಕುಳಿತ. ಇಬ್ಬರಿಗೂ ಮಾತಿಲ್ಲದಾಗಿತ್ತು. ಸೆರಗಿನಿಂದ ಮೋರೆ ಮುಚ್ಚಿಕೊಂಡು ಸರೋಜಿನಿ ಇನ್ನೂ ಬಿಕ್ಕುತ್ತಲೇ ಇದ್ದಳು....ಮಾಧವ ಬೆನ್ನಮೇಲೆ ಕೈಯಾಡಿಸುತ್ತ ಸಮಾಧಾನ ಹೇಳುತ್ತಲೆ ಇದ್ದ. ದುಃಖದ ಒತ್ತಡ ಕಡಿಮೆಯಾಗುತ್ತಿದ್ದ ಹಾಗೆ ಸರೋಜಿನಿ ಬಿಕ್ಕಿದಳು :

"ಕೊನೆಗೂ ಹಾಳಾದೆ, ಮಾಧವಾ! ನೀನೂ ಬರಲಿಲ್ಲ ! ನನ್ನನ್ನು ಹಾಳು ಮಾಡಿದ ಆ ರಾಕ್ಷಸ!....ಅಯ್ಯೋ...." ಎಂದು ಗೋಳಾಡಿದಳು.

"ನಿನ್ನ ಕಾಗದ ಬರಲಿಲ್ಲ, ಸರೋಜ....ನಾನೂ ಸಹ ದಿನಬೆಳಗೂ ಗೋಳಾಡಿದೆ....ನಿರುಪಾಯವಾಗಿ...." ಎಂದು ಸುಮ್ಮನಾದ. ಐದು ನಿಮಿಷ ಇಬ್ಬರೂ ಸುಮ್ಮನಾದರು. ಕೊನೆಗೆ,

"ಆಯಿತು. ನನ್ನ ದೈವ, ನೀನೇನು ಮಾಡಬಹುದು ?" ಎಂದಳು ಸರೋಜಿನಿ.

"ಆದದ್ದನ್ನು ಮರೆತುಬಿಡು. ಎಂದಿಗೂ ನಾನಿದ್ದೇನೆ....ನೀನು ನಿರಾಶೆ ಪಡಬೇಡ...."

"ನನಗೆ ಆಸೆಯಿಲ್ಲ. ನನಗೆ ಗತಿಯಿಲ್ಲ. ಅಯ್ಯೋ....ನನಗೆ ಯಾವ ಗತಿಯೂ ಇಲ್ಲ" ಎಂದು ಸರೋಜಿನಿ ಮತ್ತೆ ಮತ್ತೆ ಅಳಲಾರಂಭಿಸಿದಳು. ಸಮಾಧಾನದ ದನಿಯಲ್ಲಿ ಮಾಧವ ಹೇಳಿದ :

"ಎಲ್ಲವೂ ಇದೆ....ನೀನು ನಿರಾಶಳಾಗಬೇಡ....ಇದು ನೋಡು....ನಾನಿದ್ದೇನೆ....ನೀನು ಎಷ್ಟು ಮಾತ್ರವೂ ಧೈರ್ಯಬಿಡಬೇಡ "

"ಏನೆಂದು ಧೈರ್ಯ ತಂದುಕೊಳಲಿ, ಮಾಧವಾ ? ಏನೆಂದು ಧೈರ್ಯ ತಂದುಕೊಳ್ಳಲಿ....? ನನಗೆ ತಿಳಿದ ವಿಷಯ ನಿನಗೆ ತಿಳಿದರೆ .. ಅಯ್ಯೋ.... ಏನೆಂದು ಧೈರ್ಯ ತಂದುಕೊಳ್ಳಲಿ ನಾನು....?"

"ನನಗೆಲ್ಲವೂ ತಿಳಿದಿದೆ, ನೀನು ಯಾವುದನ್ನೂ ಹೇಳಬೇಡ....ನನಗೆಲ್ಲವೂ ತಿಳಿದಿದೆ! ಹಿಂದಿನ ಮಾಧವನಲ್ಲನಾನು! ಈಗ ನಾನು ಬೇರೆ, ನಾನು ಬೇರೆ!"

ಮಧ್ಯಾಹ್ನದಲ್ಲಿ ನಿದ್ರೆಯೊದ ರಂಗಸಾನಿಗೆ ಎಚ್ಚರವಾಗಿರಬೇಕು. ಕೆಳಗಡೆ

ಯಲ್ಲಿಯ ಮಾತೂ ಆಕೆಗೆ ಕೇಳಿಸಿರಬೇಕು. ಸರೋಜಾ ಸರೋಜಾ...." ಎಂದು ಕರೆದಳು. ದನಿ ತೀರ ಕ್ಷೀಣವಾಗಿತ್ತು.

"ನಿನ್ನ ತಾಯಿ ಹೇಗಿದ್ದಾಳೆ, ಸರೋಜಾ....?" ಎಂದ ಮಾಧವ.

"ಇದ್ದಾಳೆ...."

"ನನಗೆ ಆಕೆಯನ್ನು ಕಾಣಬೇಕಾಗಿದೆ...."

"ಮೇಲೆ ಬರುತ್ತೀರಾ ?" ಎಂದು ಕಣ್ಣೊರಸಿಕೊಂಡಳು.

ಸರೋಜಿನಿಯನ್ನು ಹಿಂಬಾಲಿಸಿ ಕಾಲೆಳೆಯುತ್ತ ಮೇಲಕ್ಕೆ ಹೋದ. ದೊಡ್ಡದಾದ ಪಲ್ಲಂಗದ ಮೇಲೆ ಎಲ್ಲಿಯೋ ಒಂದು ಮೂಲೆಯಲ್ಲಿ ರಂಗಸಾನಿ ಬಿದ್ದುಕೊಂಡಿದ್ದಳು. ಸೋತುಹೋದ ದೇಹ, ಅಸಹಾಯವಾದ ಆ ದೃಷ್ಟಿಯನ್ನು ನೋಡಿ ಮಾಧವನ ಎದೆಗೆ ಬರೆ ಕೊಟ್ಟಂತಾಯಿತು. ವೇಶ್ಯಾವೃತ್ತಿಯ ಶಾಪ ಮೂರ್ತಿಮತ್ತಾಗಿದ್ದಂತೆ ರಂಗಸಾನಿ ಆಗ ಸಾವನ್ನಿದಿರುನೋಡುತ್ತ ಮಲಗಿಕೊಂಡಂತಿದ್ದಳು. ಕ್ಷೀಣವಾಗಿ ದನಿ ಹೊರಟಿತು :

"ಯಾರು ಬಂದಿದ್ದಾರೆಯೆ, ಸರೋಜ....?" ಎಂದು.

ಮಾಧವ ನಿಂತಲ್ಲಿಯೇ ನಿಂತ. ಸರೋಜಿನಿಯ ಬಾಯಿಗೆ ಮಾತು ಬರಲಿಲ್ಲ. ದನಿ ಮತ್ತೆ ಕೇಳಿಸಿತು. "ಯಾರೇ ಸರೋಜಾ, ಬಂದವರು ? ಎಂದು.

"ನಮ್ಮ ಕಾಲೇಜಿನಲ್ಲಿಯವರೊಬ್ಬರು...." ಎಂದು ಸರೋಜಿನಿ ತಡವರಿಸಿದಳು.

"ನಿನ್ನ ಕಾಲೇಜಿನಲ್ಲಿಯವರೆ....?" ಎಂದು ರಂಗಸಾನಿಯ ದನಿ.

ಮಾಧವ ಎರಡು ಹೆಜ್ಜೆ ಮುಂದಕ್ಕೆ ಸರಿದು ಹೇಳಿದ, ಬಿಗಿದ ಕಂಠದಿಂದ :

"ಕಾಲೇಜಿನವನಲ್ಲ. ನಿಮ್ಮ ಸರೋಜಿನಿಯ ಅಣ್ಣ !" ಎಂದು.

ಎವೆಯಿಕ್ಕದೆ ಸರೋಜಿನಿ ಮಾಧವನನ್ನು ನೋಡುತ್ತಿದ್ದಳು—ನಿರ್ವಿಕಾರಳಾಗಿ ರಂಗಸಾನಿಯೂ ಮಾಧವನನ್ನೇ ಸೂಕ್ಷ್ಮವಾಗಿ ದಿಟ್ಟಿಸುತ್ತಿದ್ದಳು. ಆಕೆಯ ದೃಷ್ಟಿ ತನ್ನನ್ನು ಇರಿಯುತ್ತಿದ್ದಂತೆ ಮಾಧವನಿಗೆ ಭಾಸವಾಯಿತು. ಕೊನೆಗೆ ಗುರುತು ಸಿಕ್ಕಿತೇನೊ ! ಆದರೆ ಆಕೆಯ ಮಾತು ಖಡ್ಗದಂತೆ ಇರಿಯಿತು ಆತನನ್ನು !

"ಕೃಷ್ಣರಾಯರ ಮಕ್ಕಳೇ ನೀವು ?" ಎಂದುಸುರಿದಳು.

ಮಾಧವನ ಮನಃಸ್ಥಿತಿ ವಿಚಿತ್ರವಾಯಿತು. ಕೊನೆಗೆ,

"ಹುಂ...." ಎಂದು ನಿರುಪಾಯವಾಗಿ. ಸರೋಜಿನಿ ಮಾತ್ರ ಎಲ್ಲವನ್ನೂ ಕನಸೆಂಬಂತೆ ಕಾಣುತ್ತಿದ್ದಳು.

ಅಂಥ ಕ್ಷೀಣ ದೇಹದಲ್ಲಿಯೂ ಭಾವನೆಯ ಸಂಚಾರವಾಯಿತು. ಆ ಭಾವನೆಯಿಂದಲೇ ಆಕೆಯ ಮುಖ ಕಂಗೆಟ್ಟಿರಬೇಕು. ಬಾಯಿಗೆ ಮಾತು ಬಾರದಾಯಿತು.

"ಗತಿಗೇಡಿಗಳಿದ್ದೇವಪ್ಪಾ, ನಾವಿಬ್ಬರೂ ಗತಿಗೇಡಿಗಳಾಗಿದ್ದೇವೆ....ನಾವು" ಎಂದು ದನಿ ಎಳೆದಳು.

ಏನು ಮಾತನಾಡಬೇಕೆನ್ನುವುದು ತಿಳಿಯದೆ ಮಾಧವ ಸುಮ್ಮನಾಗಿಯೇ ಇದ್ದ.

"ಇಂಥ ಸ್ಥಿತಿ ಯಾರಿಗೂ ಬರಬಾರದಪ್ಪಾ...."

"ದೇವರಂಥ ಮನುಷ್ಯ ! ನಮ್ಮ ದುರ್ದೈವಕ್ಕೆ ಹೋದ !" ಎಂದು ಬಿಕ್ಕಿದಳು.

ರಂಗಸಾನಿಯ ಮನಸ್ಸು ಹತ್ತುಹನ್ನೆರಡು ವರ್ಷಗಳಾಚೆ ಜಿಗಿದಿತ್ತು. ಕೊನೆಗೆ ಸಮಾಧಾನ ತಂದುಕೊಂಡು ಮಾಧವನ ಬಗೆಯಲ್ಲಿ ಕುಶಲ ಪ್ರಶ್ನೆ ಗಳನ್ನು ಕೇಳಿದಳು. ಮಾಧವನ ಮಾತಿನ ರೀತಿಯಲ್ಲಿ ಆಕೆಗೆ ಸಹಾನುಭೂತಿ ಕಂಡಿರಬೇಕೆಂದೇ ಹೇಳಿದಳು :

"ಏನೋ ಇಷ್ಟು ವರ್ಷದ ಋಣಾನುಬಂಧ. ಹೋದವನ ಹೆಸರಿನಿಂದ ಮಧ್ಯಾಹ್ನಕ್ಕೊಂದು ಕೂಳು ಕಾಣುತ್ತ ಇದ್ದೆವು. ಅದನ್ನೇ ನಡೆಸಿಕೊಟ್ಟರೆ ಗತಿಯಿಲ್ಲದವರಿಗೆ ಒಂದು ಹಾದಿಯಾದೀತು ಎಂದು ನಿಮ್ಮ ಕಕ್ಕನಿಗೆ ಹೇಳಿ ಕಳಿಸಿದೆ...." ಆದರೆ ಆತ ಯಾತಕ್ಕೆ ಹಚ್ಚಿಕೊಂಡಾನು ? ಸಾಧ್ಯವಿಲ್ಲ ಎಂದ ನಂತೆ...."

"ಆ ಮಾತಿಗಾಗಿಯೇ ನಾನು ಇಲ್ಲಿಯವರೆಗೆ ಬಂದದ್ದು !"

"ಏನೆಂದು ಹೇಳಿದ ನಿಮ್ಮ ಕಕ್ಕ...." ಎಂದಳು ರಂಗಸಾನಿ ಕುತೂಹಲ ದಿಂದ, ಆಸೆಯಿಂದ.

"ಆತ ಏನೆನ್ನುವ ಹಾಗೂ ಇಲ್ಲ. ಈಗ ತನ್ನ ಪಾಲು ಬೇರೆ ಮಾಡಿ ಕೊಂಡಿದ್ದಾನೆ."

"ನಮ್ಮ ಸ್ಥಿತಿಯಂತೂ ಹೀಗಾಗಿದೆ. ನಾನು ಒಂದು ಬಗೆದರೆ ಆದದ್ದು ಇನ್ನೊಂದಾಗಿ ಈಕೆಯನ್ನು ಹಾಳುಮಾಡಿದ ಹಾಗಾಗಿದೆ. ನಂಬಿದವರೇ ಕೊರಳು ಕೊಯ್ದರು ! ನಮ್ಮನ್ನು ಬದುಕಿಸುವುದು ನಿಮ್ಮ ಕೈಯಲ್ಲಿದೆ—" ಎಂದು ಅಸಹಾಯಳಾಗಿ ಬೇಡಿದಳು.

"ನಾನೆಲ್ಲವನ್ನೂ ಯೋಚಿಸಿದ್ದೇನೆ. ನಿಮ್ಮ ಹೆಸರಿಗಿದ್ದ ತೋಟವನ್ನು

ಸರೋಜಿನಿಯ ಹೆಸರಿಗೆ ಮಾಡಿಕೊಡುತ್ತೇನೆ! ” ಎಂದ ಮಾಧವ.

“ಪುಣ್ಯವಂತನಾಗಪ್ಪ ! ಭಾಗ್ಯವಂತನಾಗು !” ಎಂದು ಮುದುಕಿಯ ಕಂಠ ಬಿಗಿಯಿತು, ಕಣ್ಣಲ್ಲಿ ನೀರು ಹರಿಯಿತು.

“ಆದರೆ ಒಂದು ಮಾತು ಹೇಳುತ್ತೇನೆ. ಸರೋಜಿನಿಯನ್ನು ಹಾಳು ಮಾಡಬೇಡಿರಿ. ಈ ಏರ್ಪಾಡು ನಾನು ಮಾಡಿದ್ದು ಆಕೆಗಾಗಿ, ಆಕೆ ಬದುಕಬೇಕೆಂದು !”

ಸರೋಜಿನಿ ಮೂಕಳಾಗಿ ನಿಂತಿದ್ದಳು. ಕೃತಜ್ಞತೆ ಕಣ್ಣಿನಲ್ಲಿ ತುಳುಕಿ ಹನಿಹನಿಯಾಗಿ ಗಲ್ಲಗಳ ಮೇಲೆ ಬೀಳುತ್ತಿತ್ತು. ರಂಗಸಾನಿ ಸುಮ್ಮನಾಗಿ ಆರೆನಿಮಿಷ ತಡೆದು ಹೇಳಿದಳು :

“ಆಕೆಗೆ ಸುಖವಾಗಲೆಂದೇ ನಾನೆಲ್ಲ ಮಾಡಿದ್ದು. ಆದರೆ....”

“ಆಕೆಯ ಮಾತನ್ನು ನೀವು ಕೇಳಬೇಕಾಗಿತ್ತು....ಆದದ್ದಂತೂ ಆಗಿ ಹೋಯಿತಲ್ಲ....ಇನ್ನಾದರೂ ಆಕೆಯನ್ನು ನಿಮ್ಮ ದಾರಿಗೆ ಎಳೆಯಬೇಡಿರಿ. ಆ ಒಂದು ಮಾತನ್ನು ನಾನು ಬೇಡಿಕೊಳ್ಳುತ್ತೇನೆ. ಇಂದಿಗೆ ಆಕೆಯನ್ನು ನಾನು ಇಲ್ಲಿಂದ ಕರೆದುಕೊಂಡು ಹೋಗಬಹುದಾಗಿತ್ತು. ನಿಮಗಾಗಿ—ನಿಮ್ಮ ದೇಹಸ್ಥಿತಿಗಾಗಿ—ಆಕೆ ಇಲ್ಲಿಯೇ ಉಳಿಯಲಿ. ಅಷ್ಟೆ !”

ರಂಗಸಾನಿ ಸುಮ್ಮನಾಗಿಯೇ ಇದ್ದಳು. ತನ್ನ ಅಪರಾಧ ಆಕೆಗೆ ಆ ಕ್ಷಣಕ್ಕೆ ತಿಳಿದಿದ್ದಿತೇನೊ ! ಮಾಧವ ಹೇಳಿದ :

ಆಕೆಗೆ ಗಂಡಸಿರಬಾರದೆಂದು ನಿಮ್ಮ ವೃತ್ತಿಯ ಪರಂಪರೆಯ ಮೂಲಕ ಬಯಸಿದಿರಿ. ನಿಮ್ಮ ಮಗಳಾಗಿದ್ದುದಕ್ಕೆ ಗಂಡಸಿಲ್ಲದೆಯೂ ಆಕೆಗೆ ಬದುಕಬೇಕಾಯಿತು ! ನೀವು ಆಕೆಗೆ ಕೊಟ್ಟ ಜನ್ಮ ಆಕೆಗೆ ಶಾಪವಾಗಿದೆ! ಆ ಶಾಪಕ್ಕೆ ನಿವೃತ್ತಿಯನ್ನು ಆಕೆ ತನ್ನ ಬರಡು ಜೀವನದಿಂದ ಪಡೆಯಬೇಕು !”

ರಂಗಸಾನಿ ಕೇಳುತ್ತಲೇ ಇದ್ದಳು. ಆಕೆಗೆ ಮಾಧವನ ಮಾತು ಎಷ್ಟು ಅರ್ಥವಾಯಿತೋ! ಸರೋಜಿನಿ ಮಾತ್ರ ತನ್ನ ಬದುಕಿನ ಎದೆಗೆಡಿಸುವ ಬರಡು ಬಯಲನ್ನು ನೆನೆದು ತನ್ನ ಜನ್ಮವನ್ನೇ ಶಪಿಸುವಂತಾದಳು. ಆದರೆ ಮಾಧವ ಸಂಥವನು ತನ್ನ ಬೆನ್ನುಗಾವಲಾಗಿರುವಾಗ ತನಗೆ ಯಾವ ಹೆದರಿಕೆ ಎಂಬ ಸಮಾಧಾನದೊಂದಿಗೆ ಧೈರ್ಯ ತಂದುಕೊಳ್ಳುತ್ತಿದ್ದಳು. ಮಾಧವ ಸರೋಜಿನಿಯರಿಬ್ಬರೂ ಎಷ್ಟೋ ಹೊತ್ತು ಮಾತನಾಡಿದರು. ನಡೆದುದನ್ನೆಲ್ಲ ವಿವರಿಸಿಕೊಂಡು ದುಃಖಪಟ್ಟರು. ಉದಾರಹೃದಯದ ಕನಿಕರ ಆಕೆಗೆ ಸ್ಫೂರ್ತಿಯಾಗಿ ನಿಂತಿತು. ಸಾಯಂಕಾಲ ಹೊರಡುವಾಗ ಸರೋಜಿನಿ ಮಾಧವನನ್ನು ಸಂತೋಷ

ತುಂಬಿದ ಹೃದಯದಿಂದ ಬೀಳ್ಕೊಟ್ಟಳು. ಆದರೆ ಆ ಕಣ್ಣೀರು ಹೊಂಬಿಸಿಲಿನಲ್ಲಿಯ ಹನಿ ಮಳೆಯಂತೆ ಇತ್ತು. ರೈಲಿನಲ್ಲಿ ಒಂದು ವಿಚಾರ ಮಾಧವನನ್ನು ಬೆರಗುಗೊಳಿಸಿತು. ತಾನು ಬೇಡವೆನ್ನುತ್ತಿದ್ದ ಆಸ್ತಿಯನ್ನು ಕೊನೆಗೂ ತೆಗೆದುಕೊಳ್ಳುವಂತಾಯಿತಲ್ಲಾ ಎಂದು. ಉಳಿದ ಆಸ್ತಿಯು ಮಾತು ಹೇಗಿದ್ದರೂ ಸರೋಜಿನಿಯನ್ನು ತಾನು ಬದುಕಿಸಬೇಕಾದರೆ ಆ ತೋಟವನ್ನಾದರೂ ತಾನು ಮೊದಲು ತನ್ನದೆಂದು ಒಪ್ಪಿ, ಆಮೇಲೆ ಬಿಟ್ಟುಕೊಡಬೇಕಾಯಿತು. ಕೊನೆಗೂ ಆ ಶಾಪ ತಗುಲಿತು. ಆದರೆ ಆ ಶಾಪದ ಪರಿಣಾಮವಾಗಿ ಸರೋಜಿನಿಗೆ ಶಾಪನಿವೃತ್ತಿಯಾಗುತ್ತಿದ್ದರೆ ಎಂಥ ದೊಡ್ಡ ಕೆಲಸವಾಯಿತು ! ಹಿಂದಿನವೇ ಮುಂದಿನ ಒಂದು ಆದರ್ಶಕ್ಕೆ ಸಹಾಯವಾದಂತಾಯಿತಲ್ಲ.! ಏನು ವಿಚಿತ್ರ ! ತನ್ನ ತಂದೆ ಆ ತೋಟವನ್ನು ರಂಗನಾನಿಗೆ ಕೊಟ್ಟ. ತಾನಾದರೂ ಅದನ್ನೇ ಸರೋಜಿನಿಗೆ ಕೊಟ್ಟಿದ್ದ. ಅದೇ ತೋಟ ! ಎಂದಿನಿಂದಲೂ ಅಜರಾಮರವಾಗಿ ನಿಂತುದು ! ಕಾಲ ಬೇರೆ, ಪರಿಸ್ಥಿತಿ ಬೇರೆ, ದೃಷ್ಟಿ ಬೇರೆ ! ಎಂದುಕೊಂಡ. ಹಾಗಾದರೆ ಇಂದಿನದೆಂಬುದೇ ಇಲ್ಲವೆ ? ಎಲ್ಲವೂ ಹಿಂದಿನದೆ ? ಬೇರೆಯೇ? ನೋಡುವ ದೃಷ್ಟಿ ಇಂದಿನದನ್ನಾಗಿ, ಬೇರೆಯಾಗಿ ತೋರಿಸುತ್ತಿದೆಯೆ ? ಎಂದು ಕೊಂಡ. ಕಳೆದ ನಾಲ್ಕಾರು ತಿಂಗಳುಗಳಲ್ಲಿ ತನ್ನ ಬದುಕಿನಲ್ಲಿ ನಡೆದ ಸ್ಥಿತ್ಯಂತರಗಳನ್ನು ನೆನೆದು ಬೆರಗಾದ— ಜೀವನದ ಅಗಾಧತೆಯೆದುರು ಅವಾಕ್ಕಾಗಿ ನಿಂತ. ಕತ್ತಲೆಯಲ್ಲಿ ರೈಲು ಮುನ್ನುಗ್ಗುತ್ತಲೇ ಇತ್ತು. ಕಿಟಕಿಯೊಳಗಿಂದ ಇಣಿಕಿ ನೋಡಿದ. ಯಾವುದೊ ಒಂದು ಗುಡ್ಡವನ್ನು ಸುತ್ತಿಕೊಂಡು ರೈಲು ಸಾಗಿತ್ತು. ಹಳಿಗಳ ಗುಂಟ ಉದ್ದವಾಗಿ ಎಂಜಿನ್ನಿನಿಂದ ಹೊರಟ ದೀಪದ ಪ್ರಕಾಶ ಕಣ್ಣು ತಣಿಸುವಂತೆ ಹರಡಿತ್ತು. ಮುಂದೆ ಸಾಗುತ್ತಿರುವಾಗ ಆ ದೀಪದ ಬೆಳಕೇ ವರ್ತಮಾನ ! ಅದೇ ನಿಜ ಎಂದೆನಿಸಿದರೂ ಕತ್ತಲೆಯಲ್ಲಿ ಕಾಣದಂತಾಗಿದ್ದ ಹಿಂದೆ ಸರಿದ ಧಾರಿ ನಿಜವಲ್ಲವೆ ? ದೂರದ ಕತ್ತಲೆಯಲ್ಲಿ ಎದುರಿಗಿದ್ದರೂ ಕಾಣಿಸದ ದೂರದ ದಾರಿ ! ಅದೂ ನಿಜವಲ್ಲವೆ? ಅದೂ ಇದೆ. ಇದೂ ಇದೆ, ಯಾವುದು ನಿಜ ? —ಎಂದು ಮಾಧವ ದಿಗಿಲುಪಡುವಂತಾದ.

ಜೂನ್ ತಿಂಗಳ ಮೂರನೆಯ ವಾರದಲ್ಲಿ ಸರೋಜಿನಿ ಮತ್ತೆ ಕಾಲೇಜು ಸೇರಿದಳು. ಆದರೆ ಮಾಧವನ ಯೋಚನೆ ಮಾತ್ರ ಯಾವ ನಿರ್ಧಾರವನ್ನೂ ಮುಟ್ಟಿರಲಿಲ್ಲ !

